ಶ್ರೀ

ಕನ್ನಡ ಗದ್ಯಾತ್ಮಕ

# ಭಕ್ತಿವಿಜಯ.



ಸಂಪಾದಕ ಹಾಗು ಪ್ರಕಾಶಕ.

ರಾಮಚಂದ್ರ ತ್ರ್ಯಂಬಕ ಕರ್ಪೂರ,

ಆನಂದವನ.



1927

ಎರಡನೆಯ ಆವೃತ್ತಿ

ಬೆಲೆ
೧೪

# ವಿಷಯಾನುಕ್ರಮಣಿಕೆ.





# ಪ್ರಸ್ತಾವನೆ.

ಈ ಪ್ರಾಸಾದಿಕ ಗ್ರಂಥವು ಮಹಾರಾಷ್ಟ್ರ ಭಾಷೆಯಲ್ಲಿ ಓವೀಬದ್ಧವಾಗಿರುತ್ತದೆ. ಅದನ್ನು ಮಹಿಪತಿಬುವಾ ಎಂಬ ಮಹರ್ಷಿಯರು ಭಗವಂತನ ಕೃಪೆಯಿಂದ ಬರೆದಿರುವರು. ಅವರ ದಿವ್ಯ ವಾಣಿಯು ಎಂಥ ಅಭಾವಿಕನಲ್ಲಾದರೂ ಭಕ್ತಿಯೋಗವನ್ನು ತುಂಬದೆ ಇರಲಾರದು. ಇಂಥ ಪ್ರಾಸಾದಿಕ ಗ್ರಂಥದ ಆಸ್ವಾದವು ನಮ್ಮ ಕನ್ನಡ ಬಂಧುಗಳಿಗೆ ಅಂಶತಃ ಆದರೂ ದೊರೆಯಲೆಂದು ಪ್ರಸ್ತುತದ ಗ್ರಂಥವನ್ನು ಸಿದ್ಧಪಡಿಸಿರುತ್ತದೆ. ಇದರಲ್ಲಿ ಇಪ್ಪತ್ತೆರಡು ಜನ ಸತ್ಪುರುಷರ ಕಥೆಗಳು ಬರೆಯಲ್ಪಟ್ಟವೆ.

ಕಲಿಯುಗದಲ್ಲಿ ಯಜ್ಞ-ಯಾಗಾದಿಗಳನ್ನಾಗಲಿ, ಜಪತಪಾದಿಗಳನ್ನಾಗಲಿ ಇಲ್ಲವೆ ಬೇರೊಂದು ವೈದಿಕ ಕರ್ಮವನ್ನಾಗಲಿ, ಯಥಾಸಾಂಗವಾಗಿ ನಡಿಸಲು ಅವಕಾಶವಿರುವದಿಲ್ಲ. ಜನರ ಚಿತ್ತದಲ್ಲಿ ಅಷ್ಟೊಂದು ಸ್ವಸ್ಥತೆಯೂ, ಪರಿಸ್ಥಿತಿಯ ಅನುಕೂಲತೆಯೂ ಇರದ್ದರಿಂದ ಭಗವಂತನು ಕಲಿಯುಗದ ಜನರ ಉದ್ಧಾರಕ್ಕಾಗಿ ಭಕ್ತಿಯೋಗವೇ ಶ್ರೇಷ್ಠವೆಂದು ತಿಳಿದು ಅದನ್ನೇ ಭಗವದ್ಭಕ್ತರ ಮುಖಾಂತರವಾಗಿ ಸರ್ವತ್ರದಲ್ಲಿ ಪ್ರಸಾರಗೊಳಿಸಿರುವನು. ಇದರಲ್ಲಿದ್ದ ಕಥೆಗಳು ಭಗವಂತನ ಪ್ರೇರಣೆಯಿಂದ ಭಕ್ತಿಯೋಗವನ್ನು ಪ್ರಸಾರಗೊಳಿಸಲು ಅವತರಿಸಿದ ಸಜ್ಜನರವೇ ಆಗಿರುತ್ತವೆ. ಭಗವಂತನು ಭಕ್ತಿಗೆ ಹ್ಯಾಗೆ ಒಲಿಯುವನು? ಭಕ್ತಿಯೆಂದರೇನು? ಅದನ್ನು ಪರಮಾತ್ಮನಲ್ಲಿ ಹ್ಯಾಗೆ ಸ್ಥಿರಗೊಳಿಸಬೇಕು. ಭಕ್ತನಿಗೂ ದೇವರಿಗೂ ಯಾವ ಬಗೆಯು ಸಂಬಂಧವಿರುತ್ತದೆ ಎಂಬ ಇವೇ ಮೊದಲಾದ ಸಂಗತಿಗಳು ಈ ಭಕ್ತಿವಿಜಯದಿಂದ ಬಹು ಸುಗಮವಾಗಿ ಹೊಳೆಯುತ್ತವೆ. ವೇದವೇದಾಂತಗಳನ್ನೋದಿ ಬೇಸತ್ತರೂ ದೊರಕದ ಪರಮಾತ್ಮನು ಭಕ್ತಿ

ಯೋಗದಿಂದ ಸುಲಭವಾಗಿ ಸಿಗುವನು. ಈ ಭಕ್ತಿಯೋಗವು ಸರ್ವರಿಗೂ ಸುಲಭಸಾಧ್ಯವಿರುವದು. ಸ್ತ್ರೀಶೂದ್ರಾದಿಗಳು ಕೂಡಾ ಈ ಯೋಗವನ್ನು ನಿರ್ಬಾಧವಾಗಿ ಆಚರಿಸಬಹುದು. ಉಳಿದ ಕರ್ಮಗಳಲ್ಲಿ ಅಧಿಕಾರದ ತಾರತಮ್ಯವೂ ತಕ್ಕ ಜ್ಞಾನವೂ ಅವಶ್ಯವಿರುವಂತೆ ಈ ಭಕ್ತಿಯೋಗಕ್ಕೆ ಯಾವ ತಾರತಮ್ಯಗಳ ಅಥವಾ ಅಧಿಕಾರದ ಅವಶ್ಯಕತೆಯಿರುವದಿಲ್ಲ. ಅಂತೇ ಭಗವಂತನು ಈ ಭಕ್ತಿಯೋಗವನ್ನು ಕೊಂಡಾಡಿರುತ್ತಾನೆ. ಸುಲಭವಾಗಿ ಭಗವಂತನ ಪಾದಾರವಿಂದಗಳನ್ನು ಕಾಣಬೇಕೆನ್ನುವವರು ಈ ಭಕ್ತಿಯೋಗದ ಅವಲಂಬನೆಯನ್ನು ಅವಶ್ಯವಾಗಿ ಮಾಡಬೇಕು. ಈ ಭಕ್ತಿಯೋಗವು ಅವಗತವಾಗಬೇಕಾದರೆ ಶಾಸ್ತ್ರಗಳನ್ನೋದುವ ಕಾರಣವಿಲ್ಲ. ವೇದಪಠಣ ಮಾಡುವ ಕಾರಣವಿಲ್ಲ. ಕೇವಲ ಭಗವಂತನಿಗೆ ಪ್ರಿಯರಾದ ಭಕ್ತರು ಹ್ಯಾಗೆ ಆಚರಿಸಿದರು! ಅವರು ಭಗವಂತನ ಪ್ರೇಮಸಂಪಾದನೆಗೆ ಏನೇನು ಮಾಡಿದರು, ಎಂಬದರ ರಹಸ್ಯವನ್ನು ತಿಳಿದರೆ ಸಾಕು. ಭಕ್ತಿಯೋಗವು ಆಗಲೇ ಕೈವಶವಾಗುತ್ತದೆ.

ರಾಜಮಾರ್ಗದಂತಿರುವ ಈ ಭಕ್ತಿಮಾರ್ಗವನ್ನವಲಂಬಿಸಿ ನಡವ ಮನುಷ್ಯನಿಗೆ ಎಡವುವ ಭಯವಿಲ್ಲ; ಮುಗ್ಗರಿಸುವ ಭಯವಿಲ್ಲ. ಆತನ ಆಯುಷ್ಯವು ಸಮಾಧಾನದಿಂದ ಕಳೆಯಲ್ಪಡುವದು. ಅವನು ನಿರ್ವಿಕಾರ ಮೂರ್ತಿಯಾಗಿ ಭಗವತ್‌ಕೃಪೆಯಿಂದ ಸಾಯುಜ್ಯವನ್ನು ಹೊಂದಿ ಭವಯಾತನೆಯನ್ನು ನೀಗುವನು. ಆದ್ದರಿಂದ ಭಕ್ತಿಯೋಗವನ್ನೇ ಸಮಸ್ತರೂ ಭಜಿಸಬೇಕೆಂದು ಹೇಳಲಾಗುವದು.

| ಶ್ರೀಕ್ಷೇತ್ರ ಆನಂದವನ<br>೧೮-೨-೨೭ | } | ಸಜ್ಜನವಿಧೇಯ<br>ದಾ. ತ್ರ್ಯ. ಕರ್ಪೂರ. |
|---|---|---|

# ಭಕ್ತಿವಿಜಯ.



## ೧ ಶ್ರೀ ತುಲಸೀದಾಸರು.





ಈ ಜಗತ್ತಿನ ಸ್ವರೂಪವನ್ನು ಯಾವನು ಯಥಾರ್ಥವಾಗಿ ತಿಳಿಯು ವರೆಂದು ದೊಡ್ಡವರಾದವರು ಹೇಳಿರಬಹುದು. ನಮ್ಮಂಥ ಪಾಮರರು ಅದರ ನಿಜವನ್ನು ತಿಳಿಯಲಾರದೆ ತೊಳಲುತ್ತಿರುವೆವು. ನಮಗೆ ಒಮ್ಮೆ ಒಂದು ಪದಾರ್ಥವು ಆನಂದದಾಯಕವಾಗಿ ತೋರಿದರೆ ಮತ್ತೊಮ್ಮೆ ಅದೇ ಪದಾರ್ಥವು ದುಃಖದಾಯಕವಾಗಿ ತೋರುವದು; ಕಾರಣ ನಾವು ಒಮ್ಮೆ ಒಂದು ಪದಾರ್ಥವನ್ನು ಹೊಗಳುತ್ತಲೂ, ಮತ್ತೊಮ್ಮೆ ಅದೇ ಪದಾರ್ಥವನ್ನು ತೆಗಳುತ್ತಲೂ ಇರುವೆವು. ಜ್ಞಾನಿಗಳ ಮಾತು ಹಾಗಲ್ಲ. ಜಗತ್ತಿನ ಉದ್ಧಾರಕ್ಕೆ ಕಾರಣನಾದ ಜಗದೀಶನಿಂದ ಹುಟ್ಟಿದ ವಸ್ತುಗಳೆಲ್ಲ ಜಗತ್ತಿನ ಉದ್ಧಾರಕ್ಕೆ ಕಾರಣವಾಗುವವೆಂದು ಅವರು ಮನಗಂಡಿರುವರು. ಅವರ ಈ ಮನಗಾಣಿಕೆಗೆ ಉದಾಹರಣವಾಗಿ ಶ್ರೀ ತುಲಸೀದಾಸರ ಚರಿತ್ರವನ್ನು ಇದರಡಿಯಲ್ಲಿ ಕೊಡುವೆವು.

ಶ್ರೀ ನಾರಾಯಣನು ಕ್ಷೀರಸಾಗರದಲ್ಲಿ ಶಯನಮಾಡಿರುವಾಗ ಉದ್ಧವ, ಅಕ್ರೂರ, ವಾಲ್ಮೀಕಿ, ಧ್ರುವ, ಪ್ರಹ್ಲಾದ, ಶುಕ ಮೊದಲಾದ ಭಕ್ತರು ಬಂದು ಆತನನ್ನು ನಮಿಸಿದರು. ಆಗ ಭಗವಂತನು ವಾಲ್ಮೀಕಿಯನ್ನು ಕುರಿತು—ಭಕ್ತಶ್ರೇಷ್ಠನೇ, ಕಲಿಯುಗದಲ್ಲಿ ಪಾಪವು ಹೆಚ್ಚಾಗುವದು. ನೀನು ಮೃತ್ಯುಲೋಕದಲ್ಲಿ ಅವತಾರಮಾಡಿ ಜನರನ್ನು ಉದ್ಧರಿಸು. ನೀನು ನನ್ನ ಗುಣಾನುವಾದ ಕೀರ್ತನವಾದ ರಾಮಾಯಣವನ್ನು ನಾನು ಅವತರಿಸುವ ಮೊದಲೇ ಸಂಸ್ಕೃತದಲ್ಲಿ ರಚಿಸಿರುತ್ತೀ; ಆದರೆ ಕಲಿಯುಗದಲ್ಲಿ ಅಜ್ಞಾನಿಗಳು ಅದನ್ನು ತಿಳಿಯಲು ಅಸಮರ್ಥರಾಗಿರುವರು. ನೀನು ಮೃತ್ಯುಲೋಕದಲ್ಲಿ ಅವತರಿಸಿ ಆ ರಾಮಾಯಣವನ್ನು

ಪ್ರಾಕೃತಭಾಷೆಯಲ್ಲಿ ರಚಿಸಿ ಲೋಕವನ್ನು ಉದ್ಧರಿಸು, ಎಂದು ಹೇಳಿದನು. ವಾಲ್ಮೀಕಿಯು ಭಕ್ತವತ್ಸಲನ ಈ ಅಪ್ಪಣೆಯನ್ನು ಕೇಳಿ, ನಮಿಸಿ ಅವತಾರ ತಾಳು ವದಕ್ಕಾಗಿ ಭೂಲೋಕಕ್ಕೆ ತೆರಳಿದನು.

ಉತ್ತರ ಹಿಂದುಸ್ಥಾನದೊಳಗೆ ಹಸ್ತಿನಾವತಿಯಲ್ಲಿ ಆತ್ಮಾರಾಮನೆಂಬ ಹೆಸರಿನ ಧರ್ಮಶೀಲನಾದ ಒಬ್ಬ ಕನೋಜಿ ಬ್ರಾಹ್ಮಣನು ಇರುತ್ತಿದ್ದನು. ಆ ಪುಣ್ಯ ಪಾವನನು ಅಕುಬರಬಾದಶಹನ ಸೇವೆಯನ್ನು ಮಾಡಿ ಆತನ ಅನುಗ್ರಹವನ್ನು ಸಂಪಾದಿಸಿದ್ದನು, ಆ ಚತುರನಾದ ಆತ್ಮಾರಾಮನ ಹೊಟ್ಟೆಯಲ್ಲಿಯೇ ಶ್ರೀ ವಾಲ್ಮೀಕಿ ಋಷಿಗಳು ಅವತಾರತಾಳಿದರು. ದ್ವಿಜೋತ್ತಮನು ಶಿಶುವಿಗೆ ಜಾತ ಕರ್ಮ ನಾಮಕರಣಗಳನ್ನು ಮಾಡಿ, ತುಲಸೀದಾಸನೆಂದು ಹೆಸರನ್ನಿಟ್ಟನು. ಶಿಶುವು ದಿನದಿನಕ್ಕೆ ಬೆಳೆಯುತ್ತಿತ್ತು. ತಾಯಿ-ತಂದೆಗಳು ಮಮತೆಯಿಂದ ಕೂಸಿನ ಬಾಲಲೀಲೆಗಳನ್ನು ನೋಡಿ ಸಂತೋಷಪಡುತ್ತಿದ್ದರು. ಹುಡುಗನು ಎಂಟು ವರ್ಷದವನಾಗಲು ಉಪನಯನಮಾಡಿ ಹನ್ನೆರಡು ವರ್ಷಗಳವರೆಗೆ ಆತನನ್ನು ಬ್ರಹ್ಮಚರ್ಯ ವ್ರತದಲ್ಲಿಟ್ಟರು. ಸ್ನಾನ-ಸಂಧ್ಯಾವಂದನ-ವೇದಾಧ್ಯಯನಗಳು ವಿಧ್ಯುಕ್ತವಾಗಿ ಮಾಡಿಸಲ್ಪಟ್ಟವು. ಮಗನು ಪ್ರಬುದ್ಧನಾದ ಮೇಲೆ ತಾಯಿತಂದೆ ಗಳು ಮಮತಾದೇವಿ ಎಂಬಾಕೆಯನ್ನು ವಧುವಾಗಿ ನಿಯಮಿಸಿ, ಸಮಾರಂಭ ದಿಂದ ಆತನ ಲಗ್ನ ಮಾಡಿದರು.

ತಾರುಣ್ಯವು ಪ್ರಾಪ್ತವಾಗಲು, ಮಮತಾ-ತುಲಸೀದಾಸರು ಒಬ್ಬರನ್ನೊಬ್ಬರು ವಿಶೇಷವಾಗಿ ಪ್ರೀತಿಸ ತೊಡಗಿದರು. ಅವರಿಗೆ ಪರಸ್ಪರರ ವಿಯೋಗವು ದುಸ್ಸಹವಾಯಿತು. ದಿವ್ಯ ವಸ್ತ್ರಾಲಂಕಾರಗಳಿಂದಲೂ, ಕೇಶರ, ಕಸ್ತೂರಿ, ಚಂದನ ಮೊದಲಾದ ಸುಗಂಧದ್ರವ್ಯಗಳಿಂದಲೂ ಒಗೆಬಗೆಯ ಸುವಾಸನೆಯ ಪುಷ್ಪಗಳಿಂದಲೂ ಸುಗಂಧಯುಕ್ತ ತಾಂಬೂಲದಿಂದಲೂ ದಿನಾಲು ಭೋಗಿಸು ತ್ತಿದ್ದರು. ಪತಿವ್ರತೆಯಾದ ಮಮತಾದೇವಿಯು ಪತಿಸೇವೆಯಲ್ಲಿ ತತ್ಪರಳಾಗಿ ದ್ದಳು. ಹೀಗೆ ಸುಗುಣೆಯೂ ಸುಂದರಿಯೂ ಆದ ಸತಿಯಲ್ಲಿ ತುಳಸೀದಾಸನ ಚಿತ್ತವು ನಟ್ಟು ಹೋಯಿತು ಒಂದು ಅರಗಳಿಗೆಯಾದರೂ ಆತನು ಹೆಂಡತಿ ಯನ್ನು ಅಗಲಿ ಸಮಾಧಾನದಿಂದ ಇರದಾದನು. ಮಮತಾದೇವಿಯಾದರೂ ಪತಿ ಯನ್ನು ಅಗಲಲು ಇಚ್ಛಿಸುತ್ತಿದ್ದಿಲ್ಲ; ಆ ಪತಿವ್ರತೆಯು ಪತಿಯ ಮನಸ್ಸನ್ನು ನೋಯಿಸಲಾರದೆ ತವರಮನೆಗೆ ಎಂದೂ ಹೋಗಿದ್ದಿಲ್ಲ; ಆ ತುಳಸೀದಾಸನಾ ದರೂ ಆಕೆಯನ್ನು ಕಳಿಸಿಕೊಡಲಿಲ್ಲ.

ಹೀಗಿರಲು ಒಂದಾನೊಂದು ದಿನ ಅಕಬರ ಬಾದಶಹನು ಯುದ್ಧಕ್ಕೆ ಹೊರಟನು. ತುಳಸೀದಾಸನು ಕಷ್ಟದಿಂದ ಆತನನ್ನು ಹಿಂಬಾಲಿಸಿದನು. ಈ ಸಂಧಿಯನ್ನು ಸಾಧಿಸಿ ಮಮತಾದೇವಿಯ ತವರಮನೆಯವರು ಆಕೆಯ ತಾಯಿಗೆ ಜಡ್ಡು ಬಹಳವಾಗಿರುತ್ತದೆಂಬ ನೆವದಿಂದ ಆಕೆಯನ್ನು ಕರೆಯ ಬಂದರು. ತಾಯಿಯ ಬೇನೆಯ ವರ್ತಮಾನವನ್ನು ಕೇಳಿ ಮಮತಾದೇವಿಗೆ ಬಹಳ ದುಃಖವಾಯಿತು. ಆಕೆಯು ಶೋಕಮಾಡತೊಡಗಲು, ಕರೆಯ ಬಂದವರು—ತಂಗೀ, ನಿನ್ನ ತಾಯಿಗೆ ಜಡ್ಡಾದದ್ದು ನಿಜವಲ್ಲ. ನಿನ್ನ ಗಂಡನು ನಿನ್ನನ್ನು ಕಳಿಸುವದಿಲ್ಲವೆಂದು ತಿಳಿದು ಸುಳ್ಳೇ ಜಡ್ಡಾಗಿರುವದೆಂದು ಹೇಳಿರುತ್ತೇವೆ. ನಿನ್ನ ಭೆಟ್ಟಿಯಿಲ್ಲದೆ ಬಹಳ ದಿವಸಗಳಾದದ್ದರಿಂದ ನಿನ್ನ ತಾಯಿಯು ಚಡಪಡಿಸುತ್ತಾಳೆ; ಭೆಟ್ಟಿಯನ್ನು ಕೊಟ್ಟು ಸಮಾಧಾನಗೊಳಿಸು ಎಂದು ಹೇಳಿದರು. ಅದನ್ನು ಕೇಳಿ ಮಮತಾದೇವಿಯು—ಹ್ಯಾಗೂ ಪತಿಯು ಬಾದಶಹನ ಸಂಗಡ ಹೋಗಿದ್ದಾನೆ. ಆತನು ಬರುವದರೊಳಗೆ ತಾಯಿಯನ್ನು ಸಮಾಧಾನಗೊಳಿಸಿ ಬರುವದು ಅಯೋಗ್ಯವಾಗಲಿಕ್ಕಿಲ್ಲ, ಎಂದು ಯೋಚಿಸಿ ಅತ್ತೆ-ಮಾವಂದಿರ ಅಪ್ಪಣೆ ಪಡೆದು ತವರಮನೆಗೆ ಹೋದಳು.

ಇತ್ತ ತುಲಸೀದಾಸನು ಅದೇ ದಿನ ರಾತ್ರಿ ಊರಿಗೆ ಬಂದು ತಾಯಿಯ ಮುಖದಿಂದ ಎಲ್ಲ ವೃತ್ತಾಂತವನ್ನು ಕೇಳಿ ಅಸಮಾಧಾನಪಟ್ಟನು. ಪ್ರಿಯೇ, ನನ್ನನ್ನು ಅಗಲಿ ಹ್ಯಾಗೆ ಹೋದೆ, ಎಂದು ತಳಮಳಿಸುತ್ತ ಹಾಸಿಗೆಯಮೇಲೆ ಬಿದ್ದುಕೊಂಡನು. ನಿದ್ದೆ ಬರಲೊಲ್ಲದು. ಕಡೆಗೆ ಆತನು ವಿರಹವನ್ನು ತಾಳಲಾರದೆ ಹಾಸಿಗೆಯಿಂದ ಎದ್ದು ರಾತ್ರಿ ಐದು ಹರದಾರಿಯನ್ನು ನಡೆದು ಹೋಗಿ ಆರು ತಾಸು ರಾತ್ರಿಯ ಹೊತ್ತಿಗೆ ಹೆಂಡತಿಯ ಮನೆಯ ಬಾಗಿಲಿಗೆ ತಲುಪಿದನು. ಮನೆಯ ಬಾಗಿಲು ಇಕ್ಕಿತ್ತು. ಮನೆಯವರೆಲ್ಲ ನಿದ್ದೆ ಮಾಡುತ್ತಿದ್ದರು. ವಿರಹಸಂತಪ್ತನಾದ ತುಲಸೀದಾಸನು ಆತುರದಿಂದ ಅತ್ತಿತ್ತ ನೋಡುತ್ತಿರಲು, ಒಂದು ಹಾವು ಕಿಡಿಕೆಯೊಳಗೆ ಇಳಿಬಿದ್ದಿತ್ತು. ತುಳಸೀದಾಸನು ಹಾವು ಕಡದೀತೆಂಬ ಎಚ್ಚರವಿಲ್ಲದೆ, ಅದರ ಆಧಾರದಿಂದ ಮೇಲಕ್ಕೇರಿ ಕಿಟಕಿಯೊಳಗಿಂದ [illegible] ಮಂದಿರವನ್ನು ಪ್ರವೇಶಿಸಿದನು. ಕೂಡಲೇ ದಾಸಿಯರು ಎಚ್ಚತ್ತು ತುಳಸೀದಾಸನನ್ನು ನೋಡಿದರು. ಅಷ್ಟರಲ್ಲಿ ಸುಂದರಿಯಾದ ಮಮತಾದೇವಿಯೂ ಎಚ್ಚತ್ತು ಪತಿಯನ್ನು ನೋಡಿ ಆಶ್ಚರ್ಯಪಟ್ಟು ಎದ್ದು ಕುಳಿತುಕೊಂಡಳು. ಆಗ ತುಳಸೀದಾಸನು—ಸುಂದರಿಯೇ, ನನ್ನನ್ನು ಬಿಟ್ಟು ಯಾಕೆ ಬಂದೆ? ನಿನ್ನ ಸಲುವಾಗಿ ಐದು ಹರದಾರಿ ನಡೆದು ಬಂದಿದ್ದೇನೆ, ಎಂದು ಹೇಳಿದನು.

ಪತಿಯಾಡಿದ ಮಾತುಗಳನ್ನು ಕೇಳಿ ಮಮತಾದೇವಿಯು—ಪ್ರಾಣಪ್ರಿಯನೇ, ಯಮುನಾನದಿಯು ತುಂಬಿ ಹರಿಯುತ್ತಿರುವದು, ಅದನ್ನು ಹ್ಯಾಗೆ ದಾಟಿ ಬಂದಿ? ನನ್ನ ಮಂದಿರದಲ್ಲಿ ನಿನ್ನ ಪ್ರವೇಶವು ಹ್ಯಾಗಾಯಿತು? ಇದಾವದೂ ನನಗೆ ತಿಳಿಯಬೊಲ್ಲದು, ಅನ್ನಲು ತುಳಸೀದಾಸನು—ಪ್ರಿಯೇ, ಯಮುನೆಯನ್ನು ಈಸಿ ಪಾರಾಗುವದೇನು ಅಸಾಧ್ಯವು? ನಿನ್ನಲ್ಲಿ ನನ್ನ ಪ್ರೇಮವು ವಿಶೇಷವಾಗಿದ್ದುದರಿಂದ ಕಿಡಕಿಯೊಳಗಿಂದ ನೀನು ಹಗ್ಗವನ್ನು ಇಳಿಯಬಿಟ್ಟಿದ್ದೆ; ಆ ಹಗ್ಗದ ಸಹಾಯದಿಂದ ಹತ್ತಿ ಮೇಲಕ್ಕೆ ಬಂದೆನು, ಎಂದು ಹೇಳಿದನು. ಅದಕ್ಕೆ ಆ ಪತಿವ್ರತೆಯು—ನಾನೆಲ್ಲಿ ಹಗ್ಗವನ್ನು ಇಳಿಬಿಟ್ಟಿದ್ದೆನು! ಸುಳ್ಳಾಡುವದೇಕೆ? ಹಗ್ಗವೆಲ್ಲಿರುವದು ನನಗೆ ತೋರಿಸಬೇಕು ಅನ್ನಲು ದೀಪವನ್ನು ಹಿಡಕೊಂಡು ಎಲ್ಲರೂ ಕಿಡಿಕೆಯ ಬಳಿಯಲ್ಲಿ ಬಂದರು. ಆಗ ಭಯಂಕರವಾದ ಸರ್ಪವು ಜೋತಾಡುತ್ತಿದ್ದುದು ಅವರ ಕಣ್ಣಿಗೆ ಬಿದ್ದಿತು. ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು.

ಮಮತಾದೇವಿಯು ಪತಿಯ ಕೈಯನ್ನು ಹಿಡಕೊಂಡು ಮಂದಿರದಲ್ಲಿ ಕರೆದೊಯ್ದು—ಪ್ರಾಣನಾಥರೇ, ನೀವು ಬಹು ಜಾಣರೆನಿಸಿಕೊಳ್ಳುತ್ತೀರಿ; ಆದರೆ ನಿಮ್ಮಲ್ಲಿ ವಿವೇಕವಿಲ್ಲ! ಹಗಲು ರಾತ್ರಿ ನಿಮ್ಮನ್ನು ಅಜ್ಞಾನವು ಮುಚ್ಚಿಕೊಂಡಿರುತ್ತದೆ. ತಾಯಿ-ತಂದೆ, ಬಂಧು-ಬಳಗ, ಸರ್ವಸಂಪತ್ತು, ಧನ ಇವುಗಳನ್ನು ಬಿಟ್ಟು ನನ್ನ ಸಲುವಾಗಿ ಒಬ್ಬರೇ ಈ ಭಯಂಕರ ರಾತ್ರಿಯಲ್ಲಿ ಬಂದ ಕಾರಣವೇನು? ಮಹಾಸರ್ಪವು ಕಚ್ಚಿದ್ದರೆ ಜೀವಕ್ಕೆ ಎರವಾಗುತ್ತಿದ್ದಿರಲ್ಲ! ಸಂಸಾರವು ಅನಿತ್ಯವೆಂಬದು ಸರ್ವಥಾ ನಿಮಗೆ ತಿಳಿಯಬಾರದೇ! ನನ್ನನ್ನು ಬಯಸಿ ಮಧ್ಯರಾತ್ರಿಯಲ್ಲಿ ಓಡುತ್ತ ಬಂದಿರಿ. ಆದರೆ ಸ್ತ್ರೀಯರ ಸಂಗತಿಯಿಂದ ಬಹು ಜನರು ನಾಶ ಹೊಂದಿದ್ದನ್ನು ಅರಿಯರಾ! ಅಹಲ್ಯೆಯ ಸೌಂದರ್ಯವನ್ನು ನೋಡಿದ ಇಂದ್ರನ ಗತಿಯು ಏನಾಯಿತು? ಸೀತಾದೇವಿಯ ಅಭಿಲಾಷದಿಂದ ರಾವಣನು ನಾಶಹೊಂದಲಿಲ್ಲವೇ? ದೀಪದ ಜ್ಯೋತಿಯನ್ನು ನೋಡಿ ಪತಂಗವು ನಾಶಹೊಂದುವಂತೆ ಸ್ತ್ರೀಯರ ಸೌಂದರ್ಯವನ್ನು ನೋಡಿ ಪುರುಷರು ನಾಶಹೊಂದಿರುತ್ತಾರೆ. ಭ್ರಾಂತರು ಹೃದಯದಲ್ಲಿರುವ ಆತ್ಮಾರಾಮನನ್ನು ತಿಳಿಯದೆ ವಿಷಯೋಚ್ಛೆಯನ್ನು ಧರಿಸುತ್ತಾರೆ. ಎಲ್ಲರ ವಿಶ್ರಾಂತಿಸ್ಥಾನವಾದ ಶ್ರೀರಾಮನನ್ನು ಅಧಮರು ತಿಳಿಯುವದಿಲ್ಲ. ಅವರಿಗೆ ಹೆಂಡಿರು ಮಕ್ಕಳೂ ದ್ರವ್ಯವೂ ತಮ್ಮ ಜೀವಕ್ಕಿಂತಲೂ ಹೆಚ್ಚಿನವಾಗಿ ತೋರುತ್ತವೆ. ಅದರಂತೆ ಅವರು ಶ್ರೀಹರಿಯ ಚರಣದಲ್ಲಿ ವಿಶ್ವಾಸವನ್ನಿಟ್ಟರೆ ಜನ್ಮವು ಸಾರ್ಥಕವಾಗುವದು, ಎಂದು ಹೇಳಿದಳು.

ಹೆಂಡತಿಯು ಆಡಿದ ಮಾತುಗಳನ್ನು ಕೇಳಿ ತುಳಸೀದಾಸರಿಗೆ ಪಶ್ಚಾತ್ತಾಪ ಪ್ರಾಯಿತು. ಅವರು ಹೆಂಡತಿಗೆ ನಮಸ್ಕಾರ ಮಾಡಿ—ತಾಯಿ, ನೀನು ನುಡಿದದ್ದು ನಿಜವು. ಕೂಸು ಕೆಂಡವನ್ನು ಹಿಡಿಯುವಾಗ ತಾಯಿಯು ಕಾಪಾಡುವಂತೆ ನೀನು ನನ್ನ ಮೇಲೆ ಬಹಳ ಉಪಕಾರ ಮಾಡಿದೆ. ನಾನು ವ್ಯರ್ಥವಾಗಿ ಅಡ್ಡ ಹಾವಿಗೆ ಬಿದ್ದು ಅಡವಿಯ ಪಾಲಾಗುತ್ತಿದ್ದೆನು, ಎಂದು ನುಡಿದು ಅಲ್ಲಿಂದ ಹೊರಟರು. ಆ ಭಗವದ್ಭಕ್ತರು ಪೂರ್ವಜನ್ಮವೃತ್ತವನ್ನು ನೆನಪು ಮಾಡಿಕೊಂಡು—ನಾನು ವಿಷ್ಣುಭಕ್ತನಾದ ವಾಲ್ಮೀಕಿಯಲ್ಲವೇ? ಜನರನ್ನು ಭಕ್ತಿಮಾರ್ಗಕ್ಕೆ ಹಚ್ಚುವದಕ್ಕಾಗಿ ಶ್ರೀರಾಮಚರಿತ್ರದ ಗಾಯನ ಮಾಡಲು ಭಗವಂತನ ಅಪ್ಪಣೆಯಿಂದ ಈಗ ತುಲಸೀದಾಸನಾಗಿ ಹುಟ್ಟಿರುತ್ತೇನೆ. ನನ್ನ ಕರ್ತವ್ಯವನ್ನು ಮರೆತು, ನಾಶಹೊಂದುವ ವಿಷಯಸುಖವನ್ನು ಭೋಗಿಸುತ್ತ ಕುಳಿತುಬಿಟ್ಟಿದ್ದೆನು, ಎಂದು ಪಶ್ಚಾತ್ತಾಪಪಡುತ್ತ ಆನಂದವನಕ್ಕೆ ಹೋದರು. ಅಲ್ಲಿ ಅವರು ಪ್ರತಿದಿನ ಭಾಗೀರಥಿಯ ಸ್ನಾನವನ್ನು ಮಾಡಿ ಅನ್ನವನ್ನೂ ಹಣ್ಣುಹಂಪಲಗಳನ್ನೂ ಬಿಟ್ಟು ಉದರಿದ ಎಲೆಗಳನ್ನು ತಿನ್ನುತ್ತ ಕಠಿಣವಾದ ಅನುಷ್ಠಾನವನ್ನು ಆರಂಭಿಸಿದರು. ಅವರು ಭಕ್ತಿಯಿಂದ ಶ್ರೀರಾಮನ ಚರಣಗಳನ್ನು ಧ್ಯಾನಿಸುತ್ತಿದ್ದರು; ಎಲೈ ಅಯೋಧ್ಯಾಪತಿಯಾದ ಜಾನಕೀಜೀವನನೇ, ನನಗೆ ದರ್ಶನವನ್ನು ಕೊಡು ಎಂದು ಪ್ರಾರ್ಥಿಸುತ್ತಿದ್ದರು. ದಿನಾಲು ಅವರು ಬಹಿರ್ದೆಸೆಗೆ ಅರಣ್ಯಕ್ಕೆ ಹೋಗಿ ಅಲ್ಲಿ ಶೌಚವಿಧಿಯು ತೀರಿದ ಮೇಲೆ ಉಳಿದ ನೀರನ್ನು ಒಂದು ಗಿಡದ ಬುಡದಲ್ಲಿ ಚಲ್ಲುವ ಕ್ರಮವನ್ನಿಟ್ಟಿದ್ದರು.

ಹೀಗೆ ತುಲಸೀದಾಸರು ಹನ್ನೆರಡು ವರ್ಷ ಏಕಪ್ರಕಾರವಾಗಿ ಅನುಷ್ಠಾನವನ್ನು ಮಾಡಿ, ಬಿಟ್ಟುಬಿಡದೆ ಹಗಲು-ರಾತ್ರಿ ಶ್ರೀರಾಮ ನಾಮವನ್ನು ಧ್ಯಾನಿಸಿದರು. ಒಂದಾನೊಂದು ದಿನ ಅವರು ಶೌಚಕ್ಕಾಗಿ ಅರಣ್ಯಕ್ಕೆ ಹೋಗಿ, ಉಳಿದ ನೀರನ್ನು ಗಿಡದ ಬುಡಕ್ಕೆ ಸುರುವಲು, ಭಯಂಕರವಾದ ಒಂದು ಪಿಶಾಚವು ಎರಡೂ ಕೈಗಳನ್ನು ಜೋಡಿಸಿಕೊಂಡು ಅವರ ಎದುರಿಗೆ ನಿಂತುಕೊಂಡು—ಎಲೈ ಭಗವದ್ಭಕ್ತನೇ, ನಾನು ನಿನಗೆ ಪ್ರಸನ್ನನಾಗಿದ್ದೇನೆ. ಏನಾದರೂ ವರವನ್ನು ಬೇಡುವದಿದ್ದರೆ ಬೇಡು, ಕೊಡುವೆನು, ಎಂದಿತು. ಅದಕ್ಕೆ ತುಲಸೀದಾಸರು—ನೀನು ಯಾರು? ನನಗೆ ಪ್ರಸನ್ನನಾದ ಕಾರಣವೇನು? ಇದನ್ನು ತಿಳಿಸು, ಎಂದರು. ಆಗ ಪಿಶಾಚವು—ನಾನು ಪಿಶಾಚವು; ಬಹು ದಿವಸದಿಂದ ಈ ಗಿಡದಲ್ಲಿರುತ್ತೇನೆ. ದಿನಾಲು ನೀವು ಕೊಡುವ ಉದಕವನ್ನು ಕುಡಿಯುತ್ತಿರುತ್ತೇನೆ. ಕೆರೆ, ಬಾವಿ,

ನದಿ, ಸಮುದ್ರ ಇವುಗಳಲ್ಲಿಯ ನೀರನ್ನು ಕುಡಿಯಲಿಕ್ಕೆ ನಮಗೆ ಅಧಿಕಾರವಿಲ್ಲವು. ಹನ್ನೆರಡು ವರ್ಷಗಳವರೆಗೆ ನೀವು ನನಗೆ ಉದಕದಾನ ಮಾಡಿ, ನನ್ನ ನೀರಡಿಕೆಯನ್ನು ಶಾಂತಮಾಡಿರುತ್ತೀರಿ. ಈ ಉಪಕಾರಕ್ಕಾಗಿ ನೀವು ಏನಾದರೂ ಅಪ್ಪಣೆ ಮಾಡಿದರೆ ಅದರಂತೆ ನಾನು ನಡೆದುಕೊಳ್ಳುವೆನು. ಎನ್ನಲು, ತುಳಸೀದಾಸರು— ನಾನು ಶ್ರೀರಾಮ ದರ್ಶನವನ್ನು ಇಚ್ಛಿಸಿ ಅನುಷ್ಠಾನವನ್ನು ಮಾಡುತ್ತಿರಲು, ಭೂತ ದರ್ಶನವಾಯಿತಲ್ಲ! ಇದು ಸತ್ಸಂಗವನ್ನು ಬಯಸುವವನಿಗೆ ನಿಂದಕನ ಸಹವಾಸದಂತೆಯೂ, ಕಲ್ಪವೃಕ್ಷದ ನೆರಳನ್ನು ಬಯಸುವವನಿಗೆ ಈಚಲ ಗಿಡಗಳ ನೆರಳು ಪ್ರಾಪ್ತವಾದಂತೆಯೂ ಆಯಿತು!

ತುಳಸೀದಾಸರ ಈ ಔದಾಸೀನ್ಯದ ಮಾತುಗಳನ್ನು ಕೇಳಿ ಭೂತವು—ಭಗವದ್ಭಕ್ತನೇ, ನೀನು ಬಹು ಚತುರನೂ, ದೂರದರ್ಶಿಯೂ ಇದ್ದಂತೆ ತೋರುತ್ತದೆ. ನನ್ನ ಯೋಗ್ಯತೆಗೆ ತಕ್ಕದ್ದನ್ನು ಬೇಡಲಿಕ್ಕೆ ಸಂಕೋಚಮಾಡಿಕೊಳ್ಳಬಾರದು. ಕಾರ್ಯವನ್ನು ಸಾಧಿಸಿಕೊಳ್ಳುವವರು ಸಣ್ಣವರು ದೊಡ್ಡವರು ಎಂಬ ಭೇದವನ್ನು ಮನಸ್ಸಿನಲ್ಲಿ ಎಣಿಸಲಾಗದು. ಕಾಡಿಯಖಾರವನ್ನು ತಿರಸ್ಕರಿಸಿದರೆ, ಮುಸಿಯಲ್ಲಿ ಬಂಗಾರವು ಕರಗಲಾರದು. ಈಚಲವೆಂದು ಕಸಬೊರಿಗೆಯನ್ನು ನಿರಾಕರಿಸಿದರೆ ಮನೆಯೊಳಗಿನ ಕಸವು ಹೋಗಲಾರದು. ಕಾರ್ಯಸಾಧನದಲ್ಲಿ ಪಂಡಿತರು ನೀಚ ಪದಾರ್ಥವನ್ನೂ ಗ್ರಹಿಸಿರುತ್ತಾರೆ. ಅನ್ನಲು ತುಲಸೀದಾಸರು—ಭೂತವೇ, ನೀನು ಪ್ರಸನ್ನನಾಗಿರುತ್ತೇನೆಂದು ಹೇಳುವೆಯಲ್ಲ? ಪ್ರಸನ್ನನಾಗಿದ್ದರೆ ಇಷ್ಟು ಮಾಡು. ನನಗೆ ಇನ್ನೊಂದರ ಇಚ್ಛೆಯಿಲ್ಲ; ಶ್ರೀರಾಮನ ದರ್ಶನವನ್ನು ಮಾಡಿಸು, ಎಂದು ಹೇಳಿದರು. ಶ್ರೀರಾಮನಾಮವು ಕಿವಿಗೆ ಬಿದ್ದ ಕೂಡಲೆ ಪಿಶಾಚವು ಅಂಜುತ್ತಂಜುತ್ತ ಹಿಂದಕ್ಕೆ ಸರಿದು ಮಹಾತ್ಮನೇ, ಈ ಎರಡಕ್ಷರಗಳನ್ನು ಮುಖದಿಂದ ಉಚ್ಚರಿಸಿದರೆ, ನಾನು ನಾಶವಾಗಿ ಹೋದೇನು! ನೀವು ಯಾವಾತನ ದರ್ಶನವನ್ನು ಇಚ್ಛಿಸುವಿರೋ ಆತನ ಭಕ್ತನಾದ ಮಾರುತಿಯ ದರ್ಶನವನ್ನು ನಿಮಗೆ ನಿಶ್ಚಯವಾಗಿ ಮಾಡಿಸುವೆನು. ಎಂದು ಹೇಳಲು, ತುಲಸೀದಾಸರು—ಪಿಶಾಚವೇ, ಆ ವಾಯುಸುತನು ಎಲ್ಲಿ ಇರುವನು? ಆತನನ್ನು ಬೇಗನೆ ತೋರಿಸಬಾರದೇ? ನನ್ನ ಬಯಕೆಯನ್ನು ಆ ಅಂಜನೇಯನು ಪೂರ್ಣಮಾಡುವನು, ಎಂದು ಹೇಳಿದರು. ಅದಕ್ಕೆ ಪಿಶಾಚವು—ನೀವು ದಿನಾಲು ಪುರಾಣವನ್ನು ಕೇಳುತ್ತಿರುವಿರಲ್ಲ? ಅಲ್ಲಿಗೆ ದಿನಾಲು ಒಬ್ಬ ವೃದ್ಧ ಬ್ರಾಹ್ಮಣನು ಬರುತ್ತಿರುವನು. ಆತನೇ ಮಾರುತಿಯು. ಆತನ ಗುರುತುಗಳನ್ನು ಹೇಳುವೆನು ಕೇಳಿರಿ.

ಆತನು ಎಲ್ಲರಿಗಿಂತ ಮೊದಲು ಬಂದು, ಎಲ್ಲರೂ ಹೋದಮೇಲೆ ಹೋಗುವನು. ಕೈಯಲ್ಲಿ ಕೋಲು ಹಿಡಿದಿರುವನು. ತಲೆಯಲ್ಲಿ ಟೊಪ್ಪಿಗೆ ಹಾಕಿರುವನು. ಜೀರ್ಣ ವಸ್ತ್ರವನ್ನು ಹೊದ್ದು, ಲಂಗೋಟಿಯನ್ನು ಹಾಕಿಕೊಂಡಿರುವನು. ಈ ಲಕ್ಷಣ ವುಳ್ಳ ಬ್ರಾಹ್ಮಣನನ್ನೇ ವಾನರಶ್ರೇಷ್ಠನಾದ ಮಾರುತಿಯೆಂದು ತಿಳಿದುಕೊಳ್ಳಿರಿ, ಎಂದು ಹೇಳಿ ಭೂತವು ಅದೃಶ್ಯವಾಯಿತು.

ಭೂತವು ಆಡಿದ ಮಾತುಗಳನ್ನು ಕೇಳಿ ತುಲಸೀದಾಸರು ಆಶ್ರಮಕ್ಕೆ ತಿರುಗಿದರು. ಮರುದಿವಸ ಅವರು ಸ್ನಾನಮಾಡಿ, ನಿತ್ಯದ ಅನುಷ್ಠಾನವನ್ನು ತೀರಿಸಿಕೊಂಡು ತೀವ್ರವಾಗಿ ಪುರಾಣ ನಡೆದಲ್ಲಿಗೆ ಹೋದರು. ಅಲ್ಲಿ ಅಕಸ್ಮಾತ್ತಾಗಿ ವೃದ್ಧ ಬ್ರಾಹ್ಮಣನು ದೃಷ್ಟಿಗೆ ಬಿದ್ದನು. ಪಿಶಾಚವು ಹೇಳಿದ ಗುರುತುಗಳೆಲ್ಲ ಆತನಲ್ಲಿ ತೋರಿದವು. ಪುರಾಣವು ಮುಗಿದಮೇಲೆ ಜನರೆಲ್ಲ ಮನೆಗೆ ಹೋದರು. ಆ ವೃದ್ಧ ಬ್ರಾಹ್ಮಣನು ಎಲ್ಲರಿಗಿಂತ ಹಿಂದಿನಿಂದ ಸುಮ್ಮನೆ ಹೊರಟುಹೋಗಹತ್ತಿದನು. ತುಲಸೀದಾಸರು ಲಗಬಗೆಯಿಂದ ಆತನ ಬೆನ್ನಹತ್ತಿದರು. ಮುಂದೆ ವೇಗದಿಂದ ಸಾಗಿರುವ ವೃದ್ಧ ಬ್ರಾಹ್ಮಣರೂಪಿಯಾದ ಮಾರುತಿಯು, ಹಿಂದಿನಿಂದ ಆತುರದಿಂದ ಬೆನ್ನಹತ್ತಿರುವ ತುಲಸೀದಾಸರು. ಹೀಗೆ ಮಾರ್ಗಕ್ರಮಣವನ್ನು ಮಾಡುತ್ತಿರಲು, ಏಕಾಂತಸ್ಥಳವು ಪ್ರಾಪ್ತವಾಯಿತು. ಆಗ ತುಲಸೀದಾಸರು ಬ್ರಾಹ್ಮಣನ ಕಾಲುಗಳನ್ನು ಗಟ್ಟಿಯಾಗಿ ಹಿಡಕೊಂಡು—ಸಮರ್ಥನೇ, ನನ್ನ ಮೇಲೆ ಅನುಗ್ರಹವನ್ನು ಮಾಡು, ಎನ್ನಲು, ಬ್ರಾಹ್ಮಣನು—ಎಲೋ ನೀನು ಯಾರು? ನನ್ನನ್ನು ಮುಟ್ಟಿದ ಕಾರಣವೇನು? ಬಡವನಾದ ನನ್ನ ಕಾಲನ್ನು ಯಾಕೆ ಹಿಡಿದುಕೊಂಡೆ? ನನ್ನಿಂದ ನಿನಗಾಗುವ ಪ್ರಯೋಜನವೇನು? ಎಂದು ಕೇಳಿದನು. ಅದಕ್ಕೆ ತುಲಸೀದಾಸರು—ಸ್ವಾಮೀ, ನೀನು ರಾಮಭಕ್ತನಾದ ಮಾರುತಿಯಿರುತ್ತೀ ಎಂದು ನುಡಿದು ಮತ್ತೆ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. ಆಗ ಹನುಮಂತನು ಮನಸ್ಸಿನಲ್ಲಿ ವಿಚಾರಮಾಡಿ, ಈತನು ವಾಲ್ಮೀಕಿ ಮುನಿಯೆಂದು ತಿಳಿದು, ಪ್ರೇಮಾಲಿಂಗನವನ್ನಿತ್ತನು; ಮತ್ತು ಆತನಿಗೆ—ಎಲೈ ತುಲಸೀದಾಸನೇ, ನಿನಗೆ ನಾನು ಪ್ರಸನ್ನನಾಗಿರುತ್ತೇನೆ. ನಿನ್ನ ಬಯಕೆಯನ್ನು ಅರುಹು, ಎಂದು ಹೇಳಿದನು. ಅದಕ್ಕೆ ತುಲಸೀದಾಸರು—ನನಗೆ ಶ್ರೀರಾಮ ದರ್ಶನದ ಹೊರತು ಮತ್ತೊಂದರ ಬಯಕೆಯಿಲ್ಲ. ಅದನ್ನಷ್ಟು ಅವಶ್ಯವಾಗಿ ಮಾಡಿಸಬೇಕು, ಎಂದು ಪ್ರಾರ್ಥಿಸಲು, ಮಾರುತಿಯು ಯಾಕಾಗಲೊಲ್ಲದೆಂದು ಹೇಳಿ ಅದೃಶ್ಯನಾದನು.

ತರುವಾಯ ಭಕ್ತಶ್ರೇಷ್ಠನಾದ ಮಾರುತಿಯು ಶ್ರೀರಾಮನನ್ನು ಕುರಿತು—ಎಲೈ ಕರುಣಾಳುವೇ, ನನ್ನದೊಂದು ಮಾತನ್ನು ಲಾಲಿಸಬೇಕು. ತುಲಸೀದಾಸನು ನಿನ್ನ ಭಕ್ತನಾಗಿರುವನು. ಆತನು ಸಾಕ್ಷಾತ್ ವಾಲ್ಮೀಕಿಯ ಅವತಾರವಾಗಿದ್ದಾನೆ. ಆತನಿಗೆ ಪ್ರತ್ಯಕ್ಷ ಸಗುಣರೂಪ ದರ್ಶನವನ್ನು ಕೊಡ ಬೇಕು. ಅನ್ನಲು ಶ್ರೀರಾಮನು ಯಾಕಾಗಲೊಲ್ಲದೆಂದು ಹೇಳಿ ಎಲ್ಲ ವಾನರ ಸೈನ್ಯವನ್ನು ತಕ್ಕೊಂಡು ತುಲಸೀದಾಸರ ಆಶ್ರಮದ ಬಳಿಯಿಂದಲೇ ತೀವ್ರವಾಗಿ ಸಾಗಿದನು. ಆದರೆ ತುಲಸೀದಾಸರು ಪ್ರಭುವನ್ನು ತಿಳಿಯಲು ಸಮರ್ಥರಾಗಲಿಲ್ಲ. ಯಾವನೋ ಒಬ್ಬ ಯವನಭೂಪತಿಯು ಸೈನ್ಯದೊಂದಿಗೆ ಸಾಗಿರುವನೆಂದು ಭಾವಿ ಸಿದರು. ಅವರು ಬಲಿಷ್ಠವಾದ ವಾನರ ಸೈನ್ಯದ ಗುರುತು ಹಿಡಿಯಲಿಲ್ಲ. ಪ್ರಭು ವಾದ ಶ್ರೀರಾಮನ ಚರಣಕ್ಕೆರಗಲಿಲ್ಲ. ಅಷ್ಟರಲ್ಲಿ ಹಿಂದಿನಿಂದ ಮಾರುತಿಯು ಬಂದು ತುಳಸೀದಾಸರಿಗೆ—ನಿನ್ನ ಹೇತುವನ್ನು ಶ್ರೀರಘುಪತಿಯು ಪೂರ್ಣ ಮಾಡಿದನಲ್ಲವೆ? ಎಂದು ಕೇಳಲು, ತುಳಸೀದಾಸರು ನನಗೆ ರಘುಪತಿಯ ದರ್ಶನವಾಗಲಿಲ್ಲೆಂದು ಹೇಳಿದರು. ಅದಕ್ಕೆ ಮಾರುತಿಯು—ಇದೇ ಈಗ ಶ್ರೀರಾಮನು ವಾನರ ಸೈನ್ಯದೊಡನೆ ನಿನ್ನ ಆಶ್ರಮದ ಬಳಿಯಿಂದಲೇ ಹೋದ ನಲ್ಲ! ಎಂದು ಕೇಳಲು, ತುಳಸೀದಾಸರು—ಅಹುದು, ಒಬ್ಬ ಯವನರಾಜನು ನನ್ನ ಆಶ್ರಮದ ಬಳಿಯಿಂದ ಹೋದದ್ದು ಸತ್ಯವು. ಆದರೆ ಶ್ರೀರಾಮಚಂದ್ರನೆಲ್ಲಿ ರುವನು? ಎಂದು ಕೇಳಿದರು. ಅದಕ್ಕೆ ಹನೂಮಂತನು—ಪುಣ್ಯವಂತನೇ, ಇದೇನು ಮಾಡಿದೆ? ಮನೆಗೆ ಕಾಮಧೇನುವು ನಡೆದು ಬಂದಿರಲು, ಕುರಿಯೆಂದು ತಿಳಿದು ಅದನ್ನು ಹೊರದೂಡಿದ ಹಾಗಾಯಿತಲ್ಲ! ಅನ್ನಲು ತುಳಸೀದಾಸರು—ಸ್ವಾಮೀ, ಮಾರುತೀ ನೀನೂ ಅನ್ಯಾಯವಾಗಿ ನನ್ನ ಮೇಲೆಯೇ ತಪ್ಪು ಹೊರಿ ಸುವೆಯಲ್ಲ! ವಿಶ್ವಂಭರನಾದ ಚಕ್ರಪಾಣಿಯು ವಿಶ್ವವನ್ನೆಲ್ಲ ವ್ಯಾಪಿಸಿದ್ದು ನನಗೆ ಕಾಣದಿರುವ ಕಾರಣವೇನು? ಅಲಂಕಾರಗಳು ಬಂಗಾರದವಾಗಿದ್ದರೂ ತಿಳಿಗೇಡಿ ಗಳು ಅವಕ್ಕೆ ಬಂಗಾರವೆನ್ನುವದಿಲ್ಲ. ಅದರಂತೆ ಶ್ರೀರಾಮೋಪಾಸಕರು ರಾಮನ ಸ್ವರೂಪಗಳು ಹಲವು ಇರುತ್ತವೆಂದು ಎಣಿಸುತ್ತಿದ್ದರೂ ನನಗೆ ಆ ಹಲವು ರೂಪ ಗಳು ಬೇಕಾಗಿರುವದಿಲ್ಲ. ಅಯೋಧ್ಯಾವಾಸಿಯೂ, ಜಾನಕೀಜೀವನನೂ ಆದ ಪ್ರಭುವು ಕೈಯಲ್ಲಿ ಧನುರ್ಬಾಣಗಳನ್ನು ಸ್ವೀಕರಿಸಿರುವಂತೆ ಶ್ರೀವಾಲ್ಮೀಕಿಯು ವರ್ಣಿಸಿರುವನಲ್ಲ! ನನಗೆ ಆ ರೂಪವನ್ನು ತೋರಿಸಬೇಕು. ಎಂದು ಹೇಳಿದರು.

ತುಳಸೀದಾಸರ ಮಾತುಗಳನ್ನು ಕೇಳಿ ಮಾರುತಿಯು ನಕ್ಕು—ಭಕ್ತಶ್ರೇಷ್ಠನೇ, ನಿನ್ನ ಮನೋರಥವು ಪೂರ್ಣವಾಗುವದು; ಚಿಂತೆ ಮಾಡಬೇಡ ಎಂದು ಹೇಳಿ, ಅದೃಶ್ಯನಾಗಿ ಶ್ರೀರಾಮಮೂರ್ತಿಯನ್ನು ಮನಸ್ಸಿನಲ್ಲಿ ತಂದು ಪ್ರೀತಿಯಿಂದ—ಅಯೋಧ್ಯಾವಾಸಿಯಾದ ಸೀತಾರಾಮನೇ, ರಾವಣಾಂತಕನೇ, ಧನುರ್ಧಾರಿಯೇ, ಪತಿತಪಾವನನೇ ಜಯವುಳ್ಳವನಾಗು, ಎಂದು ಸ್ತೋತ್ರ ಮಾಡತೊಡಗಿದನು. ಶ್ರೀರಾಮಚಂದ್ರನು ಮಾರುತಿಯ ಸ್ತೋತ್ರಕ್ಕೆ ಮೆಚ್ಚಿ ಪ್ರತ್ಯಕ್ಷನಾಗಿ—ಎಲೈ ಮಾರುತಿಯೇ, ಅದೇನು ಕಾರಣ ಇಂದು ಬಹಳವಾಗಿ ನನ್ನನ್ನು ಸ್ತವಿಸತೊಡಗಿರುತ್ತೀ? ನಿನ್ನ ಮನಸ್ಸಿನ ಬಯಕೆ ಯಾವದು? ಎನ್ನಲು, ಮಾರುತಿಯು—ಭಕ್ತರ ಬಯಕೆಗಳನ್ನು ಪೂರೈಸುವ ಪ್ರಭುವೇ, ಮೇಘಶ್ಯಾಮನಾದ ನೀನು ಸಗುಣರೂಪದಿಂದ ತುಳಸೀದಾಸರಿಗೆ ದರ್ಶನಕೊಡಬೇಕು, ಎಂದು ಪ್ರಾರ್ಥಿಸಿದನು. ಅದಕ್ಕೆ ಸೀತಾಪತಿಯು—ಎಲೈ ಮಾರುತಿಯೇ, ಕಲಿಯುಗದಲ್ಲಿ ಸಾಕ್ಷಾದ್ದರ್ಶನವು ಹ್ಯಾಗಾಗುವದು? ಅನ್ನಲು, ಮಾರುತಿಯು—ಪ್ರಭುವೇ ಜನರನ್ನು ಭಕ್ತಿಮಾರ್ಗಕ್ಕೆ ಹಚ್ಚುವದಕ್ಕಾಗಿ ಭೂಲೋಕದಲ್ಲಿ ಅವತರಿಸಬೇಕೆಂದು ವಾಲ್ಮೀಕಿಗೆ ನೀನೇ ಅಪ್ಪಣೆ ಕೊಡಲಿಲ್ಲವೆ? ಆ ವಾಲ್ಮೀಕಿಯೇ ತುಳಸೀದಾಸನಾಗಿ ಭೂಲೋಕದಲ್ಲಿ ಅವತರಿಸಿದ್ದಾನೆ. ಅನುಗ್ರಹಾರ್ಥವಾಗಿ ಆತನಿಗೆ ಸಗುಣರೂಪದರ್ಶನವನ್ನು ಕೊಡಬೇಕು, ಎಂದು ಹೇಳಿಕೊಳ್ಳಲು ಶ್ರೀರಾಮಚಂದ್ರನು—ಭಕ್ತಶ್ರೇಷ್ಠನೇ, ನೀನು ಹೇಳಿದಂತೆ ಕೇಳುವೆನು. ಕಲ್ಪಾಂತದಲ್ಲಿಯಾದರೂ ನಿನ್ನ ಮಾತನ್ನು ಮೀರಲಾರೆನು, ಎಂದು ಹೇಳಿ ಪ್ರಭುವು ಶ್ರೀರಾಮರೂಪವನ್ನು ತಾಳಿ ಸೀತಾ ಲಕ್ಷ್ಮಣರೊಡನೆ ಮಾರುತಿಯ ಸಂಗಡ ಹೊರಟನು.

ಮಾರುತಿಯು ಮುಂಚಿತವಾಗಿ ತುಲಸೀದಾಸರಿಗೆ ದರ್ಶನಕೊಟ್ಟು—ತುಲಸೀದಾಸನೇ, ಇಂದು ರಘುಪತಿಯು ನಿನ್ನ ಮನೋರಥವನ್ನು ಪೂರ್ಣಮಾಡುವನು ಎಂದು ಹೇಳಿದನು. ಅದನ್ನು ಕೇಳಿ ತುಲಸೀದಾಸರು ಸಂತೋಷಬಡುತ್ತಿರಲು ರಾಮಮೂರ್ತಿಯು ಸೀತಾ-ಲಕ್ಷ್ಮಣರೊಡನೆ ಎದುರಿಗೆ ಕಂಗೊಳಿಸ ಹತ್ತಿತು. ಆಗ ತುಲಸೀದಾಸರಿಗಾದ ಆನಂದವನ್ನು ವರ್ಣಿಸಲಸಾಧ್ಯವು. ಶ್ರೀರಾಮಚಂದ್ರನು ಲಕಲಕನೇ ಹೊಳೆಯುವ ಕಿರೀಟದಿಂದಲೂ, ಪೀತಾಂಬರದಿಂದಲೂ, ಕಪ್ಪುಮೋಡದಂಥ ಮೈಬಣ್ಣದಿಂದಲೂ ಮನೋಹರವಾಗಿ ಒಪ್ಪುತ್ತಿದ್ದನು. ಆತನು ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿದ್ದನು. ವಾಮಭಾಗದಲ್ಲಿ ಸೀತಾಮಾತೆಯು ಒಪ್ಪುತ್ತಿದ್ದಳು. ಲಕ್ಷ್ಮಣನು ವಿನಯದಿಂದ ನಿಂತುಕೊಂಡಿ

ದ್ದನು. ಆಗ ತುಲಸೀದಾಸರು ಪ್ರಭುವಿಗೆ ಅನನ್ಯಭಾವದಿಂದ ಸಾಷ್ಟಾಂಗವೆರಗಲು ಕೃಪಾಲುವಾದ ಸೀತಾಪತಿಯು ವಾತ್ಸಲ್ಯದಿಂದ ಆತನನ್ನು ಆಲಿಂಗಿಸಿದನು. ಆಗ ಮಾರುತಿಯು ತುಲಸೀದಾಸರಿಗೆ—ಎಲೈ ಭಕ್ತಾಗ್ರಗಣ್ಯನೇ, ನೀನು ಬಹು ಸುದೈವಶಾಲಿಯು; ಶ್ರೀರಾಮಸ್ವರೂಪವನ್ನು ಕಣ್ಮುಟ್ಟ ನೋಡಿದೆ! ಹಿಂದಕ್ಕೆ ನೀನು ವರ್ಣಿಸಿಧ ಲೀಲೆಗಳನ್ನು ಅಜ್ಞಜನರ ಸಲುವಾಗಿ ಮತ್ತೆ ಈಗ ವರ್ಣಿಸು. ಯೋಗಯಾಗ ವೇದಾಧ್ಯಯನಗಳು ಕಲಿಯುಗದಲ್ಲಿ ಸಾಧನಗಳಲ್ಲವು; ಆದ್ದರಿಂದ ನಾಮಮಹಿಮೆಯನ್ನು ವರ್ಣಿಸಿ ಜನರನ್ನು ಭಕ್ತಿಮಾರ್ಗಕ್ಕೆ ಹಚ್ಚು ಎಂದು ಹೇಳಿ ಶ್ರೀರಾಮಚಂದ್ರನಿಗೆ—ಈ ಭಕ್ತನ ತಲೆಯ ಮೇಲೆ ವರದಹಸ್ತವನ್ನು ಇಡಬೇಕೆಂದು ಹೇಳಿದನು. ಆಗ ಶ್ರೀರಾಮಚಂದ್ರನು ಮಾರುತಿಯ ವಚನದಂತೆ ತುಲಸೀದಾಸನ ಮಸ್ತಕದ ಮೇಲೆ ವರದಹಸ್ತವನ್ನಿಟ್ಟು ಅದೃಶ್ಯನಾದನು.

ಈ ಮೇರೆಗೆ ತುಲಸೀದಾಸರು ಶ್ರೀಮಾರುತಿಯ ಯೋಗದಿಂದ ಭಗವದನುಗ್ರಹವನ್ನು ಸಂಪಾದಿಸಿ ವಾರಣಾಸಿಗೆ ಹೋದರು. ಅಲ್ಲಿಯ ಜನರು ತುಲಸೀದಾಸರ ಕೀರ್ತನವನ್ನು ಕೇಳಿ, ಭಕ್ತಿಯುಳ್ಳವರಾಗಿ ಅವರಿಗೆ ಒಂದು ಮಠವನ್ನು ಕಟ್ಟಿಸಿಕೊಟ್ಟರು. ಹಲವರು ಧನಿಕರು ತುಲಸೀದಾಸರ ಅನುಗ್ರಹವನ್ನು ಸಂಪಾದಿಸಿ, ಹಲವು ಒಡವೆಗಳನ್ನು ಅವರ ಆಶ್ರಮಕ್ಕೆ ಕೊಡುತ್ತಿದ್ದರು, ತುಲಸೀದಾಸರ ಪಂಗ್ತಿಯಲ್ಲಿ ದಿನಾಲು ಸಹಸ್ರಾವಧಿ ಬ್ರಾಹ್ಮಣರ ಭೋಜನವಾಗುತ್ತಿತ್ತು. ಅವರ ಬಳಿಗೆ ಯಾಚಕರು ಅನ್ನಾರ್ಥಿಗಳಾಗಿ ಬಂದು ಸಂತೋಷಬಡುತ್ತಿದ್ದರು. ಬರಬರುತ್ತ ತುಲಸೀದಾಸರ ಕೀರ್ತಿಯು ಹಬ್ಬಿತು. ಜನರು ಅಪಾರವಾದ ದ್ರವ್ಯವನ್ನು ಕೊಡತೊಡಗಿದರು. ಬೆಳ್ಳಿ ಬಂಗಾರದ ಪಾತ್ರೆಗಳು ಹೆಚ್ಚಿದವು. ಈ ಮೇರೆಗೆ ಸತ್ಪುರುಷರಾದ ತುಲಸೀದಾಸರಿಗೆ ಹಲವು ಒಡವೆಗಳನ್ನು ಕೊಟ್ಟು ಸಜ್ಜನರು ತೃಪ್ತರಾಗುವಂತೆ ಹೆಂಡರು ಮಕ್ಕಳ ರಕ್ಷಣೆಯಲ್ಲಿ ತೊಡಗಿದ್ದ ಪಾಮರರು ಆ ಪಾತ್ರೆಗಳನ್ನು ಕದ್ದೊಯ್ದು ತೃಪ್ತರಾಗುತ್ತಿದ್ದರು. ತುಲಸೀದಾಸರು ಪಾತ್ರ ಯಾವದನ್ನೂ ಹಚ್ಚಿಕೊಳ್ಳುತ್ತಿದ್ದಿಲ್ಲ. ಜನರು ತಮಗೆ ಏನಾದರೂ ತಂದು ಕೊಟ್ಟರೆ ಅವರಿಗೆ ಆನಂದವಾಗುತ್ತಿದ್ದಿಲ್ಲ. ಅದರಂತೆ ತಮ್ಮಲ್ಲಿದ್ದ ಒಡವೆಗಳನ್ನು ಅನ್ಯರು ಒಯ್ದರೆ ದುಃಖವಾಗುತ್ತಿದ್ದಿಲ್ಲ. ಅವರು ನಿಂದಾಸ್ತುತಿಗಳನ್ನೂ, ಲಾಭಾಲಾಭಗಳನ್ನೂ ಸಮನಾಗಿ ಎಣಿಸುತ್ತಿದ್ದರು. ಅವರನ್ನು ಸುಖ ದುಃಖಗಳು ತಗಲುತ್ತಿದ್ದಿಲ್ಲ. ಅವರು ಆಕಾಶದಂತೆ ನಿರ್ಲಿಪ್ತರಾಗಿದ್ದರು. ಬ್ರಾಹ್ಮಣಭೋಜನವಾದ ಮೇಲೆ ತುಲಸೀದಾಸರ ಮಠದಲ್ಲಿ ಹರಿಕೀರ್ತನವಾಗು

ತ್ತಿತ್ತು. ನಾಮೋಚ್ಚಾರ ಮಾಡುವದಕ್ಕಾಗಿ ಭಾವಿಕರು ಬಹುಜನರು ಬರುತ್ತಿದ್ದರು. ಕೀರ್ತನವಾದ ಮೇಲೆ ಮಠದ ಎಲ್ಲ ಬಾಗಿಲಗಳನ್ನು ತೆರೆದು ಜನರು ನಿದ್ದೆ ಮಾಡುತ್ತಿದ್ದರು. ಅವರು ಸ್ವಪ್ನದಲ್ಲಿಯೂ, ಸುಷುಪ್ತಿಯಲ್ಲಿಯೂ, ಜಾಗರಣದಲ್ಲಿಯೂ ಶ್ರೀರಾಮಚರಣವನ್ನು ಸ್ಮರಿಸುತ್ತಿದ್ದರು.

ಮಠದಲ್ಲಿರುವ ಈ ವ್ಯವಸ್ಥೆಯನ್ನು ನೋಡಿ ಇಬ್ಬರು ಕಳ್ಳರು—ಇಲ್ಲಿ ಏನು ಮಾಡಿದರೂ ಕೇಳುವವರಿಲ್ಲ; ಬೆಳ್ಳಿ-ಬಂಗಾರದ ಪಾತ್ರೆಗಳು ಯಥೇಚ್ಛವಾಗಿವೆ. ಇಂದು ರಾತ್ರಿ ನಾವು ಹೊರುವಷ್ಟು ಪಾತ್ರೆಗಳನ್ನು ಯಾರ ಅಂಜಿಕೆಯಿಲ್ಲದೆ ಹೊತ್ತುಕೊಂಡು ಹೋಗೋಣ, ಎಂದು ಯೋಚಿಸಿ ಕೀರ್ತನವಾಗಿ ಜನರು ಮಲಗಿದ ಮೇಲೆ ಮಠದಲ್ಲಿ ಕಳವಿಗೆ ಹೊರಟರು. ಅವರು ಪಾತ್ರೆಗಳನ್ನು ಕೂಡ ಹಾಕಿ ಮೊಟ್ಟೆಯ ಕಟ್ಟಿ ಹೊತ್ತುಕೊಂಡು ದಕ್ಷಿಣದಿಕ್ಕಿನ ಬಾಗಿಲಿನಿಂದ ಹೊರಬೀಳ ಹೋದರು. ಅಲ್ಲಿ ಇಬ್ಬರು ಧನುರ್ಧಾರಿಗಳು ಕಾಯುತ್ತ ಕುಳಿತಿದ್ದರು. ಕಳ್ಳರು ಅವರನ್ನು ನೋಡಿ ಆಶ್ಚರ್ಯಪಟ್ಟು, ಇಲ್ಲಿ ಕಾವಲುಗಾರರು ಯಾರೂ ಇದ್ದಿಲ್ಲ, ಇವರೆಲ್ಲಿಂದ ಬಂದರೆಂದು ಯೋಚಿಸುತ್ತ ನಾಚಿಕೆಯಿಂದ ಹಿಂದಕ್ಕೆ ತಿರುಗಿ ಉತ್ತರ ಬಾಗಿಲಿನಿಂದ ಹೊರಬೀಳ ಹೋದರು. ಅಲ್ಲಿಯೂ ಹಾಗೇ ಕಾವಲುಗಾರರು ಕಾಯುತ್ತ ಕುಳಿತಿದ್ದರು. ಅವರನ್ನು ನೋಡಿ ಕಳ್ಳರು ಮತ್ತಿಷ್ಟು ನಾಚಿ ಮುಂದುಗಾಣದೆ ವಿಚಾರ ಮಾಡುತ್ತ ಇನ್ನು ಸ್ವಲ್ಪ ವೇಳೆಯಲ್ಲಿ ಕಾವಲುಗಾರರು ಹೋಗಬಹುದು. ಆ ಮೇಲೆ ಪಾತ್ರೆಗಳನ್ನು ಮನೆಗೆ ಒಯ್ಯೋಣ, ಎಂದು ಹಾದಿಯು ನೋಡುತ್ತ ಸುಮ್ಮನೆ ಕುಳಿತುಕೊಂಡರು. ತಾಸೆರಡು ತಾಸು ಆದ ಮೇಲೆ ಹೋಗಿ ನೋಡಲು ಕಾವಲುಗಾರರು ಕಾಯುತ್ತಲೇ ಕುಳಿತಿದ್ದರು. ನೋಡಿದಾಗೆಲ್ಲ ಕಾವಲುಗಾರರು ದೃಷ್ಟಿಗೆ ಬೀಳುತ್ತಲೇ ಇದ್ದರು. ಆಗ ಕಳ್ಳರು ಅಂಜಿ ಪಾತ್ರೆಗಳನ್ನು ಬಿಟ್ಟುಕೊಟ್ಟು ಬರಿಗೈಯಿಂದ ಹೊರಗೆ ಹೋಗತೊಡಗಿದರು; ಆದರೂ ಕಾವಲುಗಾರರು ಅವರನ್ನು ಹೊರಗೆ ಬಿಡಲಿಲ್ಲ. ಕಳ್ಳರು ಚಿಂತೆ ಮಾಡತೊಡಗಿದರು. ಅಷ್ಟರಲ್ಲಿ ಬೆಳಗಾಗುತ್ತ ಬಂತು ಅರುಣೋದಯವಾಯಿತು. ಕಕ್ಕಡದ ಆರತಿಗೆ ಭಕ್ತರೆಲ್ಲರು ಎದ್ದರು, ಪ್ರಾತಃಸ್ಮರಣವಾಯಿತು, ತುಲಸೀದಾಸರು ಹೊರಗೆ ಬಂದರು. ಆಗ ಇಬ್ಬರೂ ಕಳ್ಳರು ಅವರ ಚರಣಕ್ಕೆರಗಿ ತಮ್ಮ ತಮ್ಮ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡರು ಅವರ ಕಂಠವು ಸದ್ಗದಿತವಾಯಿತು. ಆಗ ತುಲಸೀದಾಸರು ನೀವು ಯಾರು

ಎಂದು ಕೇಳಲು, ಕಳ್ಳರು—ಸ್ವಾಮೀ, ನಾವು ಕಳ್ಳರು, ನಿಮ್ಮ ಮಠದೊಳಗಿನ ಪಾತ್ರೆಗಳನ್ನು ಕದಿಯಬೇಕೆಂದು ಬಂದು ಮೊಟ್ಟೆಗಳನ್ನು ಕಟ್ಟಿಕೊಂಡು ಹೊರಬೀಳುತ್ತಿದ್ದೆವು; ಆದರೆ ಬಾಗಿಲು ಕಾಯುವವರು ನಮ್ಮನ್ನು ಬಿಡದ್ದರಿಂದ ಇಲ್ಲಿ ಕುಳಿತುಕೊಂಡಿದ್ದೇವೆ. ದಯಮಾಡಿ ನಮ್ಮ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು. ನೀವು ಪರಮೋದಾರರಾದ ರಾಮಭಕ್ತರಾದ್ದರಿಂದ ರಾತ್ರಿ ಮುಕ್ತದ್ವಾರಪಟ್ಟಿರುವಿರೆಂದು ತಿಳಿದು ಅಂಜಿಕೆಯಿಲ್ಲದೆ ನಿಮ್ಮ ಮಠದಲ್ಲಿ ಕಳವು ಮಾಡಿದೆವು. ಈ ಮಾತು ಸತ್ಯವು, ಎಂದು ನುಡಿದರು.

ಕಳ್ಳರ ಮಾತುಗಳನ್ನು ಕೇಳಿ ತುಳಸೀದಾಸರು ತಮ್ಮ ಶಿಷ್ಯರಿಗೆ—ನನ್ನನ್ನು ಕೇಳದೆ ಬಾಗಿಲಲ್ಲಿ ಕಾವಲು ಇಟ್ಟವರು ಯಾರು? ಜನರು ಯಾವ ಒಡವೆಯನ್ನು ಕೊಟ್ಟರೂ, ಇದ್ದ ಒಡವೆಗಳಲ್ಲಿ ಯಾವದೊಂದನ್ನು ಒಯ್ದರೂ ಸಮಾನವೆಂದು ತಿಳಿದು ಪ್ರೀತಿಯಿಂದ ರಾಮಭಜನೆಯನ್ನು ಮಾಡುತ್ತ ಇರ್ರಿ, ಎಂದು ಹೇಳಿದ್ದಿಲ್ಲವೇ? ಎಂದು ಕೇಳಲು, ಶಿಷ್ಯರು—ಸ್ವಾಮಿ, ತಮ್ಮ ಪಾದಸಾಕ್ಷಿಯಾಗಿ ಹೇಳುತ್ತೇವೆ. ಬಾಗಿಲು ಕಾಯುವವರು ಯಾರಿರುವರೆಂಬದು ನಮಗೆ ಗೊತ್ತಿರುವದಿಲ್ಲ, ಎಂದು ಹೇಳಿದರು. ಅದಕ್ಕೆ ಕಳ್ಳರು—ಸ್ವಾಮಿ, ಕಾವಲುಗಾರರ ಗುರುತನ್ನು ನಾವು ಹೇಳುತ್ತೇವೆ, ಕೇಳೋಣವಾಗಬೇಕು. ಅವರು ನೀಲಮೇಘನೋಪಾದಿಯಲ್ಲಿ ಕಪ್ಪು ಬಣ್ಣದವರಾಗಿದ್ದರು. ಕಿರೀಟ ಕುಂಡಲಗಳನ್ನು ಧರಿಸಿದ್ದರು. ಪೀತಾಂಬರವನ್ನುಟ್ಟಿದ್ದರು. ಕೈಯಲ್ಲಿ ಧನುಸ್ಸನ್ನು ಹಿಡಿದಿದ್ದರು. ಇನ್ನೂ ಬಾಗಿಲಲ್ಲಿ ಕುಳಿತಿದ್ದಾರೆ. ಬೇಕಾದರೆ ನೋಡಬರ್ರಿ, ಎಂದು ಹೇಳಿದರು. ಕಳ್ಳರ ಈ ಮಾತುಗಳನ್ನು ಕೇಳಿ ಎಲ್ಲರೂ ಆಶ್ಚರ್ಯಪಟ್ಟು ಕಾವಲುಗಾರರನ್ನು ನೋಡಲಿಕ್ಕೆ ಬಾಗಿಲಿಗೆ ಹೋದರು. ಅಲ್ಲಿ ಯಾರೂ ಇದ್ದಿಲ್ಲ. ಅದನ್ನು ನೋಡಿ ಅವರಿಗೆ ಮತ್ತಿಷ್ಟು ಆಶ್ಚರ್ಯವಾಯಿತು. ರಾಮಭಕ್ತರಾದ ತುಲಸೀದಾಸರು ಕಳ್ಳರು ಹೇಳಿದ ಲಕ್ಷಣಗಳ ಮೇಲಿಂದ ಕಾವಲುಗಾರರು ರಾಮ-ಲಕ್ಷ್ಮಣರೆಂದು ತಿಳಕೊಂಡರು. ಅವರು ಅಸಮಾಧಾನದಿಂದ—ಅಯ್ಯೋ ರಾಮ-ಲಕ್ಷ್ಮಣರು ದ್ವಾರಪಾಲಕರಾದರಲ್ಲ! ತೀರ್ಥ-ಯಾತ್ರೆಗಳಿಗೂ, ಯೋಗ-ಯಾಗಗಳಿಗೂ ಪ್ರಾಪ್ತನಾಗದ ಶ್ರೀರಾಮನನ್ನು ನಾನು ದ್ವಾರಪಾಲಕನಾಗಮಾಡಿದೆನಲ್ಲ! ಏಕಪತ್ನೀವ್ರತಸ್ಥನೂ, ಏಕಬಾಣನೂ, ಏಕವಚನನೂ ಆದ ರಾವಣಾಂತಕನು ದ್ವಾರಪಾಲಕನಾದನೇ! ಯಾವನು ಚರಣಸ್ಪರ್ಶಮಾತ್ರದಿಂದ ಅಹಲ್ಯೆಯನ್ನು ಉದ್ಧರಿಸಿದನೋ, ಯಾವನು ಕೈವಲ್ಯವನ್ನು ಕೊಡುವದರಲ್ಲಿ ಅತ್ಯುದಾರನೋ ಆ ಶ್ರೀ-

ರಾಮನು ದ್ವಾರಪಾಲಕನಾದನೇ! ರಘುವೀರನೇ, ಜಯಶೀಲನಾಗು! ಪರಮ ಪುರುಷನೇ, ಅತ್ಯುದಾರನೇ, ಶಂಭುಪ್ರಿಯನೇ, ವಿಶ್ವೋದ್ಧಾರಕನೇ, ಸ್ವಲ್ಪ ಹಾಲು ಬೇಡಿದ ಮಾತ್ರದಿಂದ ಉಪಮನ್ಯುವಿಗೆ ಕ್ಷೀರಸಾಗರವನ್ನು ಕೊಟ್ಟಿ ಯಲ್ಲ! ತಂದೆಯಮೇಲೆ ಸಿಟ್ಟಾಗಿ ಹೋಗುವ ಧ್ರುವ ಬಾಲಕನಿಗೆ ಕೌತುಕದಿಂದ ಸ್ಥಿರವಾದ ಪದವಿಯನ್ನು ಕೊಟ್ಟಿಯಲ್ಲ! ಇದೇನಾಶ್ಚರ್ಯವು? ಪ್ರೀತಿಪಾತ್ರನಾದ ವಿಭೀಷಣನಿಗೆ ಸುವರ್ಣಲಂಕೆಯನ್ನು ಕೊಟ್ಟ ನೀನು ಕಳ್ಳರು ಬಂಗಾರದ ಪಾತ್ರೆ ಯನ್ನು ಒಯ್ಯುವಾಗ ಕೃಪಣನಾದೆಯಾ?

ಈ ಮೇರೆಗೆ ತುಲಸೀದಾಸರು ಭಗವಂತನನ್ನು ಪ್ರಾರ್ಥಿಸಿ ಕಳ್ಳರಿಗೆ:— ನಿಮಗೆ ಬೇಕಾದ ಒಡವೆಗಳನ್ನು ಈಗ ಮನೆಗೆ ತಕ್ಕೊಂಡು ಹೋಗಿರಿ. ಮನ ಸ್ಸಿನಲ್ಲಿ ಸಂಕೋಚ ಮಾಡಿಕೊಳ್ಳಬೇಡಿರಿ. ಅನ್ನಲು, ಕಳ್ಳರು ಅವರ ಚರಣ ಕ್ಕೆರಗಿ—ಮಹಾತ್ಮರೇ, ನಮ್ಮ ತಲೆಯಮೇಲೆ ಅಭಯ ಹಸ್ತವನ್ನಿಟ್ಟು ಕೃಪೆಮಾ ಡಿರಿ. ದುರ್ಜನರೂ, ಪತಿತರೂ ಆದ ನಾವು ಅಜ್ಞಾನದಲ್ಲಿ ಮುಳುಗಿದ್ದೆವು. ಅಂಥವರಿಗೆ ನಿಮ್ಮ ಸಹವಾಸದಿಂದ ರಾಮದರ್ಶನವಾಯಿತು. ಸ್ಪರ್ಶಮಾಡಿದ ಮಾತ್ರದಿಂದ ಲೋಹವನ್ನು ಬಂಗಾರ ಮಾಡುವದು ಪರಶುಗಲ್ಲಿನ ಹುಟ್ಟುಗುಣ ವಿರುವಂತೆ ತಾಪಪಡಿಸಿದ ಮಾತ್ರದಿಂದ ರಾಮದರ್ಶನವನ್ನು ಮಾಡಿಸುವದು ನಿಮ್ಮ ಹುಟ್ಟುಗುಣವಾಗಿರುವದು. ಸೂರ್ಯೋದಯದಿಂದ ಕತ್ತಲೆಯು ದೂರಾ ಗುವಂತೆ ನಿಮ್ಮ ದರ್ಶನಮಾತ್ರದಿಂದ ನಮ್ಮ ಅಜ್ಞಾನವು ದೂರವಾಯಿತು, ಎಂದು ಪ್ರಾರ್ಥಿಸಿದರು. ಅದಕ್ಕೆ ತುಲಸೀದಾಸರು—ನೀವು ಬಹು ಭಾಗ್ಯವಂ ತರು. ಆಯಾಸಪಡದಿದ್ದರೂ ನಿಮಗೆ ಶ್ರೀರಾಮನು ದರ್ಶನವನ್ನು ಕೊಟ್ಟನು. ಅಡವಿಯಲ್ಲಿ ಸೊಪ್ಪು ಹುಡುಕುವಾಗ ಅಮೃತಬಳ್ಳಿಯು ಸಿಕ್ಕಂತಾಯಿತು. ಅನ್ನಲು, ಕಳ್ಳರು ಪುನಃ ತುಲಸೀದಾಸರನ್ನು ವಂದಿಸಿ, ತಮ್ಮ ಕೆಟ್ಟಬುದ್ಧಿಯನ್ನು ಬಿಟ್ಟು ಶಿಷ್ಯರಾಗಿ ಅವರ ಆಶ್ರಮದಲ್ಲಿ ಇರಹತ್ತಿದರು. ಪ್ರಿಯ ವಾಚಕರೇ, ಶ್ರೀಕೃಷ್ಣನು ಭಾಗವತದಲ್ಲಿ ಹೇಳಿದ ತನ್ನ ತತ್ವದ ಗುಪ್ತವಾದ ಅರ್ಥವನ್ನು ನಾವು ಇಲ್ಲಿ ನೆನಪಿನಲ್ಲಿಡತಕ್ಕದ್ದು. ಭಗವತ್ಪ್ರಾಪ್ತಿಯಾಗಬೇಕಾದರೆ ಅವಶ್ಯವಾಗಿ ಸತ್ಸಂ ಗತಿಯನ್ನು ಮಾಡಬೇಕಂತೆ. ಸತ್ಸಮಾಗಮದ ಯೋಗದಿಂದ ಹರಿಕೀರ್ತನವು ಕಿವಿಗೆ ಬೀಳಲು, ಚೋರರೂ ಜಾರರೂ ಆದ ದುರ್ಜನರು ಸಾಧುಗಳಾದರು. ಆದ್ದರಿಂದ ಸತ್ಸಮಾಗಮವಾಗದೆ ನಾವು ಯಾವ ಕಾರ್ಯ ಮಾಡಿದರೂ ಭಗವ ತ್ಪ್ರಾಪ್ತಿಯಾಗದೆಂಬದನ್ನು ಮರೆಯಲಾಗದು.

· ಹೀಗೆ ಬಹು ದಿವಸಗಳು ಕ್ರಮಿಸುತ್ತಿರಲು, ಒಂದು ಚಮತ್ಕಾರದ ಸಂಗತಿಯು ಒದಗಿತು. ಒಂದು ದಿನ ತುಲಸೀದಾಸರ ಆಶ್ರಮದಲ್ಲಿ ಬಹು ಜನ ಬ್ರಾಹ್ಮಣರು ಭೋಜನಕ್ಕಾಗಿ ಕುಳಿತಿದ್ದರು. ಸಕ್ಕರೆ ತುಪ್ಪದಿಂದಾದ ಹಲವು ಪಕ್ವಾನ್ನಗಳನ್ನು ಎಲೆಯಲ್ಲಿ ಬಡಿಸಿದ್ದರು. ಇನ್ನು ಊಟಕ್ಕೆ ಕೊಡುವ ಸಮಯವು. ತುಲಸೀದಾಸರು ಉದಕ ಬಿಡಲು ಸಿದ್ಧರಾಗಿದ್ದರು. ಬ್ರಾಹ್ಮಣರು ಉದಕ ಬಿಡಿಸುತ್ತಿದ್ದರು. ಅಷ್ಟರಲ್ಲಿ ಒಬ್ಬ ಬ್ರಾಹ್ಮಣನು ಬಾಗಿಲಲ್ಲಿ ನಿಂತು ಮೊದಲು "ಸೀತಾರಾಮ" ಎಂದು ಉಚ್ಚರಿಸಿ, "ನಾನು ಬ್ರಹ್ಮಹತ್ಯ ಮಾಡಿದ ಮಹಾಪಾಪಿಯು ಇದ್ದೇನೆ" ನನಗೆ ಏನಾದರೂ ಹಾಕಿರಿ, ಎಂದು ಕೂಗಿದನು. ಅದನ್ನು ಕೇಳಿ ಬ್ರಾಹ್ಮಣರು ಸುಮ್ಮನೆ ಕುಳಿತುಕೊಂಡರು. ಆಗ ತುಲಸೀದಾಸರು ಹೊರಗೆ ಬಂದು ಆ ಬ್ರಾಹ್ಮಣನನ್ನು ಕೇಳಿಕೊಂಡು ಆತನನ್ನು ಕೈಹಿಡಿದು ಒಳಗೆ ಕರಕೊಂಡು ಬಂದು ತಮ್ಮ ಪಂಗ್ತಿಯಲ್ಲಿ ಕುಳ್ಳಿರಿಸಿ—ಸ್ವಾಮಿ ಕೃಪಾಮೂರ್ತಿಗಳೇ, ನನ್ನ ಮಾತನ್ನು ಕೇಳಬೇಕು. ತಾವು "ಸೀತಾರಾಮ" ಎಂದು ಉಚ್ಚರಿಸಿದ್ದರಿಂದ ಬ್ರಹ್ಮಹತ್ಯಾದಿ ತೃಣಗಳು ಆಗಲೇ ಸುಟ್ಟು ಬೂದಿಯಾದವು. ತಾವು ಪವಿತ್ರರಾದಿರಿ, ಎಂದು ಹೇಳಿ ಎಲ್ಲ ಬ್ರಾಹ್ಮಣರಿಗೆ ಪರಿಸಿಂಚನಮಾಡಬೇಕೆಂದು ಪ್ರಾರ್ಥಿಸಿದರು.

ಆಗ ಷಟ್‌ಶಾಸ್ತ್ರ ನಿಪುಣರಾದ ಬ್ರಾಹ್ಮಣರು ತುಲಸೀದಾಸರಿಗೆ—ಬ್ರಹ್ಮಹತ್ಯಮಾಡಿದ ಬ್ರಾಹ್ಮಣನನ್ನು ಯಾವ ಆಧಾರದಿಂದ ನೀವು ಪಂಗ್ತಿಯಲ್ಲಿ ಕುಳ್ಳಿರಿಸಿದಿರೆಂದು ಕೇಳಲು, ತುಲಸೀದಾಸರು—ಸ್ವಾಮಿ, ಅದಕ್ಕೆ ಆಧಾರವುಂಟು. ಮುಖದಿಂದ ರಾಮನಾಮವನ್ನು ಉಚ್ಚರಿಸಿದ ಬಳಿಕ ಬ್ರಹ್ಮಹತ್ಯಾದಿ ದೋಷಗಳು ಉಳಿಯಲಾರವು. ಕಲಿಯುಗದಲ್ಲಿ ನಾಮ ಮಹಿಮೆಯು ಹೆಚ್ಚಿನದೆಂದು ಶ್ರೀ ಕೃಷ್ಣನು ಭಾಗವತದಲ್ಲಿ ಉದ್ಧವನಿಗೆ ಹೇಳಿದ್ದಾನೆ. ನಾವು ಸ್ನಾನ ಸಂಧ್ಯಾದಿ ಕರ್ಮಗಳನ್ನು ಮಾಡುವ ಮೊದಲು ಕೇಶವ ನಾರಾಯಣಾದಿ ನಾಮಗಳನ್ನು ಉಚ್ಚರಿಸುತ್ತೇವೆ. ಆ ಬ್ರಹ್ಮಕರ್ಮಗಳ ವ್ಯಂಗವು ಪೂರ್ಣವಾಗುವದಕ್ಕಾಗಿ ಕರ್ಮಾಂತ್ಯದಲ್ಲಿ ವಿಷ್ಣುಸ್ಮರಣ ಮಾಡುತ್ತೇವೆ. ಪಿತೃಶ್ರಾದ್ಧಮಾಡುವಾಗ ಕಡೆಯಲ್ಲಿ ಜನಾರ್ದನ ಸ್ವರೂಪದಲ್ಲಿ ಕರ್ಮವನ್ನು ಅರ್ಪಿಸುತ್ತೇವೆ; ಆದ್ದರಿಂದ ಹರಿನಾಮೋಚ್ಚಾರವನ್ನು ಬಿಟ್ಟು ಯಾವ ಕರ್ಮಗಳೂ ನಡೆಯಲಾರವು. ಲಗ್ನ ನಿಶ್ಚಯ ಮಾಡುವಾಗ ಘಟಿತಾರ್ಥದಲ್ಲಿ ಮೂವತ್ತಾರು ಗುಣಗಳು ಕೂಡಿ ಬಂದರೂ ಕಡೆಗೆ ಲಕ್ಷ್ಮೀಕಾಂತಸ್ಮರಣವನ್ನು ಮಾಡಲೇಬೇಕಾಗುವದು. ಅಂತ್ಯ

ಕಾಲದಲ್ಲಿ ಪ್ರಾಯಶ್ಚಿತ್ತವನ್ನು ತಕ್ಕೊಂಡು ನಾಮೋಚ್ಚಾರ ಮಾಡಬೇಕಾಗುವದು. ಕೈಲಾಸಪತಿಯಾದ ಶ್ರೀ ಪಾರ್ವತೀ ರಮಣನು ರಾಮಪ್ರೀತ್ಯರ್ಥವಾಗಿ ನಾಮವನ್ನೇ ಜಪಿಸುವನು. ಕುಲಗೇಡಿಯಾದ ಅಜಾಮಿಳನೆಂಬ ಪಾಪಿಷ್ಠನಾದ ಬ್ರಾಹ್ಮಣನು ಮಗನನ್ನು ಕರೆಯುವ ನೆವದಿಂದ 'ನಾರಾಯಣಾ' ಎಂದು ಉಚ್ಚರಿಸಲು, ದೋಷನಿವಾರಣವಾಯಿತು.

ತುಲಸೀದಾಸರ ಈ ಮಾತುಗಳನ್ನು ಕೇಳಿ ವಿಚಕ್ಷಣರಾದ ಬ್ರಾಹ್ಮಣರಿಗೆ ಸಮಾಧಾನವಾಗಲಿಲ್ಲ. ಅವರು ತುಲಸೀದಾಸರಿಗೆ— ನಿಮ್ಮ ಮಾತುಗಳು ನಮ್ಮ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲವು. ನೀವು ಏನಾದರೊಂದು ಸಾಕ್ಷಿಯನ್ನು ಕೊಡಬೇಕು. ಅದರಿಂದ ನಮ್ಮ ಸಂಶಯ ನಿವಾರಣವಾಗುವದು, ಎನ್ನಲು ತುಲಸೀದಾಸರು—ನೀವು ಯಾರ ಸಾಕ್ಷಿಯನ್ನು ಕೇಳುವಿರೆಂದು ಪ್ರಶ್ನೆಮಾಡಿದರು. ಅದಕ್ಕೆ ಬ್ರಾಹ್ಮಣರು —ಈ ಕಾಶೀಕ್ಷೇತ್ರಕ್ಕೆ ಮುಖ್ಯ ದೈವತವಾದ ವಿಶ್ವೇಶ್ವರನ ಮುಂದೆ ಶ್ರೀ ನಂದಿಕೇಶ್ವರನಿರುವನಷ್ಟೇ? ಪಾತ್ರದಲ್ಲಿ ಅನ್ನವನ್ನು ಬಡಿಸಿ ಆತನಿಗೆ ಸಮರ್ಪಿಸಬೇಕು. ಪಾಷಾಣ ಮೂರ್ತಿಯಾದ ನಂದಿಯು ನಿಮ್ಮ ಕೈಯ ನೈವೇದ್ಯವನ್ನು ಪ್ರತ್ಯಕ್ಷ ಸ್ವೀಕರಿಸಿದರೆ ಈ ಬ್ರಹ್ಮಹತ್ಯಮಾಡಿದ ಬ್ರಾಹ್ಮಣನನ್ನು ಪಂಗ್ತಿಯಲ್ಲಿ ಕುಳ್ಳಿರಿಸಿಕೊಳ್ಳುತ್ತೇವೆ. ಹಲವು ದೃಷ್ಟಾಂತಗಳನ್ನು ಕೊಟ್ಟು ನಾಮಮಹಿಮೆಯನ್ನು ನಮ್ಮ ಮುಂದೆ ವರ್ಣಿಸಿದಿರಿ; ಆದರೆ ಪ್ರತ್ಯಕ್ಷ ಸಾಕ್ಷಿಯನ್ನು ಕೊಟ್ಟಹೊರತು ನಾವು ನಿಮ್ಮ ವರ್ಣನೆಯನ್ನು ನಂಬಲಾರೆವು. ಬಾಯಿಂದ ಸಕ್ಕರೆಯ ರುಚಿಯನ್ನು ವರ್ಣಿಸಿದ ಮಾತ್ರದಿಂದ ನಾಲಿಗೆಯ ಇಚ್ಛೆಯು ಪೂರ್ಣವಾಗಲಿಲ್ಲ. ಇಂಥ ವರ್ಣನೆಯನ್ನು ತಕ್ಕೊಂಡು ಮಾಡುವದೇನು? ನಿಮ್ಮ ನಾಮಮಹಿಮೆಯ ವರ್ಣನದಿಂದ ನಮ್ಮ ಮನಸ್ಸಿನ ವಿಕಲ್ಪವು ದೂರವಾಗಲೊಲ್ಲದು. ಒಲ್ಲವರು ಒರೆಗೆ ಹಚ್ಚಿ ವಸ್ತುವನ್ನು ಪರೀಕ್ಷಿಸಿ ಸಂಶಯ ನಿವಾರಣ ಮಾಡಿ ಕೊಡುವಂತೆ ಸಾಕ್ಷಿಯಿಂದ ನಮ್ಮ ಸಂಶಯವನ್ನು ದೂರ ಮಾಡತಕ್ಕದ್ದು.

ಬ್ರಾಹ್ಮಣರ ಈ ಮಾತುಗಳನ್ನು ಕೇಳಿ ತುಲಸೀದಾಸರು ಆನಂದಭರಿತರಾಗಿ ಅನ್ನಪಾತ್ರೆಯನ್ನು ತಕ್ಕೊಂಡು ಶ್ರೀ ವಿಶ್ವೇಶ್ವರ ದೇವಾಲಯಕ್ಕೆ ನಡೆದರು. ಬ್ರಾಹ್ಮಣರೆಲ್ಲರು ಎದ್ದು ತುಲಸೀದಾಸರನ್ನು ಹಿಂಬಾಲಿಸಿ ಹೋಗಿ, ಸಭಾಮಂಟಪದಲ್ಲಿ ನಿಂತು ಕೌತುಕವನ್ನು ನೋಡತೊಡಗಿದರು. ತುಲಸೀದಾಸರು ಅನ್ನಪಾತ್ರವನ್ನು ಕೈಯಲ್ಲಿ ಹಿಡಕೊಂಡು ಮಹಾದ್ವಾರಕ್ಕೆ ಬಂದು ವಿಶ್ವೇಶ್ವರನಿಗೆ

ಸಾಷ್ಟಾಂಗ ನಮಸ್ಕಾರವನ್ನು ಮಾಡಿ—ಎಲೈ ಚಂದ್ರಮೌಳಿಯೇ, ನೀಲಕಂಠನೇ, ಖಟ್ವಾಂಗಧಾರಿಯೇ. ಮೃಡಾನೀವರನೇ, ತ್ರಿಪುರಾಂತಕನೇ ದೀನನಾದ ನನ್ನ ಮಾತುಗಳನ್ನು ಕೇಳಬೇಕು. ಲೋಕೋಪಕಾರಾರ್ಥವಾಗಿ ಕಾಲಕೂಟವೆಂಬ ಮಹಾವಿಷವನ್ನು ಕುಡಿದು, ಅದರ ದಾಹಶಾಂತಿಗಾಗಿ ನೀನು ನಾಮಸ್ಮರಣ ಮಾಡಿದೆ. "ರಾಮ" ಎಂಬ ಎರಡು ಅಕ್ಷರಗಳನ್ನು ಜಪಿಸಿದ ಕೂಡಲೆ ನೀನು ತಂಪು ಹೊಂದಿದ್ದು ನಿಜವಿದ್ದರೆ, ಎಲೈ ಕೃಪಾಲುವಾದ ವಿಶ್ವನಾಥನೇ, ಈ ನಂದಿಕೇಶ್ವರನು ನೈವೇದ್ಯವನ್ನು ಭಕ್ಷಿಸುವವನಾಗಲಿ, ಎಂದು ಪ್ರಾರ್ಥಿಸಿದರು. ಕೂಡಲೆ ಪಾಷಾಣ ಮೂರ್ತಿಯಾದ ನಂದಿಕೇಶ್ವರನು ಎದ್ದು ನಿಂತು ಮುಸುಗರಿಯುತ್ತ ನೈವೇದ್ಯವನ್ನು ಭಕ್ಷಿಸಿ ಆ ಮೇಲೆ ಎಲೆಯನ್ನು ತಿನ್ನತೊಡಗಿದನು. ಈ ಕೌತುಕವನ್ನು ನೋಡಿ ಜನರು ಆಶ್ಚರ್ಯಭರಿತರಾದರು. ನೈವೇದ್ಯ ಭಕ್ಷಣಾನಂತರ ನಂದಿಕೇಶ್ವರನು ಯಥಾಸ್ಥಿತ ಕುಳಿತುಕೊಂಡನು. ಭಕ್ತಿಯ ಮಹಿಮೆಯು ಅಗಾಧವಾದದ್ದು. ಅದರ ಅಂತವು ಶ್ರುತಿಶಾಸ್ತ್ರಗಳಿಗೂ ಹತ್ತದು. ಎಲ್ಲ ಬ್ರಾಹ್ಮಣರು ತುಲಸೀದಾಸರಿಗೆ ಸಾಷ್ಟಾಂಗವಾಗಿ ವಂದಿಸಿದರು. ವೈಷ್ಣವ ವೀರರು ನಾಮಗಾನ ಮಾಡುತ್ತ ನರ್ತನಮಾಡತೊಡಗಿದರು. ವೇದಶಾಸ್ತ್ರಪಾರಂಗತರಾದ ಬ್ರಾಹ್ಮಣರು ತುಲಸೀದಾಸರಿಗೆ—ಎಲೈ ವೈಷ್ಣವ ವೀರನೇ, ನೀನು ಪರಮ ಧನ್ಯನು. ಸಿದ್ಧಾಂತ ಜ್ಞಾನದಲ್ಲಿ ಒಳ್ಳೆಯ ಚತುರನಿರುತ್ತೀ. ನೀನು ಪೂರ್ಣ ವಾಲ್ಮೀಕಿಯ ಅವತಾರವೆಂಬದನ್ನು ನಾವು ಮನಗಂಡೆವು. ತಾರಾಗಣದಲ್ಲಿ ಚಂದ್ರನೂ, ಪಕ್ಷಿಗಳಲ್ಲಿ ಗರುಡನೂ, ದೇವತೆಗಳಲ್ಲಿ ವೈಕುಂಠಪತಿಯೂ ಶ್ರೇಷ್ಠರಾಗಿರುವಂತೆ ನೀನು ವೈಷ್ಣವರಲ್ಲಿ ವರಿಷ್ಠನಿರುತ್ತೀ; ತಾಪಸರಲ್ಲಿ ಪಿನಾಕಪಾಣಿಯೂ, ಮಹರ್ಷಿಗಳಲ್ಲಿ ವ್ಯಾಸಮುನಿಯೂ, ಸಕಲ ಗೋಪಿಕಾ ಸ್ತ್ರೀಯರಲ್ಲಿ ಮಾತೆಯಾದ ರುಕ್ಮಿಣಿಯೂ ಶ್ರೇಷ್ಠಳಿರುವಂತೆ ನೀನು ವೈಷ್ಣವರಲ್ಲಿ ಶ್ರೇಷ್ಠನಿರುತ್ತೀ; ಧನುರ್ಧರರಲ್ಲಿ ಜಾನಕೀವರನೂ, ಸಾಗರಗಳಲ್ಲಿ ಕ್ಷೀರಸಾಗರವೂ, ಸಿದ್ಧರಲ್ಲಿ ಅನುಸೂಯಾ ಕುವರನೂ ಶ್ರೇಷ್ಠರಿರುವಂತೆ ನೀನು ವೈಷ್ಣವರಲ್ಲಿ ಶ್ರೇಷ್ಠನಿರುತ್ತೀ, ಎಂದು ಪ್ರಾರ್ಥಿಸಿ ಆಶ್ರಮಕ್ಕೆ ಒಂದು ಬ್ರಹ್ಮಘ್ನನಾದ ಬ್ರಾಹ್ಮಣನೊಡನೆ ಭೋಜನ ಮಾಡಿದರು. ಈ ವರ್ತಮಾನವನ್ನು ಕೇಳಿ ಕಾಸಿಯ ಜನರು ತುಲಸೀದಾಸರಲ್ಲಿ ವಿಶ್ವಾಸವಿಟ್ಟು ದೇಹಾಭಿಮಾನವನ್ನು ಬಿಟ್ಟು ಹರಿಲೀಲೆಯನ್ನು ಶ್ರವಣ ಮಾಡತೊಡಗಿದರು.

ಹೀಗೆ ತುಲಸೀದಾಸರು ಹಲವು ಅಮಾನುಷ ಕೃತ್ಯಗಳನ್ನು ಮಾಡಿದರು. ಒಂದು ದಿನ ಜೈತಪಾಲನೆಂಬ ಸಾವುಕಾರನು ತೀರಿದನು. ಆತನ ಹೆಂಡತಿಯು ಮಾಯಾಮಮತೆಗಳನ್ನು ಬಿಟ್ಟು ಮನಸ್ಸಿನಲ್ಲಿ ಪತಿಯನ್ನು ಧ್ಯಾನಿಸುತ್ತ ಗಂಗಾ ತೀರದಲ್ಲಿರುವ ನಿರ್ಮಲವನಕ್ಕೆ ಸಹಗಮನ ಮಾಡುವದಕ್ಕಾಗಿ ಉತ್ಸವದಿಂದ ಹೊರಟಳು. ಹಾದಿಯಲ್ಲಿ ತುಲಸೀದಾಸರ ಆಶ್ರಮವು ಹತ್ತಲು, ಆ ಸಾಧ್ವಿಯು ತುಲಸೀದಾಸರನ್ನು ವಂದಿಸುವದಕ್ಕಾಗಿ ಒಬ್ಬಳೇ ಆಶ್ರಮವನ್ನು ಹೊಕ್ಕು ಅವರನ್ನು ವಂದಿಸಿದಳು. ನಾಮಸ್ಮರಣ ಮಾಡುತ್ತ ಕುಳಿತಿದ್ದ ತುಲಸೀದಾಸರು ಆ ಪತಿವ್ರತೆಯನ್ನು "ಅಷ್ಟಪುತ್ರ ಸೌಭಾಗ್ಯವತೀಭವ" ಎಂದು ಆಶೀರ್ವದಿಸಿದರು. ಅದನ್ನು ಕೇಳಿ ಆ ಸತಿಯು ಸ್ವಾಮಿ, ಪತಿಯು ಮರಣಹೊಂದಿದ ಕಾರಣದಿಂದ ನಾನು ಮಾಯಾಮೋಹಗಳನ್ನು ಬಿಟ್ಟು ಸಹಗಮನ ಮಾಡಹೊರಟಿರಲು, ನೀವು "ಅಷ್ಟಪುತ್ರ ಸೌಭಾಗ್ಯವತೀಭವ" ಎಂದು ಆಶೀರ್ವದಿಸಿದಿರಲ್ಲ! ನಿಮ್ಮ ಮಾತು ಹ್ಯಾಗೆ ಅಸತ್ಯವಾಗುವದು! ಮರಣಹೊಂದಿದ ಪತಿಯು ಒದುಕಿಬರುವದಾದರೂ ಹ್ಯಾಗೆ? ನನಗೆ ಏನೂ ತಿಳಿಯದೆ ಸಂಶಯಗ್ರಸ್ತಳಾಗಿದ್ದೇನೆ, ಎಂದು ನುಡಿದಳು. ಅದಕ್ಕೆ ತುಲಸೀದಾಸರು—ತಾಯಿ, ನಾನು ತಿಳಿಯದೆ ಹೀಗೆ ಆಶೀರ್ವದಿಸಿದೆನು; ಆದರೂ ರಘುನಂದನನು ನನ್ನ ಮಾತನ್ನು ಸತ್ಯ ಮಾಡಲು ಸಮರ್ಥನಿರುವನು, ಎಂದು ಹೇಳಲು ಆ ಸಾವುಕಾರನ ಹೆಂಡತಿಯು ಮತ್ತೆ ತುಲಸೀದಾಸರನ್ನು ವಂದಿಸಿ, ಸಹಗಮನಾರ್ಥವಾಗಿ ತೆರಳಿದಳು. ಆಕೆಯು ಪತಿಯ ಪ್ರೇತದ ಬಳಿಗೆ ಹೋಗಲು ಅದು ಚೇತರಿಸಿ ಎದ್ದು ಕುಳಿತುಕೊಂಡಿತು. ಅದನ್ನು ನೋಡಿ ಜನರು ಆನಂದಭರಿತರಾಗಿ ಜಯಜಯಕಾರದಿಂದ ಗರ್ಜಿಸಿದರು. ಆ ಪತಿಭಕ್ತಿ ಪರಾಯಣಳು ಪತಿಯ ಕೈಯನ್ನು ಹಿಡಕೊಂಡು ತುಲಸೀದಾಸರ ಆಶ್ರಮಕ್ಕೆ ಹೋಗಿ ಅವರನ್ನು ನಮಿಸಿ ಆಶೀರ್ವಾದವನ್ನು ಪಡೆದು ಮನೆಗೆ ಹೋದಳು.

ತುಲಸೀದಾಸರ ಈ ಅಮಾನುಷ ಕೃತ್ಯಗಳ ಸುದ್ದಿಯು ಅಕಬರ ಬಾದಶಹನ ಕಿವಿವರೆಗೆ ಹೋಯಿತು. ಆತನು ತುಲಸೀದಾಸರನ್ನು ಕಾಣುವದಕ್ಕಾಗಿ ಆತುರಪಟ್ಟು ಒಬ್ಬ ವಿದ್ವಾಂಸನಾದ ಚತುರ ಬ್ರಾಹ್ಮಣಮಂತ್ರಿಯನ್ನು ರಥ ಪಲ್ಲಕ್ಕಿ ಮೊದಲಾದ ವಾಹನಗಳನ್ನು ಕೊಟ್ಟು ದಾಸವರ್ಯನನ್ನು ಕರೆಯುವದಕ್ಕಾಗಿ ಕಳಿಸಿದನು. ಆ ಮಂತ್ರಿಯು ತುಲಸೀದಾಸರ ಬಳಿಗೆ ಹೋಗಿ ವಂದಿಸಿ ಬಾದಶಹನ ಒಯಕೆಯನ್ನು ತಿಳಿಸಿದನು. ತುಳಸೀದಾಸರು ಮನಸ್ಸಿನಲ್ಲಿ—ಆ ದೇಶದ ಜನರನ್ನು ನಾಮಸ್ಮರಣದಲ್ಲಿ ತೊಡಗಿಸಬೇಕೆಂದು ಬಗೆದು, ತಾವು ನಿರಿಚ್ಛರಾದರೂ ಬಾದಶಹನ

ಬಳಿಗೆ ಹೋದರು. ಬಾದಶಹನು ಅವರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಬಹಳವಾಗಿ ಸತ್ಕರಿಸಿ—ದಾಸಶ್ರೇಷ್ಠನೇ, ನಾನು ನಿನ್ನ ಕೀರ್ತಿಯನ್ನು ಬಹಳವಾಗಿ ಕೇಳಿದ್ದೇನೆ. ನೀನು ಎರಡನೇ ಈಶ್ವರನೆನಿಸಿಕೊಳ್ಳುತ್ತೀ. ಕಲ್ಲಿನ ಬಸವನಿಂದ ಅನ್ನವನ್ನು ಉಣಿಸಿದೆಯಂತೆ; ಆಶೀರ್ವಾದದಿಂದ ಪ್ರೇತವನ್ನು ಎಬ್ಬಿಸಿದೆಯಂತೆ; ನಿನ್ನ ಕೃತಿಯು ಅಘಟಿತವಾಗಿ ತೋರುತ್ತಿರುವದು. ನಿನ್ನ ಮಹಿಮೆಯು ನಮಗೆ ತಿಳಿಯಲೊಲ್ಲದು. ಎನ್ನಲು ತುಲಸೀದಾಸರು—ಬಾದಶಹನೇ, ಅದೆಲ್ಲ ಶ್ರೀರಾಮನ ಆಟವು. ನಾನು ಆತನ ಚರಣದಲ್ಲಿ ಚಿತ್ತವನ್ನು ಇಟ್ಟಿರುವ ಅನಾಥನು, ಎಂದು ಹೇಳಿದರು. ಅದಕ್ಕೆ ಬಾದಶಹನು—ಹಾಗಾದರೆ ನೀವು ನನಗೆ ಆ ರಾಮನ ದರ್ಶನವನ್ನು ಮಾಡಿಸಬೇಕು, ಮಾಡಿಸದಿದ್ದರೆ ಇಲ್ಲಿಂದ ನಿಮ್ಮನ್ನು ಹೋಗಗೊಡುವದಿಲ್ಲ, ಎಂದು ಹೇಳಿ ಸೇವಕರಿಗೆ ನನ್ನ ಅಪ್ಪಣೆಯ ಹೊರತು ತುಲಸೀದಾಸರನ್ನು ಬಿಡಲಾಗದೆಂದು ಹೇಳಿ ಹೊರಟು ಹೋದನು. ಇತ್ತ ಬಾದಶಹನ ಸೇವಕರು ತುಲಸೀದಾಸರನ್ನು ಬಿಡದಾಗಲು, ಅವರು ಚಿಂತಿಸಿ ಮಾರುತಿಯನ್ನು ಸ್ಮರಿಸಿ ತಮಗೆ ಬಂದ ವಿಘ್ನವನ್ನು ತಿಳಿಸಿದರು. ಮಾರುತಿಯು ಬಾದಶಹನನ್ನು ಎಚ್ಚರಗೊಳಿಸುವದಕ್ಕಾಗಿ ಹತ್ತುಸಾವಿರ ವಾನರ ಸೈನ್ಯಕ್ಕೆ ಅಪ್ಪಣೆಯನ್ನು ಕೊಟ್ಟನು. ಹಸ್ತಿನಾವತಿಯಲ್ಲಿ ವಾನರ ಕಾಟವು ಹೆಚ್ಚಾಯಿತು. ಜನರ ತಾಪದ ಸುದ್ದಿಯು ಬಾದಶಹನ ಕಿವಿಯ ವರೆಗೆ ಹೋಯಿತು. ಅದರ ಕಾರಣ ವನ್ನು ವಿಚಾರಿಸುತ್ತಿರಲು, ಕೆಲವರು ಜ್ಞಾನಿಗಳು ಈ ಅನರ್ಥಕ್ಕೆ ತುಲಸೀದಾಸರ ಕ್ಷೋಭವೇ ಕಾರಣವೆಂದು ಹೇಳಿದರು. ಅದನ್ನು ಕೇಳಿ ಬಾದಶಹನು ಪಶ್ಚಾತ್ತಾಪಪಟ್ಟು ತುಳಸೀದಾಸರ ಬಳಿಗೆ ಹೋಗಿ ವಂದಿಸಿ ಕ್ಷಮೆ ಬೇಡಿದನು. ಅದಕ್ಕೆ ತುಲಸೀದಾಸರು—ಅಪ್ಪಾ, ನೀನು ರಾಮದರ್ಶನವನ್ನು ಇಚ್ಛಿಸುತ್ತಿರುವೆ ಯಲ್ಲವೆ? ರಾಮನು ಒಬ್ಬನೇ ಹ್ಯಾಗೆ ಬಂದಾನು? ಆತನ ಬಳಿಯಲ್ಲಿ ಹದಿನೆಂಟು ಪದ್ಮ ವಾನರರ ಸೈನ್ಯವಿರುವದು. ಅದರಲ್ಲಿ ಈಗ ಹತ್ತುಸಾವಿರ ಸೈನ್ಯವು ಮಾತ್ರ ಬಂದಿರುತ್ತದೆ. ಉಳಿದ ಸೈನ್ಯವು ಬಂದಬಳಿಕ ಶ್ರೀರಘುಪತಿಯು ಬರುವನು. ಸೂರ್ಯೋದಯಕ್ಕೆ ಮೊದಲು ಆತನ ಕಿರಣಗಳು ಬರುವಂತೆ ಈ ವಾನರ ಸೈನ್ಯ ವು ಬರುತ್ತಿರುವದು. ಸೈನ್ಯವೆಲ್ಲ ಬಂದ ಬಳಿಕ ಪ್ರಭುವು ಬರುವನು. ನೀನು ಬಹು ಭಾಗ್ಯಶಾಲಿಯು. ಅನಾಯಾಸವಾಗಿ ರಾಮದರ್ಶನವಾಗುವದು, ಎಂದು ಹೇಳಿದರು. ತುಲಸೀದಾಸರ ಈ ಮಾತನ್ನು ಕೇಳಿ ಬಾದಶಹನು—ಸ್ವಾಮೀ, ಈಗ ಬಂದಿರುವ ೧೦ ಸಾವಿರ ವಾನರ ಸೈನ್ಯದ ಕಾಟವೇ ಸಾಕಾಗಿರುವದು. ಕ್ಷಮಿ

ಸಬೇಕು. ನನಗೆ ರಾಮದರ್ಶನವಾಯಿತು. ನಿಮ್ಮ ಮಹಿಮೆಯು ತಿಳಿಯಲಸಾಧ್ಯವು, ಎಂದು ಗಟ್ಟಿಯಾಗಿ ಕಾಲುಗಳನ್ನು ಹಿಡಕೊಂಡನು. ತುಳಸೀದಾಸರು ಬಾದಶಹನ ಈ ಕರುಣಾವಚನಗಳಿಗೆ ಕನಿಕರಪಟ್ಟರು. ವಾನರ ಸೈನ್ಯವು ಗುಪ್ತವಾಯಿತು. ಒಂದು ವರ್ಷಪರ್ಯಂತವಾಗಿ ತುಲಸೀದಾಸರು ಅಲ್ಲಿ ಇದ್ದರು. ಹಸ್ತಿನಾವತಿಯ ಜನರು ನಾಮಸಂಕೀರ್ತನದಲ್ಲಿ ತತ್ಪರರಾದರು. ಸತ್ಸಂಗದ ಯೋಗದಿಂದ ಜಡಮೂಢರೂ ಜ್ಞಾನಿಗಳಾದರು.

ತುಲಸೀದಾಸರು ಬಾದಶಹನ ಅನುಮತಿಯಿಂದ ಮಥುರೆಗೆ ಹೋಗುವದಕ್ಕಾಗಿ ಹಸ್ತಿನಾವತಿಯಿಂದ ಹೊರಟರು. ಅವರು ಮೊದಲು ಗೋಕುಲಕ್ಕೆ ಹೋಗಿ ಯಮುನೆಯಲ್ಲಿ ಸ್ನಾನ ಮಾಡಿ ಶ್ರೀಕೃಷ್ಣನ ದರ್ಶನವನ್ನು ತಕ್ಕೊಂಡು ಬೇಗನೆ ವೃಂದಾವನಕ್ಕೆ ಬಂದರು. ಅಲ್ಲಿ ಶಾರ್ಙ್ಗಪಾಣಿಯನ್ನು ಆರಾಧಿಸುತ್ತ ಒಂದು ತಿಂಗಳು ಇದ್ದು ಅಲ್ಲಿಂದ ಮಥುರೆಗೆ ಬಂದರು. ಅಲ್ಲಿ ಯಮುನೆಯಲ್ಲಿ ಸ್ನಾನಮಾಡಿ ಶ್ರೀಕೃಷ್ಣನ ದರ್ಶನವನ್ನು ತಕ್ಕೊಂಡರು. ಎಲ್ಲ ವೈಷ್ಣವರು ತುಲಸೀದಾಸರ ದರ್ಶನಕ್ಕೆ ಬಂದರು. ಅವರಲ್ಲಿ ಪ್ರಿಯದಾಸನೆಂಬ ನಾಗರ ಬ್ರಾಹ್ಮಣನು ಕಲಿಯುಗದಲ್ಲಾದ ಎಲ್ಲ ವಿಷ್ಣುಭಕ್ತರ ಚರಿತ್ರಗಳನ್ನು ಸಂಸ್ಕೃತದಲ್ಲಿ ಬರೆದ ವರ್ತಮಾನವನ್ನು ತುಲಸೀದಾಸರು ಕೇಳಿದರು. ಪ್ರಿಯದಾಸನು ಭಕ್ತಿ-ಜ್ಞಾನ-ವೈರಾಗ್ಯಗಳಿಂದ ಪೂರ್ಣನಾಗಿದ್ದನು. ತುಲಸೀದಾಸರು ಒಮ್ಮೆ ಪ್ರಿಯದಾಸರ ಭೆಟ್ಟಿಗೆ ಹೋಗಿ ನೀವು ಬರೆದಿರುವ ಸಂತಚರಿತ್ರೆಯನ್ನು ಕೇಳುವ ಇಚ್ಛೆಯಾಗಿರುತ್ತದೆಂದು ಹೇಳಿದರು. ಅದಕ್ಕೆ ಪ್ರಿಯದಾಸರು—ನಾನು ನಾಲ್ಕು ಯುಗಗಳಲ್ಲಿಯೂ ಆದ ಸಂತರ ಚರಿತ್ರಗಳನ್ನು ಬರೆದಿದ್ದೇನೆ; ಆದರೆ ತುಲಸೀದಾಸರ ಚರಿತ್ರವನ್ನು ಮಾತ್ರ ಬರೆದಿಲ್ಲ; ಆದ್ದರಿಂದ ನನಗೆ ಬಹಳ ಅಸಮಾಧಾನವಾಗಿದೆ, ಎಂದು ಹೇಳಿದರು. ತುಳಸೀದಾಸರು ಸಂತಚರಿತ್ರ ಗ್ರಂಥವನ್ನು ಬಿಚ್ಚಿಕೊಂಡು ನೋಡಲು, ಆಶ್ಚರ್ಯದ ಸಂಗತಿಯು ಒದಗಿತು. ಶ್ರೀರಾಮಚಂದ್ರನು ಸ್ವತಃ ತುಲಸೀದಾಸರ ಚರಿತ್ರವನ್ನು ಬರೆದಿದ್ದನು. ಹೀಗೆ ತುಲಸೀದಾಸರು ಹಲವು ಅಮಾನುಷ ಕೃತ್ಯಗಳನ್ನು ತೋರಿಸುತ್ತ ದೇಶಪರ್ಯಟನ ಮಾಡಿ ಹಲವು ಜನರನ್ನು ಸನ್ಮಾರ್ಗಕ್ಕೆ ಹಚ್ಚಿ, ತಮ್ಮ ಅವತಾರ ಕ್ರಿಯೆಗಳನ್ನು ಪೂರ್ಣಮಾಡಿದರು.

ಈ ತುಲಸೀದಾಸರ ಚರಿತ್ರದಿಂದ ನಾವು ಕಲಿಯತಕ್ಕ ಸಂಗತಿಗಳು ಹಲವು ಇರುವವು. ತುಲಸೀದಾಸರು ಪ್ರತ್ಯಕ್ಷ ವಾಲ್ಮೀಕಿಯ ಅವತಾರವಾ

ದಾಗ್ಯೂ ಅವರು ಈಶ್ವರ ಪ್ರಾಪ್ತಿಗಾಗಿ ಪಟ್ಟಿರುವ ಆಯಾಸವನ್ನು ನೋಡಿದರೆ ಪ್ರಾಣಿಗಳ ಜನ್ಮವು ಅಜ್ಞಾನಕ್ಕೆ ಕಾರಣವೆಂಬದು ಗೊತ್ತಾಗುತ್ತದೆ. ಪರೋಪಕಾರಕ್ಕಾಗಿಯೇ ಅಜ್ಞಾನಮೂಲವಾದ ದುಃಖವನ್ನು ತುಲಸೀದಾಸರು ತಾಳಿಕೊಂಡರು. ನಡುರಾತ್ರಿಯಲ್ಲಿ ಯಮುನೆಯನ್ನು ಈಸಿ ಪಾರಾದದ್ದೂ, ಹಗ್ಗವೆಂದು ಹಾವನ್ನು ಹಿಡಕೊಂಡು ಉಪ್ಪರಿಗೆಯಲ್ಲಿ ಏರಿ ಹೋದದ್ದೂ, ಹೆಂಡತಿಯಲ್ಲಿದ್ದ ಅಕೃತ್ರಿಮ ಪ್ರೇಮವನ್ನು ತೋರಿಸುತ್ತವೆ. ಅದೇ ಪ್ರೇಮವನ್ನು ಅವರು ಹೆಂಡತಿಯ ಉಪದೇಶ ಮಾತ್ರದಿಂದ ದೇವರಲ್ಲಿ ಇಟ್ಟು ಕೃತಾರ್ಥರಾದರು. ಯಾವ ಕಾರಣದಿಂದಲೇ ಆಗಲಿ ತುಲಸೀದಾಸರ ಈ ಶುದ್ಧಪ್ರೇಮವನ್ನು ಸಂಪಾದಿಸಲು ಪ್ರತಿಯೊಬ್ಬನು ಯತ್ನಿಸ ತಕ್ಕದ್ದು ಹೆಂಡತಿಯನ್ನೂ ಸರ್ವಸಂಪತ್ತನ್ನೂ, ಪಿಶಾಚವು ಕೊಡಲೊಪ್ಪಿದ ವರವನ್ನೂ ನಿರಾಕರಿಸಿದ್ದು ಇಷ್ಟಪ್ರಾಪ್ತಿಗಾಗಿ ತುಲಸೀದಾಸರು ಮಾಡಿದ ಸ್ವಾರ್ಥತ್ಯಾಗವನ್ನು ತೋರಿಸುತ್ತದೆ. ಕ್ಷುದ್ರ ಭೋಗೇಚ್ಛೆಗಾಗಿ ದೇವರನ್ನೂ, ಗುರುಗಳನ್ನೂ ಸೇವಿಸುವವರು ಈ ಮಾತನ್ನು ಲಕ್ಷದಲ್ಲಿಡತಕ್ಕದ್ದು. ತುಲಸೀದಾಸರು ಎಂಥ ಉಗ್ರತಪಶ್ಚರ್ಯವನ್ನು ಮಾಡಿದಾಗ್ಯೂ ಅವರಿಗೆ ಶ್ರೀರಾಮ ಪ್ರಾಪ್ತಿಯು ಗುರುವಾದ ಮಾರುತಿಯ ದ್ವಾರದಿಂದಲೇ ಆದದ್ದನ್ನು ನೋಡಿದರೆ ಗುರುವಿನ ಗೌರವವು ಗೊತ್ತಾಗುವದು. ಗುರುವಿನಗುಲಾಮನಾಗುವ ವರೆಗೆ ಈಶ್ವರನ ಜ್ಞಾನವಾಗುವದಿಲ್ಲೆಂಬದನ್ನು ನೆನಪಿನಲ್ಲಿಡಬೇಕು. ಅಕಬರಬಾದಶಹನು ಅನಾಯಾಸವಾಗಿ ರಾಮದರ್ಶನ ಹೊಂದಬೇಕೆಂದು ಬಯಸಿ, ಭಂಗಿತನಾದದ್ದನ್ನು ನಾವು ಮರೆಯತಕ್ಕದ್ದಲ್ಲ. ದೇಹವನ್ನು ದಂಡಿಸದೆ ಕರಣಗಳನ್ನು ಖಂಡಿಸದೆ ಈಶ್ವರನ ಪ್ರಾಪ್ತಿಯಾಗುವದಿಲ್ಲ. ಬ್ರಹ್ಮಘ್ನನಾದಬ್ರಾಹ್ಮಣನು ಒಮ್ಮೆ ರಾಮನಾಮವನ್ನುಚ್ಚರಿಸಿ, ಸತ್ಪುರುಷಸಾನ್ನಿಧ್ಯಬಲದಿಂದ ದೋಷಮುಕ್ತನಾದದ್ದನ್ನು ಲಕ್ಷದಲ್ಲಿಡಿರಿ. ತುಲಸೀದಾಸರು ಪ್ರಕಟಮಾಡಿದ ಅಮಾನುಷ ಕೃತ್ಯಗಳಲ್ಲಿ ನಮಗೆ ವಿಶ್ವಾಸವು ತೋರದಿದ್ದರೂ ಆ ಕೃತ್ಯಗಳೆಲ್ಲೆಲ್ಲ ಕಾಣುವ ತುಳಸೀದಾಸರ ನಿಸ್ಪೃಹತೆಯನ್ನು ನಾವು ಮರೆಯತಕ್ಕದ್ದಲ್ಲ. ನಿಸ್ಪೃಹನಿಗೆ ಬೇಕಾದದ್ದು ದೊರೆಯುವದು.



# ಶ್ರೀ ಜಯದೇವ ಕವಿಗಳು.

ಈ ಜಗತ್ತು ಈಶ್ವರ ಸ್ವರೂಪವಿರುತ್ತದೆಂದು ಮಹಾತ್ಮರು ಹೇಳುತ್ತಾರೆ. ಅವರ ಹೇಳಿಕೆಯ ಅನುಭವವು ಅವರಿಗೇ ಬರತಕ್ಕದ್ದಲ್ಲದೆ ನಮ್ಮಂಥ ಪಾಮರರಿಗೆ ಎಂದಿಗೂ ಬಾರದು. ನಾವು ಈ ಜಗತ್ತಿನ ಕೆಲವು ಒಡವೆಗಳನ್ನು ದೇವರೆಂದುಪೂಜಿಸುತ್ತೇವೆ, ಕೆಲವು ಒಡವೆಗಳನ್ನು ತಿರಸ್ಕಾರದಿಂದ ಚಲ್ಲಿಕೊಡುತ್ತೇವೆ; ಕೆಲವು ಒಡವೆಗಳನ್ನು ಬಚ್ಚಿಟ್ಟು ಜೀವಕ್ಕಿಂತಲೂ ಹೆಚ್ಚಾಗಿ ಅವುಗಳ ಜತನ ಮಾಡುತ್ತೇವೆ, ಕೆಲವು ಒಡವೆಗಳನ್ನು ಕಣ್ಣೆತ್ತಿನೋಡದೆ ನಿರಾಕರಿಸುತ್ತೇವೆ; ಕೆಲವನ್ನು ಕಂಡರೆ ಹಿರಿಹಿರಿ ಹಿಗ್ಗುತ್ತೇವೆ; ಕೆಲವನ್ನು ಕಂಡರೆ ಕೆಕ್ಕರಿಸಿ ಸಂತಾಪಗೊಳ್ಳುತ್ತೇವೆ. ಹೀಗೆ ನಾನಾಕಲ್ಪನೆಗಳಿಂದ ಹಿಗ್ಗುತ್ತಲೂ, ಕುಗ್ಗುತ್ತಲೂ ಇರುವನಮಗೆ ಈ ಜಗದ್ರೂಪನಾದ ಈಶ್ವರನ ಆನಂದಮಯಸ್ಥಿತಿಯ ಅನುಭವವು ಹ್ಯಾಗಾಗಬೇಕು? ಈ ಅನುಭವದಿಂದ ಧನ್ಯರಾದ ಸತ್ಪುರುಷರ ಪರಿಚಯವು ನಮಗೆ ತಾರಕವಾದ್ದರಿಂದ ಇದರಡಿಯಲ್ಲಿ ಶ್ರೀ ಜಯದೇವ ಕವಿಗಳ ಸುಂದರವಾದ ಚರಿತ್ರವನ್ನು ಶ್ರೀಗುರುಕೃಪೆಯಿಂದ ಬರೆಯ ತೊಡಗುವೆವು.

ಒಂದಾನೊಂದುದಿನ ರಾಜೀವನಯನನಾದ ಲಕ್ಷ್ಮೀಪತಿಯು ವ್ಯಾಸರನ್ನು ಕುರಿತು—ಎಲೈ ಋಷಿಶ್ರೇಷ್ಠನೇ, ನೀನು ಸಂಪೂರ್ಣ ಪುರಾಣಗಳನ್ನು ವರ್ಣಿಸಿರುತ್ತೀ; ಆದರೆ ಅವುಗಳ ಗಹನವಾದ ಅರ್ಥವು ಕಲಿಯುಗದಲ್ಲಿ ಅಜ್ಞಜನರಿಗೆ ತಿಳಿಯದಾಗಿದೆ. ನೀನು ಜಯದೇವರೆಂಬ ಹೆಸರಿನಿಂದ ಅವತಾರಮಾಡಿ ಜನರನ್ನು ಉದ್ಧರಿಸು, ಎಂದು ಹೇಳಿದನು. ಅದನ್ನು ಕೇಳಿ ವ್ಯಾಸರು ಶ್ರೀ ನಾರಾಯಣನನ್ನು ಸಾಷ್ಟಾಂಗವಾಗಿ ವಂದಿಸಿ, ಜಗನ್ನಾಥಕ್ಷೇತ್ರದ ಸಮೀಪದಲ್ಲಿರುವ ತುಂದುಬಿಲ್ವವೆಂಬ ಊರಲ್ಲಿದ್ದ ಒಬ್ಬ ಬ್ರಾಹ್ಮಣನ ವಂಶದಲ್ಲಿ ಅವತಾರ ತಾಳಿದರು. ಹೀಗೆ ಶ್ರೇಷ್ಠವಾದ ಬ್ರಾಹ್ಮಣ ವರ್ಣದಲ್ಲಿ ಅವತರಿಸಿದ ಪರಾಶರ ನಂದನನು ಜಯದೇವನೆಂಬ ಹೆಸರಿನಿಂದ ದಿನದಿನಕ್ಕೆ ದೊಡ್ಡವನಾಗುತ್ತ ಹೋದನು. ತಾಯಿ-ತಂದೆಗಳು ಆತನ ಉಪನಯನವನ್ನು ಮಾಡಿದರು. ಅಧ್ಯಯನಮಾಡದೆ ಜಯದೇವನು ಸರ್ವಶಾಸ್ತ್ರ ನಿಪುಣನಾದನು. ನಕ್ಷತ್ರ ಸಮೂಹದಲ್ಲಿ ಚಂದ್ರನೂ, ಸಕಲ ಸಾಧನಗಳಲ್ಲಿ ಶುದ್ಧಭಾವವೂ ವ್ಯಕ್ತವಾಗಿ ತೋರುವಂತೆ ಆತನು ಬ್ರಾಹ್ಮಣವಂಶದಲ್ಲಿ ಒಳ್ಳೆಯ ಮಾತುಗಾರನೆಂದು ಪ್ರಸಿದ್ಧನಾದನು. ಕಲಿಯುಗದಲ್ಲಿ

ಹರಿಕೀರ್ತನವೇ ಮುಖ್ಯ ಸಾಧನವೆಂದು ರುಕ್ಮಿಣೀ ರಮಣನು ಉದ್ಧವನಿಗೆ ಹೇಳಿದಂತೆ ಜಯದೇವ ಕವಿಯು ಗೀತಗೋವಿಂದವೆಂಬ ಉತ್ತಮವಾದ ಹರಿಕೀರ್ತನ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದನು. ಪದ್ಮಪುರಾಣದಲ್ಲಿ ಹೇಳಿರುವ ರಾಧಾವಿಲಾಸವೆಂಬ ಇತಿಹಾಸವು ಅದರಲ್ಲಿ ವರ್ಣಿಸಲ್ಪಟ್ಟಿರುವದು. ಮೊದಲೇ ಶ್ರೀಹರಿಯ ಗುಣವರ್ಣನವು, ಅದರಲ್ಲಿ ವರಕವಿಯಾದ ಜಯದೇವನು ಪದ್ಯಗಳಿಂದ ವರ್ಣಿಸಿದ ಬಳಿಕ ಕೇಳುವದೇನು? ವಜ್ರಕ್ಕೆ ಕುಂದಣಹಾಕಿದ ಹಾಗಾಯಿತು. ಆ ಮನೋಹರವಾದ ಗ್ರಂಥವನ್ನು ಎಲ್ಲರೂ ಬರಕೊಂಡು ಹೋಗಿ ಗಟ್ಟಿಮಾಡಿ ಮನೆಮನೆಯಲ್ಲಿ ಗಾಯನಮಾಡತೊಡಗಿದರು. ಹೂವು ಒತ್ತಟ್ಟಿಗಿದ್ದರೂ ಅದರ ವಾಸನೆಯು ನಾಲ್ಕೂ ಕಡೆಗೆ ಹಬ್ಬುವಂತೆ ಗೀತಗೋವಿಂದದ ಕೀರ್ತಿಯು ಎಲ್ಲ ಕಡೆಯಲ್ಲಿಯೂ ಹಬ್ಬಿತು.

ಜಗನ್ನಾಥಕ್ಷೇತ್ರವನ್ನು ಸಾತ್ವಿಕನೆಂಬ ಅರಸನು ಆಳುತ್ತಿದ್ದನು. ಆತನಾದರೂ ಜಯದೇವ ಕವಿಯು ರಚಿಸಿದಂಥ ಒಂದು ಗ್ರಂಥವನ್ನು ರಚಿಸಿದ್ದನು. ಅರಸನಿಗೆ ತನ್ನ ಗ್ರಂಥದಲ್ಲಿ ಅಭಿಮಾನ ಬಹಳ. ಆತನು ತನ್ನ ಗ್ರಂಥದ ಹಲವು ಪ್ರತಿಗಳನ್ನು ಬರಿಸಿ ಅವುಗಳನ್ನು ಪಾಠಮಾಡಲೇಬೇಕೆಂದು ಬೇರೆ ಬೇರೆ ಜನರ ಕಡೆಗೆ ಕಳಿಸಿಕೊಟ್ಟನು. ಇದು ಸರ್ವಜ್ಞರಾದ ಪಂಡಿತರ ಮನಸ್ಸಿಗೆ ಒರಲಿಲ್ಲ. ಅವರು ಸಾತ್ವಿಕರಾಜನ ದುರಭಿಮಾನಕ್ಕೆ ಸಿಟ್ಟಾಗಿ ಜಗನ್ನಾಥನ ದೇವಾಲಯದಲ್ಲಿ ಸಭೆಯನ್ನು ಮಾಡಿ ಅರಸನಿಗೆ——ನೀನು ರಚಿಸಿದ ಗ್ರಂಥವು ನಿನಗೆ ಒಳ್ಳೆಯದಾಗಿ ತೋರುತ್ತಿರಬಹುದು; ಆದರೆ ಅದು ಜಯದೇವ ಕವಿಯ ಗ್ರಂಥವನ್ನು ಸರಿಗಟ್ಟುವದೆಂದು ಹೇಳಿಕೊಳ್ಳುತ್ತೀ, ಇದು ಸರಿಯಲ್ಲ. ತಿಳಿದವರು ತಮ್ಮ ಕೀರ್ತಿಯನ್ನು ತಮ್ಮ ಬಾಯಿಂದ ವರ್ಣಿಸುವದಿಲ್ಲ. ನೀನು ನಿನ್ನ ಗ್ರಂಥವನ್ನು ನೀನೇ ವರ್ಣಿಸಿ ಅದನ್ನು ಪಾಠಮಾಡುವದಕ್ಕಾಗಿ ಜನರಿಗೆ ಆಗ್ರಹ ಮಾಡುತ್ತಿರುವೆಯಲ್ಲ? ಇದು ಯಾವ ನ್ಯಾಯವು? (ವಿದ್ಯೆ, ಹರಿಕೀರ್ತನ, ಗುರುಮಂತ್ರ, ಬ್ರಹ್ಮಜ್ಞಾನ, ಪುಷ್ಪಹಾರ, ಮಹಾರತ್ನ ಇವುಗಳನ್ನು ತಕ್ಕೊಳ್ಳಿರಿ ತಕ್ಕೊಳ್ಳಿರೆಂದು ಆಗ್ರಹಮಾಡಿದರೆ ಅವುಗಳ ಬೆಲೆಯು ಕಡಿಮೆಯಾಗುವದಿಲ್ಲವೇ?) ನೃಪನಾಥನೇ, ನೀನು ಮನಸ್ಸಿನಲ್ಲಿ ಅಹಂಭಾವವನ್ನು ವಹಿಸಿ ಗ್ರಂಥ ರಚಿಸಿದ್ದು ವ್ಯರ್ಥವಾಯಿತು. ಅದು ಜಗನ್ನಾಥನ ಮನಸ್ಸಿಗೆ ಬರುವದಿಲ್ಲ.

ಬ್ರಾಹ್ಮಣರ ಈ ಸ್ಪಷ್ಟೋಕ್ತಿಗಳನ್ನು ಕೇಳಿ ಅರಸನು——ಪಂಡಿತವರ್ಯರೇ, ವ್ಯರ್ಥವಾದ ವಾದವು ಬೇಡ. ಇವೆರಡೂ ಗ್ರಂಥಗಳನ್ನು ಶ್ರೀ ಜಗನ್ನಾಥನ

ಬಳಿಯಲ್ಲಿ ಇಂದು ರಾತ್ರಿ ಇಡೋಣ. ಜಯದೇವನೂ ಶ್ರೀಹರಿಯ ಗುಣಗಳನ್ನು ವರ್ಣಿಸಿದ್ದಾನೆ. ನಾನಾದರೂ ಆ ಭಗವಂತನ ಗುಣಗಳನ್ನೇ ವರ್ಣಿಸಿದ್ದೇನೆ. ಶ್ರೀ ಹರಿಯು ಮನಸ್ಸಿಗೆ ಬಾರದ ಗ್ರಂಥವನ್ನು ಆತನು ಹೊರಗೆ ಚಲ್ಲಿ ಕೊಡಬಹುದು, ಎಂದು ಹೇಳಿದನು. ಅದಕ್ಕೆ ಪಂಡಿತರು ಒಪ್ಪಲು ಎರಡೂ ಗ್ರಂಥಗಳನ್ನು ರಾತ್ರಿ ಜಗನ್ನಾಥನ ಬಳಿಯಲ್ಲಿಟ್ಟು ಪೂಜಾರಿಗಳು ಬಾಗಿಲಿಗೆ ಕೀಲೀ ಹಾಕಿಕೊಂಡು ಬಂದರು. ಮರುದಿನ ಮುಂಜಾನೆ ಬ್ರಾಹ್ಮಣರು ಕಕ್ಕಡದ ಆರತಿಗಾಗಿ ಕೂಡಿದರು. ಪೂಜಾರಿಯು ಗುಡಿಗೆ ಬಂದು ಬಾಗಿಲು ತೆರೆಯಲು, ಶ್ರೀ ಜಗನ್ನಾಥನು ಜಯದೇವನ ಉತ್ತಮವಾದ ಗ್ರಂಥವನ್ನು ಬಳಿಯಲ್ಲಿಟ್ಟುಕೊಂಡು, ಅರಸನ ಗ್ರಂಥವನ್ನು ಆತನಿಗೆ ಅಪಮಾನವಾಗುವಂತೆ ಹೊರಗೆ ಚಲ್ಲಿ ಕೊಟ್ಟಿದ್ದನು. ಅದನ್ನು ನೋಡಿ ಬ್ರಾಹ್ಮಣರೆಲ್ಲರಿಗೆ ಪರಮಾನಂದವಾಗಿ ಅವರು ಜಯಜಯಕಾರದಿಂದ ಚಪ್ಪಳೆಗಳನ್ನು ಬಾರಿಸಿದರು. ಅರಸನು ನಾಚಿಕೆಯಿಂದ ತಲೆಯನ್ನು ಒಗ್ಗಿಸಿದನು. ಆಗ ಬ್ರಾಹ್ಮಣರು ಅರಸನಿಗೆ—ದೊರೆಯೇ, ಹಂಸವು ನೀರಕ್ಷೀರಗಳನ್ನು ಪರೀಕ್ಷಿಸುವಂತೆ ಲಕ್ಷ್ಮೀಪತಿಯು ಗ್ರಂಥಗಳನ್ನು ಪರೀಕ್ಷಿಸಿದನು. ಸಜ್ಜನರಿಗೂ-ದುರ್ಜನರಿಗೂ, ಭಾವಿಕರಿಗೂ-ಕಪಟಿಗಳಿಗೂ ಸಾಮ್ಯವು ಹ್ಯಾಗೆ ಆಗುವದು? ಅದರಂತೆ ಜಯದೇವನ ಕವಿತೆಗಳನ್ನು ನಿನ್ನ ಕವಿತೆಗಳು ಸರಿಗಟ್ಟಲಾರವು, ಎಂದು ಹೇಳಿದರು. ಅದನ್ನು ಕೇಳಿ ಅರಸನು ನಾಚಿಕೊಂಡು ಶ್ರೀ ಜಗನ್ನಾಥನ ಸಮ್ಮುಖಕ್ಕೆ ಹೋಗಿ ಕೈಜೋಡಿಸಿ ನಿಂತುಕೊಂಡು—ಭಗವಂತನೇ, ಇಂದು ನಿನ್ನ ಬಿರುದಾವಳಿಗಳ ನಿಜತ್ವವನ್ನು ತಿಳಕೊಂಡೆನು. ಪತಿತಪಾವನನೆಂಬ ನಿನ್ನ ಬಿರುದು ಸತ್ಯವಾದದ್ದಲ್ಲೆಂದು ನನಗೆ ತೋರುತ್ತದೆ. ಎಲ್ಲಘಟಗಳಲ್ಲಿ ಸಮಾನವ್ಯಾಪಕನಾದ ನೀನು ಒಬ್ಬನನ್ನು ನಿರಾಕರಿಸಿ, ಒಬ್ಬನನ್ನು ನನ್ನವನೆಂದು ತೋರಿಸುತ್ತೀ. ಭಕ್ತರೂ ಅಭಕ್ತರೂ ಇಬ್ಬರೂ ನಿನ್ನ ಸತ್ತೆಯಿಂದಲೇ ವರ್ತಿಸುವದಿಲ್ಲವೇ? ಎಲ್ಲ ಕೊಡಗಳಲ್ಲಿ ಸರಿಯಾಗಿ ಸೂರ್ಯನು ಪ್ರತಿಬಿಂಬಿಸುವಂತೆಯೂ, ಆಕಳಿಗೂ ಹುಲಿಗೂ ಉದಕವು ಸಮಾನವಾಗಿರುವಂತೆಯೂ ಯದುನಾಯಕನಾದ ನೀನು ಎಲ್ಲ ಪ್ರಾಣಿಗಳಲ್ಲಿಯೂ ಸರಿಯಾಗಿ ವಾಸಿಸುತ್ತೀ. ತಾಯಿಗೆ ಜಾಣಮಗನೂ ತಿಳಿಗೇಡಿ ಮಗನೂ ಇಬ್ಬರೂ ಸಮಾನರಿರುವಂತೆ ಎಲ್ಲರೂ ನಿನಗೆ ಸಮಾನರಲ್ಲವೇ? ಅನಂತನೇ! ಜಯದೇವನ ಮುಖದಿಂದ ಮಾತಾಡುವ ನೀನು ನನ್ನ ದೇಹದ ಕಾರ್ಯಗಳನ್ನು ನಡಿಸುವವರು ಯಾರೆಂಬದನ್ನು ಹೇಳು. ನೀನು ಸರ್ವವ್ಯಾಪಕನಿದ್ದು ನನ್ನ ಗ್ರಂಥವನ್ನು ನಿರಾಕರಿಸಿದೆಯಲ್ಲ! ಈ ಔದಾಸೀನ್ಯಕ್ಕಾಗಿ

ನಿನ್ನ ಚರಣದಲ್ಲಿ ನನ್ನ ಪ್ರಾಣವನ್ನು ಅರ್ಪಿಸುವೆನು, ಎಂದು ನುಡಿದನು. ಅರಸನ ಈ ಕರುಣಾವಚನಗಳನ್ನು ಕೇಳಿ ಜಗನ್ನಾಥನು ಪ್ರಸನ್ನನಾಗಿ ಅರಸನ ಗ್ರಂಥದೊಳಗಿನ ಇಪ್ಪತ್ತುನಾಲ್ಕು ಪದ್ಯಗಳನ್ನು ತಕ್ಕೊಂಡು ಜಯದೇವನ ಗ್ರಂಥದಲ್ಲಿ ತತ್ಕಾಲದಲ್ಲಿ ಬರೆದನು. ಇಷ್ಟರಿಂದ ಅರಸನ ಸಮಾಧಾನವು ಆಯಿತು.

ಅದೇ ಜಗನ್ನಾಥಕ್ಷೇತ್ರದಲ್ಲಿ ಒಬ್ಬ ಅಗ್ನಿಹೋತ್ರಿಯಾದ ಬ್ರಾಹ್ಮಣನಿಗೆ ಒಂದು ಕನ್ಯಾರತ್ನವು ಜನಿಸಿತ್ತು; ಬ್ರಾಹ್ಮಣನು ಕನ್ಯೆಯ ಅಪ್ರತಿಮ ಲಾವಣ್ಯವನ್ನು ನೋಡಿ ಆಕೆಗೆ ಪದ್ಮಾವತಿಯೆಂದು ಹೆಸರನ್ನಿಟ್ಟಿದ್ದನು. ದಿನದಿನಕ್ಕೆ ಪದ್ಮಾವತಿಯು ಬೆಳೆಯಹತ್ತಿದಳು. ಆಕೆಯ ಸುಗುಣಗಳನ್ನು ನೋಡಿ, ಬ್ರಾಹ್ಮಣನು ಆಕೆಯನ್ನು ಕೃಷ್ಣಾರ್ಪಣ ಪೂರ್ವಕವಾಗಿ ಜಗನ್ನಾಥನಿಗೆ ಅರ್ಪಣ ಮಾಡಿದನು. ಪದ್ಮಾವತಿಯ ರೂಪಲಾವಣ್ಯಗಳ ಖ್ಯಾತಿಯನ್ನುಕೇಳಿ ಹಲವು ಬ್ರಾಹ್ಮಣರು ಆಕೆಯನ್ನು ಕೇಳಲಿಕ್ಕೆ ಬಂದರು. ಅವರಿಗೆ ಆ ಅಗ್ನಿಹೋತ್ರಿಯು ಮಗಳನ್ನು ಜಗನ್ನಾಥನಿಗೆ ಅರ್ಪಿಸಿದ ಸಂಗತಿಯನ್ನು ತಿಳಿಸಿದನು. ಪದ್ಮಾವತಿಯು ಲಗ್ನಕ್ಕೆ ಬರಲು, ಜಗನ್ನಾಥನು ಬ್ರಾಹ್ಮಣನ ಸ್ವಪ್ನದಲ್ಲಿ ಬಂದು—ಬ್ರಾಹ್ಮಣನೇ, ನೀನು ಪದ್ಮಾವತಿಯನ್ನು ನನಗೆ ಅರ್ಪಿಸಿದೆ. ನಾನು ಕಲಿಯುಗದಲ್ಲಿ ಜನರ ಸಲುವಾಗಿ ಬೌದ್ಧಾವತಾರದಿಂದ ಇರುತ್ತೇನೆ. ಜಯದೇವಕವಿಯು ನನ್ನ ಅಂಶವಾಗಿರುತ್ತಾನೆ. ಅವನಿಗೆ ಪದ್ಮಾವತಿಯನ್ನು ಸಾಲಂಕೃತ ಕನ್ಯಾದಾನವಾಗಿ ಅರ್ಪಿಸು ಎಂದು ಹೇಳಲು, ಬ್ರಾಹ್ಮಣನಿಗೆ ಬಹಳ ಸಂತೋಷವಾಯಿತು. ಆತನು ಮಗಳನ್ನು ಜಯದೇವನಿಗೆ ಕನ್ಯಾದಾನಮಾಡಿಕೊಡುವದನ್ನು ನಿರ್ಧರಿಸಿದನು. ಬ್ರಾಹ್ಮಣರು ಘಟಿತಾರ್ಥವನ್ನು ನೋಡಲು, ಮೂವತ್ತಾರು ಗುಣಗಳು ಕೂಡಿಬಂದವು. ಕೂಡಲೆ ಬ್ರಾಹ್ಮಣನು ಅಲಂಕಾರಸಹಿತವಾಗಿ ಎಲ್ಲ ಸಾಹಿತ್ಯಗಳನ್ನು ಸಿದ್ಧಪಡಿಸಿ ಮಂಟಪದೇವತೆಯ ಪ್ರತಿಷ್ಠಾಪನೆಯನ್ನು ಮಾಡಿ, ವಿಘ್ನೇಶಪೂಜಾಪೂರ್ವಕವಾಗಿ ಸುಮುಹೂರ್ತದಲ್ಲಿ ಲಗ್ನ ಮಾಡಿ ಕೊಟ್ಟನು. ಬ್ರಾಹ್ಮಣರು ಮಂಗಲಾಷ್ಟಕಗಳನ್ನು ಅಂದರು. ಮಂಗಲವಾದ್ಯಗಳೊಡನೆ ನಾಲ್ಕುದಿನ ಲಗ್ನಸಮಾರಂಭವಾಯಿತು. ಬೀಗರು ಗೌರವದಿಂದ ಊರಿಗೆ ಕಳಿಸಲ್ಪಟ್ಟರು. ಲಗ್ನವಾದ ಬಳಿಕ ಜಯದೇವಕವಿಗಳು ಜಗನ್ನಾಥದಲ್ಲಿ ಇರಹತ್ತಿದರು.

ಜಯದೇವಕವಿಗಳು ಜಗನ್ನಾಥದಲ್ಲಿ ದಿನಾಲು ಪ್ರೀತಿಯಿಂದ ಹರಿಕೀರ್ತನ ಮಾಡತೊಡಗಿದರು. ಹೀಗಿರಲು ಪ್ರೇಮಲಸ್ವಭಾವದ ಭಾವಿಕನಾದ ಒಬ್ಬ ಉದಾರ ಸಾವುಕಾರನು ಜಯದೇವಕವಿಗಳ ಶಿಷ್ಯನಾದನು. ಕವಿಗಳು ಆತನ ಅಧಿಕಾರವನ್ನು

ನೋಡಿ ಸಮಾಧಾನಪಟ್ಟು, ಆತನನ್ನು ಅನುಗ್ರಹಿಸಿದರು, ಅಪಿಶ್ವಾಸಿಗಳೂ ಕೃಪಣರೂ, ಜನರ ಗುಣದೋಷಗಳನ್ನು ಎಣಿಸುವವರೂ, ಪರದ್ರವ್ಯಾಭಿಲಾಷಿಗಳೂ, ಭೂತದಯೆಯಿಲ್ಲದವರೂ ಆದ ಶಿಷ್ಯರು ಅನುಗ್ರಹಕ್ಕೆ ಪಾತ್ರರಾಗಲಾರರು. ಸಾವುಕಾರನು ಅಂಥ ಶಿಷ್ಯನಿದ್ದಿಲ್ಲ. ಆತನು ಮೇಲೆ ವರ್ಣಿಸಿದಂತೆ ಪರಮೋದಾರನೂ, ಭಾವಿಕನೂ, ಆಗಿದ್ದು ಕಾಯಾ-ವಾಚಾ-ಮನಸ್ಸುಗಳಿಂದ ಗುರುಸೇವಾ ತತ್ಪರನಾಗಿದ್ದನು. ಆತನು ಜಯದೇವಸ್ವಾಮಿಗಳನ್ನು ಪ್ರಾರ್ಥಿಸಿ ಅವರನ್ನು ರಥದಲ್ಲಿ ಕುಳ್ಳಿರಿಸಿಕೊಂಡು ತನ್ನ ಊರಿಗೆ ಕರಕೊಂಡುಹೋದನು. ಶ್ರೀಹರಿಯಗುಣ ಕೀರ್ತನವೂ, ಆತ್ಮಸ್ವರೂಪದ ಅಭ್ಯಾಸವೂ, ಬ್ರಹ್ಮಜ್ಞಾನವೂ ಸತ್ಸಮಾಗಮದ ಹೊರತು ಘಟಿಸಲಾರವು. ಹಾಗೆಯೇ ಔದಾರ್ಯ-ಧೈರ್ಯ-ನಿಷ್ಠಾ-ಜ್ಞಾನಗಳೂ, ಪ್ರಾಣಾಯಾಮ ವಜ್ರಾಸನಗಳೂ ಸತ್ಸಮಾಗಮದ ಹೊರತು ಸಾಧಿಸಲಾರವು. ಇದೇ ಕಾರಣದಿಂದ ಸಾವುಕಾರನು ಜಯದೇವಸ್ವಾಮಿಗಳನ್ನು ತನ್ನ ಊರಿಗೆ ಕರಕೊಂಡು ಹೋಗಿ ಉಲ್ಲಾಸದಿಂದ ಹಗಲುರಾತ್ರಿ ಅವರ ಸೇವೆ ಮಾಡ ತೊಡಗಿದನು. ಜಯದೇವಕವಿಗಳು ಆ ಊರಲ್ಲಿ ಹಗಲುರಾತ್ರಿ ಹರಿಕೀರ್ತನ ಮಾಡಿ ಜಡರನ್ನೂ ಮೂಢರನ್ನೂ ಅಜ್ಞಾನಿಗಳನ್ನೂ ಕೂಡ ಭಕ್ತಿಮಾರ್ಗಕ್ಕೆ ಹಚ್ಚಿದರು. ಅವರು ಒಂದು ತಿಂಗಳು ಸಾವುಕಾರನ ಊರಲ್ಲಿದ್ದು, ಜಗನ್ನಾಥಕ್ಕೆ ಹೋಗುವದಕ್ಕೆ ಅಪ್ಪಣೆ ಕೊಡಬೇಕೆಂದು ಸಾವುಕಾರನನ್ನು ಕೇಳಿದರು. ಆಗ ಸಾವುಕಾರನು. ಗುರುಗಳಿಗೆ—ಸ್ವಾಮಿ, ನನ್ನ ತಲೆಯ ಮೇಲೆ ವರದಹಸ್ತವನ್ನಿಟ್ಟು ಅನುಗ್ರಹಿಸಬೇಕು. ಯಾವಾಗಲೂ ಶಿಷ್ಯನ ಮೇಲೆ ಇದರಂತೆಯೇ ಕೃಪೆಮಾಡಬೇಕು ಎಂದು ಪ್ರಾರ್ಥಿಸಿ ಅವರನ್ನು ಕನಕಾಸನದಲ್ಲಿ ಕುಳ್ಳಿರಿಸಿ ಭಕ್ತಿಯಿಂದ ಪೂಜಿಸಿದನು. ಜಯದೇವಸ್ವಾಮಿಗಳಿಗೆ ಬೆಳ್ಳಿ-ಬಂಗಾರಗಳೂ ಮುತ್ತು-ರತ್ನಗಳೂ ಮಣ್ಣಿಗೆ ಸಮಾನವಾದ್ದರಿಂದ ಇವರಿಗೆ ಗುರುದಕ್ಷಿಣೆಯನ್ನೇನು ಕೊಡಬೇಕೆಂಬದು ಸಾವುಕಾರನಿಗೆ ತಿಳಿಯದಾಯಿತು. ಆತನು ಗುರುಪತ್ನಿಯಾದ ಪದ್ಮಾವತೀಮಾತಿಗೆ ಗುಪ್ತವಾಗಿ ವಸ್ತ್ರಾಲಂಕಾರಗಳನ್ನು ಕೊಡಬೇಕೆಂದು ಯೋಚಿಸಿ, ಜಯದೇವಸ್ವಾಮಿಗಳಿಗೆ ಯಾವಮಾತನ್ನೂ ತಿಳಿಸದೆ ಸುವರ್ಣಾಭರಣಗಳನ್ನೂ ಮುತ್ತು-ರತ್ನಗಳನ್ನೂ, ದ್ರವ್ಯ-ವಸ್ತ್ರಗಳನ್ನೂ ರಥದ ಬುಡದಲ್ಲಿಟ್ಟು ಮೇಲೆ ಆಸನವನ್ನು ಹಾಕಿ ಗುರುಗಳನ್ನು ಕುಳ್ಳಿರಿಸಿ ಅವರನ್ನು ಊರ ಹೊರತನಕ ಕಳಿಸುತ್ತ ಹೋದನು. ತಾನು ಮಾಡಿದ ಗುಪ್ತದಾನದ ಸಂಗತಿಯನ್ನು ತನ್ನ ಚತುರನಾದ ಸೇವಕನಿಗೆ ಹೇಳಿ, ಗುರುಪತ್ನಿಗೆ ನನ್ನ ವಂದನೆಪೂರ್ವಕವಾಗಿ

ಈ ರಥದೊಳಗಿನ ಪದಾರ್ಥಗಳನ್ನು ಅರ್ಪಿಸಬೇಕೆಂದು ಆಜ್ಞಾಪಿಸಿದನು. ರಥವು ಮುಂದಕ್ಕೆ ಸಾಗಿತು. ಸಾವುಕಾರನು ಗುರುಗಳ ಆಶೀರ್ವಾದವನ್ನು ಸ್ವೀಕರಿಸಿ ಅಸಮಾಧಾನದಿಂದ ಮನೆಗೆ ಬಂದನು.

ಈ ಮೇರೆಗೆ ಸಾವುಕಾರನು ಜಯದೇವಸ್ವಾಮಿಗಳಿಗೆ ಕೊಟ್ಟಿದ್ದ ಗುಪ್ತ ಧನದ ಸಂಗತಿಯನ್ನು ಇಬ್ಬರು ಕಳ್ಳರು ಅರಿತುಕೊಂಡಿದ್ದರು. ಅವರು ಮೆಲ್ಲ ಮೆಲ್ಲನೆ ರಥದ ಹಿಂದೆ ಸಾಗಿದರು. ಸಾವುಕಾರನು ಗುರುಗಳ ನೆರವಿಗೆ ಕಳಿಸಿದ ಮನುಷ್ಯನು ಸ್ವಲ್ಪ ಮಾರ್ಗ ಕ್ರಮಿಸಿದ ಮೇಲೆ ಗುರುಗಳಿಗೆ—ಸ್ವಾಮೀ, ಈ ದಿನ ನನ್ನ ಮನೆಯಲ್ಲಿ ಅತ್ಯಗತ್ಯದ್ದೊಂದು ಕಾರ್ಯವಿರುತ್ತದೆ. ನಾನು ಹೋಗ ದಿದ್ದರೆ ಅದು ಕೆಟ್ಟು ಹೋಗುವದು. ಸ್ವಾಮಿಗಳು ಅಪ್ಪಣೆಕೊಟ್ಟರೆ ಹೋಗು ವೆನು, ಎಂದು ಕೇಳಿಕೊಂಡನು. ಅದಕ್ಕೆ ಜಯದೇವಸ್ವಾಮಿಗಳು—ಹೆಂಡಿರು ಮಕ್ಕಳು, ದನ ಕರಗಳು, ಆಳುಹೋಳುಗಳು ಆಪ್ತೇಷ್ಟರು ಮುಂತಾದವರ ಮೇಲಿನ ಲೋಭದಿಂದ ಮನುಷ್ಯನು ಪರಾಧೀನನಾಗಿರುವನು. ಈ ಲೋಭ ಮೂಲಕವಾಗಿಯೇ ಆತನು ಹುಳಹುಪ್ಪಡಿ ಇರುವೆ ಮೊದಲಾದ ಯೋನಿಗಳಲ್ಲಿ ಭ್ರಮಿಸಬೇಕಾಗುವದು. ಒಟ್ಟಿಗೆ ಸಂಸಾರಿಗಳ ಬಾಳು ಪರಾಧೀನವಾದದ್ದು, ಎಂದು ಮನಸ್ಸಿನಲ್ಲಿ ವಿಚಾರಿಸಿ ಕನಿಕರಪಟ್ಟು, ನಿನ್ನ ಕೆಲಸವನ್ನು ಮಾಡಿಕೊಳ್ಳು ಹೋಗೆಂದು ಹೇಳಿ ಆಳನ್ನು ಕಳಿಸಿಬಿಟ್ಟು ತಾವೇ ರಥವನ್ನು ಹೊಡಕೊಂಡು ಹೋಗ ಹತ್ತಿದರು. ಅಷ್ಟರಲ್ಲಿ ಆ ಇಬ್ಬರು ಕಳ್ಳರು ಸ್ವಾಮಿಗಳ ಒಳಿಗೆ ಬಂದು ನಮಸ್ಕರಿಸಿ, ಬಕಪಕ್ಷಿಯು ಗಂಗಾತೀರದಲ್ಲಿ ಧ್ಯಾನಸ್ಥವಾಗಿ ಕುಳಿತುಕೊಳ್ಳು ವಂತೆ ರಥದ ಎರಡೂ ಮಗ್ಗಲುಗಳಿಂದ ದ್ರವ್ಯಧ್ಯಾನಮಗ್ನರಾಗಿ ತೀವ್ರದಿಂದ ಸಾಗಿದರು. ಜಯದೇವಸ್ವಾಮಿಗಳಿಗೆ ಕಳ್ಳರ ಲಕ್ಷಣವು ಗೊತ್ತಾಯಿತು. ಕುಟಿ ಲರನ್ನೂ, ದುರಾಚಾರಿಗಳನ್ನೂ, ಕಪಟಿಗಳನ್ನೂ, ಕಳ್ಳರನ್ನೂ, ವ್ಯಭಿಚಾರಿಗ ಳನ್ನೂ ಸೂಜ್ಞರು ದೂರದಿಂದಲೇ ಕಂಡು ಹಿಡಿಯುವರು. ಅದರಂತೆ ಜಯದೇ ವಸ್ವಾಮಿಗಳು ಕಳ್ಳರ ಗುರುತು ಹಿಡಿದು ಅವರನ್ನು ಕುರಿತು—ನಿಮ್ಮ ಮನ ಸ್ಸಿನ ಬಯಕೆಯನ್ನು ಹೇಳಿದರೆ ಪೂರ್ಣ ಮಾಡುವೆನು. ವಸ್ತ್ರಾಲಂಕಾರಗಳೂ, ಮುತ್ತುರತ್ನಗಳೂ, ಯಥೇಚ್ಛ ಧನವೂ ರಥದಲ್ಲಿರುವವು. ಅವನ್ನೂ ನಿಮಗೆ ಅರ್ಪಿಸಿದ್ದೇನೆ. ಇಗೋ ಬೇಕಾದಷ್ಟು ತೆಗೆದುಕೊಳ್ಳಿರಿ, ಎಂದು ಹೇಳಿ ರಥವನ್ನು ಬಿಟ್ಟು ತೀವ್ರವಾಗಿ ಮುಂದಕ್ಕೆ ಸಾಗಿದರು.

ಹೀಗೆ ಜಯದೇವಕವಿಗಳು ರಥವನ್ನು ಬಿಟ್ಟು ಮುಂದಕ್ಕೆ ಸಾಗಿದ್ದನ್ನು

ನೋಡಿ ಕಳ್ಳರು ಮನಸ್ಸಿನಲ್ಲಿ—ಈತನು ರಥವನ್ನು ಬಿಟ್ಟು ಹೋಗಿ ಎಲ್ಲ ವೃತ್ತಾಂತವನ್ನು ಸಾವುಕಾರನಿಗೆ ಹೇಳಿ ನಮ್ಮನ್ನು ಶಿಕ್ಷಿಸಬಹುದು. ಈತನನ್ನು ಹೀಗೆ ಬಿಡತಕ್ಕದ್ದಲ್ಲ. ಈತನ ಪ್ರಾಣಹರಣ ಮಾಡಿ ಇದ್ದ ಬಿದ್ದದ್ದನ್ನೆಲ್ಲ ತಕ್ಕೊಂಡು ಹೋಗಬೇಕು. ಎಂದು ಮನಸ್ಸಿನಲ್ಲಿ ಯೋಚಿಸಿ ಓಡುತ್ತ ಜಯದೇವಸ್ವಾಮಿಗಳ ಒಳಿಗೆ ಹೋದರು. ಅಷ್ಟರಲ್ಲಿ ಅವರಿಬ್ಬರ ಮನಸ್ಸಿನ ವಿಚಾರವು ಬದಲಾಯಿತು. ಅವರು ಕೊಲ್ಲುವದಕ್ಕಿಂತ ಈತನ ಹಸ್ತ-ಪಾದಗಳನ್ನು ಕಡಿದು ಈ ಗವಿಯಲ್ಲಿ ಚಲ್ಲಿಕೊಟ್ಟು ದ್ರವ್ಯಹರಣ ಮಾಡಬೇಕೆಂದು ನಿಶ್ಚಯಿಸಿ, ಹಾಗೆ ಮಾಡಿ ರಥವನ್ನು ತಕ್ಕೊಂಡು ಊರಿಗೆ ಹೋದರು. ಇತ್ತ ಜಯದೇವಸ್ವಾಮಿಗಳು ಅಂತರಂಗದಲ್ಲಿ ಪ್ರೇಮದಿಂದ ಲಕ್ಷ್ಮೀಪತಿಯನ್ನು ಧ್ಯಾನಿಸುತ್ತ ಜ್ಞಾನದೃಷ್ಟಿಯಿಂದ ವಿಚಾರಿಸಿ—ಈ ಅವಯವಘಾತವು ಕೇವಲ ಶರೀರಕ್ಕೆ ಸಂಬಂಧಿಸಿರುವದಲ್ಲದೆ ಶರೀರದಿಂದ ಭಿನ್ನನಾದ ಆತ್ಮನಿಗೆ ಇದರ ಸಂಬಂಧವಿಲ್ಲವು. ಆತನು ಸುಖ-ದುಃಖಗಳಿಂದ ನಿರ್ಲಿಪ್ತನಾಗಿರುವನು. ದೇಹವು ಸಕಲ ರೋಗಗಳ ಮನೆಯು, ಕಾಮಕ್ರೋಧಗಳ ಉಗಮಸ್ಥಾನವು, ಸತ್ವರಜಸ್ತಮಗಳೆಂಬ ಮೂರುಗುಣಗಳ ವಿಕಾರವು ದೇಹದಿಂದಲೇ ಉತ್ಪನ್ನವಾಗುವದು, ಎಂದು ತಿಳಿದು ಜಯದೇವಸ್ವಾಮಿಗಳು ದೇಹಾತೀತರಾಗಿ, ಕ್ಷೀರಸಾಗರ ವಿಲಾಸಿಯಾದ ಭಗವಂತನನ್ನು ಅಂತರಂಗದಲ್ಲಿ ಧ್ಯಾನಿಸತೊಡಗಿದರು.

ಇತ್ತ ಕ್ರೌಂಚ ದೇಶದ ರಾಜನು ಆ ದಿನ ಬೇಟೆಯಾಡುವದಕ್ಕೆ ಆ ಅರಣ್ಯಕ್ಕೆ ಒಂದಿದ್ದನು. ಆತನು ರಾತ್ರಿಯಾದದ್ದರಿಂದ ಅರಣ್ಯದಲ್ಲಿ ಸಂಚರಿಸುತ್ತಿರಲು ಆ ಗುಹೆಯಲ್ಲಿ ಅಕಸ್ಮಾತ್ತಾಗಿ ಪ್ರಕಾಶವು ಅವನ ಕಣ್ಣಿಗೆ ಬಿದ್ದಿತು. ಕೌತುಕದಿಂದ ಗುಹೆಯನ್ನು ಕುರಿತು ತೆರಳಿದ ಅರಸನು ಪರಮ ತೇಜಸ್ವಿಯಾದ ವಿಷ್ಣುಭಕ್ತನು ಪ್ರಕಾಶಮಾನನಾಗಿ ಧ್ಯಾನಮಾಡುತ್ತ ಕುಳಿತದ್ದನ್ನು ನೋಡಿದನು. ಮುಖದಿಂದ ರಾಮ-ಕೃಷ್ಣ-ಗೋವಿಂದ ಎಂಬ ನಾಮಗಳ ಜಪವು ನಡೆದಿತ್ತು. ಅದನ್ನು ನೋಡಿ ಅರಸನು ಸಾಷ್ಟಾಂಗವೆರಗಿ ಆ ವಿಷ್ಣುಭಕ್ತರನ್ನು ದಿಟ್ಟಿಸಿ ನೋಡತೊಡಗಿದನು. ಆತನ ಹಸ್ತ-ಪಾದಗಳು ಛೇದಿಸಿದ್ದವು. ಅದನ್ನು ನೋಡಿ ಅರಸನು ಭಯಪಟ್ಟನು. ಆತನು ಜಯದೇವ ಸ್ವಾಮಿಗಳನ್ನು ಕುರಿತು—ಸ್ವಾಮಿ, ತಮ್ಮ ಅವಸ್ಥೆಯು ಹೀಗಾದ ಕಾರಣವೇನೆಂದು ಕೇಳಲು, ಜಯದೇವ ಕವಿಗಳು—ಎಲ್ಲ ಇಂದ್ರಿಯಗಳಿಂದ ಭಿನ್ನನಾದ ನಾನು ಹಸ್ತ-ಪಾದ ರಹಿತನಾಗಿ ಹುಟ್ಟಿದಾಗಿನಿಂದ ಹೀಗೇ ಇರುತ್ತೇನೆಂದು ಹೇಳಿದರು.

ಕ್ರೌಂಚರಾಜನು ಜಯದೇವಸ್ವಾಮಿಗಳ ಈ ಮಾತುಗಳನ್ನು ಕೇಳಿ ಮನಸ್ಸಿನಲ್ಲಿ—ಇವರು ಪೂರ್ಣ ಜ್ಞಾನಿಗಳಾದ ವಿಷ್ಣುಭಕ್ತರಿರುವರೆಂದು ತಿಳಿದು ಅವರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ತನ್ನ ಪಟ್ಟಣಕ್ಕೆ ಕರಕೊಂಡು ಹೋದನು. ಅವನು ಜಯದೇವಕವಿಗಳನ್ನು ಕನಕಾಸನದಲ್ಲಿ ಕುಳ್ಳಿರಿಸಿ, ಪ್ರೀತಿಯಿಂದ ಪೂಜಿಸಿ ವಿನಯದಿಂದ ಅವರ ಅನುಗ್ರಹವನ್ನು ಸಂಪಾದಿಸಿದನು; ಮತ್ತು ಸ್ವಾಮಿಗಳನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ, ಪ್ರತಿನಿತ್ಯ ಸೇವಿಸುವಂತೆ ಆತನು ಸೇವಕರಿಗೆ ಅಪ್ಪಣೆಯನ್ನು ಮಾಡಿದನು. ಸೇವಕರು ತಮಗೆ ದಿನಾಲು ಸಂತದರ್ಶನವಾಗುವದೆಂತಲೂ, ಹರಿಕೀರ್ತನವು ಕಿವಿಗೆ ಬೀಳುವದೆಂತಲೂ ತಿಳಿದು ಸಂತುಷ್ಟರಾಗಿ ತಮ್ಮ ಭಾಗ್ಯೋದಯವಾಯಿತೆಂದು ಅರಸನಿಗೆ ವಿಜ್ಞಾಪಿಸಿದರು.

ಹೀಗಿರಲು ಒಂದಾನೊಂದುದಿನ ಅರಸನು ಮನಸ್ಸಿನಲ್ಲಿ—ಈ ದಿನ ಸ್ವಾಮಿಗಳವರ ಬಳಿಗೆ ಹೋಗಿ ಏನಾದರೂ ಸಾಧನವನ್ನು ಕೇಳಿಕೊಳ್ಳಬೇಕೆಂದು ಯೋಚಿಸಿ, ಸಿಂಹಾಸನದಲ್ಲಿ ಕುಳಿತಿರುವ ಜಯದೇವ ಸ್ವಾಮಿಗಳನ್ನು ಕುರಿತು ಕೈಜೋಡಿಸಿ ವಿನಯದಿಂದ—ಸ್ವಾಮಿ, ಕೃಪೆಮಾಡಿ ನನಗೆ ಯಾವದೊಂದು ಸಾಧನವನ್ನು ಹೇಳಬೇಕು, ಎಂದು ಕೇಳಿಕೊಂಡನು. ಅದಕ್ಕೆ ಸ್ವಾಮಿಗಳು—ನೃಪವರನೇ ನೀನು ಸಂತರನ್ನು ಸೇವಿಸಬೇಕು. ಇದಕ್ಕಿಂತ ಶ್ರೇಷ್ಠವಾದ ಅನ್ಯಸಾಧನವಿಲ್ಲವು. ಮನೆಗೆ ಬಂದ ಸಂತ ಜನರಿಗೆ ಇಚ್ಛಾಭೋಜನವನ್ನು ಮಾಡಿಸಿ, ವಸ್ತ್ರ, ದ್ರವ್ಯ, ಸುವರ್ಣಭೂಷಣಗಳಲ್ಲಿ ಬೇಡಿದ್ದನ್ನು ಅವರಿಗೆ ಕೊಡಬೇಕು. ಈ ಮೇರೆಗೆ ಸಂತರನ್ನು ಸೇವಿಸುವದರಿಂದ ವಾಸುದೇವನು ಸಂತುಷ್ಟನಾಗುವನು. ಭಗವಂತನಿಗೆ ಲಕ್ಷ್ಮೀದೇವಿಗಿಂತಲೂ ಸಂತರು ಅಧಿಕ ಪ್ರಿಯರಾಗಿರುವರು, ಎಂದು ಹೇಳಿದರು. ಅದಕ್ಕೆ ಅರಸನು—ಸ್ವಾಮಿ, ನಾನು ಅಜ್ಞಾನಿಯಾದ್ದರಿಂದ ಸಂತರನ್ನು ಹ್ಯಾಗೆ ಗೊತ್ತು ಹಿಡಿಯಲಿ? ಎಂದು ಕೇಳಿಕೊಳ್ಳಲು, ಸ್ವಾಮಿಗಳು—ಅರಸನೆ, ಸಂತರ ಚಿಹ್ನಗಳನ್ನು ಹೇಳುವೆನು, ಕೇಳು. ವೈಷ್ಣವರಾದ ಸಂತರು ಊರ್ಧ್ವತ್ರಿಪುಂಡ್ರ ದ್ವಾದಶ ನಾಮಗಳನ್ನು ಹಚ್ಚಿಕೊಂಡಿರುವರು. ಕೊರಳಲ್ಲಿ ತುಲಸೀಮಾಲೆಯನ್ನು ಧರಿಸಿರುವರು. ಈ ಚಿಹ್ನಗಳುಳ್ಳವರಿಗೆ ಅನನ್ಯಭಾವದಿಂದ ಶರಣುಹೋಗತಕ್ಕದ್ದು, ಎಂದು ಹೇಳಿದರು.

ಅರಸನು ಗುರುಗಳ ವಚನಗಳನ್ನು ತಲೆಯಲ್ಲಾಂತು, ಭಕ್ತಿಯಿಂದ ಸಂತರನ್ನು ಸೇವಿಸತೊಡಗಿದನು. ಆತನ ಕೀರ್ತಿಯು ನಾಲ್ಕೂ ಕಡೆಗೆ ಹಬ್ಬಲು, ಹಾದಿಕಾರರು ಗಿಡದ ನೆರಳನ್ನೂ, ಪಕ್ಷಿಗಳು ಆಹಾರದ ಸ್ಥಳವನ್ನೂ, ಇರುವೆ

ಗಳು ಸಕ್ಕರೆಯನ್ನೂ ಕುರಿತು ಬರುವಂತೆ ವೈಷ್ಣವರೂ, ಯಾಚಕರೂ ಅರಸನ ಬಳಿಗೆ ಬರತೊಡಗಿದರು. ಅರಸನ ಭಕ್ತಿಯನ್ನು ನೋಡುವದಕ್ಕಾಗಿ ಸಂತರು ಅರಮನೆಗೆ ಬಂದು ಮೊದಲು ಜಯದೇವಸ್ವಾಮಿಗಳ ದರ್ಶನವನ್ನು ಮಾಡಿಕೊಂಡು ಆ ಮೇಲೆ ಅರಸನನ್ನು ಕಾಣುತ್ತಿದ್ದರು. ಅರಸನು ಸಂತರನ್ನು ನೋಡಿದಕೂಡಲೆ ಸಾಷ್ಟಾಂಗವೆರಗಿ ಅವರನ್ನು ನಾಲ್ಕು ತಿಂಗಳು ಮನೆಯಲ್ಲಿ ಇಟ್ಟುಕೊಂಡು ಇಚ್ಛಾಭೋಜನವನ್ನುಮಾಡಿಸಿ, ಬೇಡಿದ ವಸ್ತುಗಳನ್ನು ಕೊಟ್ಟು ಸತ್ಕರಿಸಿ ಕಳಿಸುತ್ತಿದ್ದನು.

ಜಯದೇವಸ್ವಾಮಿಗಳ ಕೈ-ಕಾಲುಗಳನ್ನು ಕಡಿದ ಇಬ್ಬರು ಕಳ್ಳರು ಅರಸನ ಈ ಅಭೇದ ಭಕ್ತಿಯ ಸುದ್ದಿಯನ್ನು ಕೇಳಿ ತಾವೂ ಸಂತರಾಗಿ ಅರಸನನ್ನು ಕಂಡು ದ್ರವ್ಯವನ್ನು ಸಂಪಾದಿಸುವ ಯುಕ್ತಿಯನ್ನು ಯೋಚಿಸಿದರು. ಜಯದೇವಸ್ವಾಮಿಗಳು ಅರಸನ ಬಳಿಯಲ್ಲಿದ್ದ ವರ್ತಮಾನವನ್ನು ಅವರು ಅರಿತಿದ್ದಿಲ್ಲ. ಆ ಕಳ್ಳರು ಗೋಪೀಚಂದನವನ್ನು ತಕ್ಕೊಂಡು ದ್ವಾದಶ ನಾಮಗಳನ್ನು ಹಚ್ಚಿಕೊಂಡರು; ಕೊರಳಲ್ಲಿ ತುಲಸೀಮಾಲೆಗಳನ್ನು ಹಾಕಿಕೊಂಡರು. ಬೇಗಡಿಯು ದೂರದಿಂದ ಬಂಗಾರದ ಹಾಗೆ ಕಾಣುವಂತೆ ಕಳ್ಳರು ತೋರಿಕೆಯಲ್ಲಿ ಸಾಧು-ಸಂತರಂತೆ ಕಾಣತೊಡಗಿದರು. ಅವರ ಅಂತರಂಗದ ಕಪಟವು ಯಾರಿಗೂ ತಿಳಿಯದಾಯಿತು. ಅವರು ಪಟ್ಟಣಕ್ಕೆ ಬಂದು ರಾಜದರ್ಶನಕ್ಕಾಗಿ ಹೊರಟರು. ಅವರ ಕೈಯೊಳಗಿನ ಜಪಮಾಲೆಯು ವೈರಾಗ್ಯವನ್ನು ತೋರಿಸುತ್ತಿತ್ತು. ಅವರು ರಾಜದ್ವಾರಕ್ಕೆ ಹೋಗಿ ಎದುರಿನಲ್ಲಿ ನೋಡಲು, ಸಿಂಹಾಸನದಲ್ಲಿ ಕುಳಿತಿದ್ದ ಜಯದೇವ ಸ್ವಾಮಿಗಳು ಅಕಸ್ಮಾತ್ತಾಗಿ ಅವರ ಕಣ್ಣಿಗೆ ಬಿದ್ದರು. ಆಗ ಆ ಕಳ್ಳರ ಎದೆಯೊಡೆದು ನೀರಾಯಿತು. ಅವರ ಮನಸ್ಸಿನಲ್ಲಿ ಚಿಂತೆಯು ಉತ್ಪನ್ನವಾಯಿತು. ಒಬ್ಬರೊಬ್ಬರಿಗೆ ಕಣ್ಣುಸನ್ನೆಯಿಂದ ಸ್ವಾಮಿಗಳನ್ನು ತೋರಿಸಿ, ತಮ್ಮ ತಮ್ಮೊಳಗೆ—ನಾವಾಗಿಯೇ ಅಗ್ನಿಕುಂಡದಲ್ಲಿ ಹಾರಿಕೊಂಡಂತೆ ಆಯಿತು. ನಾವು ಕೈ-ಕಾಲು ಕಡಿದು ಚಲ್ಲಿದ ಜಯದೇವ ಕವಿಯು ಇಲ್ಲಿಯೇ ಇರುತ್ತಾನಲ್ಲ! ನಮ್ಮ ಕಪಟದ ಫಲವನ್ನು ನಾವು ಈಗಲೇ ಉಣ್ಣಬೇಕಾಯಿತು. ಕಪೋತ ಪಕ್ಷಿಯ ಜೋಡನ್ನು ಹೊಡೆಯಹೋದ ಬೇಟೆಗಾರರನ್ನು ಮಹಾಸರ್ಪವು ಕಡಿದಂತೆ ನಮ್ಮ ಗತಿಯಾಗುತ್ತದೆನ್ನುವಹಾಗೆ ತೋರುತ್ತದೆ, ಎಂದು ಮಾತಾಡುತ್ತ ಅವರಿಬ್ಬರು ಮುಂದಕ್ಕೆ ಹೋಗಲು, ಜಯದೇವ ಸ್ವಾಮಿಗಳು ದೂರದಿಂದಲೇ ಕಳ್ಳರ ಗುರುತು ಹಿಡಿದರು. ದೃಷ್ಟಿಗೆ ದೃಷ್ಟಿ ಕೂಡಿದ ಕೂಡಲೆ ಒಬ್ಬರ ಗುರುತು

ಒಬ್ಬರಿಗೆ ಹತ್ತಿತು. ಪ್ರಾಣಿಮಾತ್ರಗಳಲ್ಲಿ ವೈರವಿಲ್ಲದೆ ಸ್ವಾಭಾವಿಕವಾಗಿ ವರ್ತಿಸುತ್ತಿದ್ದ ಜಯದೇವ ಸ್ವಾಮಿಗಳಲ್ಲಿ ಕ್ಷಮಾ-ಶಾಂತಿಗಳು ಮೂರ್ತಿಮಂತವಾಗಿದ್ದವು. ಅವರಿಗೆ ಶತ್ರುಗಳು ಮಿತ್ರರಂತೆ ತೋರುತ್ತಿದ್ದರು. ಎರಡನೆಯವರ ದೋಷಗಳನ್ನು ಅವರು ಎಣಿಸುತ್ತಿದ್ದಿಲ್ಲ. ಜಗವೆಲ್ಲ ಅವರಿಗೆ ಬ್ರಹ್ಮರೂಪವಾಗಿ ಕಾಣುತ್ತಿತ್ತು. ತನ್ನ ಸಂಪತ್ತನ್ನೂ ರಥವನ್ನೂ ಕಳ್ಳರು ಒಯ್ದುದ್ದನ್ನು ಕೇಳಿ ಮನಸ್ಸಿನಲ್ಲಿ ಸಮಾಧಾನಪಡುವದೇ ಸಂತರ ಲಕ್ಷಣವಾಗಿರುವದು. ತನ್ನ ಮಕ್ಕಳೂ ಎರಡನೆಯವರ ಮಕ್ಕಳೂ ಅಳಹತ್ತಿದ್ದನ್ನು ನೋಡಿದ ಕೂಡಲೆ ಸರಿಯಾಗಿ ಚಡಪಡಿಸುವದೇ ಸಂತರ ಲಕ್ಷಣವಾಗಿರುವದು. ಅರಸನು ವಸ್ತ್ರಭೂಷಣಗಳನ್ನು ತಂದುಕೊಟ್ಟಾಗ್ಯೂ, ಬಡವನು ಸೊಪ್ಪಿನಪಲ್ಲೆಯನ್ನು ಕೊಟ್ಟಾಗ್ಯೂ ಸರಿಯಾಗಿ ಸಮಾಧಾನಪಡುವದು ಸಂತರ ಲಕ್ಷಣವಾಗಿರುವದು.

ಜಯದೇವಸ್ವಾಮಿಗಳು ತಮ್ಮ ಶತ್ರುಗಳು ಸಮೀಪಕ್ಕೆ ಬಂದದ್ದನ್ನು ನೋಡಿ ಸಿಂಹಾಸನದಿಂದ ಕೆಳಕ್ಕೆ ಹಾರಿಕೊಂಡರು. ಕಳ್ಳರು ಆತುರದಿಂದ ಬಂದು ಸ್ವಾಮಿಗಳ ಕಾಲುಗಳನ್ನು ಗಟ್ಟಿಯಾಗಿ ಹಿಡಕೊಂಡರು. ಅದನ್ನು ನೋಡಿ ಜಯದೇವಸ್ವಾಮಿಗಳು ಕಳ್ಳರನ್ನು ಅಪ್ಪಿಕೊಂಡು ಸೇವಕರನ್ನು ಕುರಿತು— ಎಲೆ! ಸೇವಕರೇ, ಸಂತರು ಇಲ್ಲಿಗೆ ಬಂದಿದ್ದಾರೆ. ಇವರನ್ನು ಸತ್ಕರಿಸೆಂದು ಅರಸನಿಗೆ ಹೇಳಿರಿ, ಎಂದು ಹೇಳಿದರು. ಸೇವಕರು ಗುರ್ರುಗಳ ಮಾತಿನಂತೆ ಅರಸನಿಗೆ ತಿಳಿಸಲು, ಆತನು ಬಂದು ಕಳ್ಳರಿಗೆ ಸಾಷ್ಟಾಂಗವೆರಗಿ ಬಗೆಬಗೆಯಿಂದ ಉಪಚರಿಸಿ ಪೂಜಿಸಿದನು. ಊಟವಾದ ಮೇಲೆ ಅರಸನು ಕಳ್ಳರನ್ನು ಕುರಿತು— ಸ್ವಾಮೀ, ನಿಮ್ಮ ಇಚ್ಛೆಗೆ ಬರುವವರೆಗೆ ನಮ್ಮ ಮನೆಯಲ್ಲಿ ಸ್ವಸ್ಥವಾಗಿದ್ದು, ಸೇವೆಯನ್ನು ಸ್ವೀಕರಿಸೋಣವಾಗಬೇಕು, ಎಂದು ಪ್ರಾರ್ಥಿಸಿದನು. ಅದಕ್ಕೆ ಕಳ್ಳರು, ಅವಶ್ಯವಾಗಿ ಇರುವೆವೆಂದು ಹೇಳಿದರು; ಆದರೆ ಅಂತರಂಗದಲ್ಲಿ ಅವರಿಗೆ ಸಮಾಧಾನವಿದ್ದಿಲ್ಲ. ಅರಸನ ಉಪಚಾರಗಳಿಂದ ಎಷ್ಟುಮಾತ್ರವೂ ಅವರಿಗೆ ಸುಖವಾಗಲಿಲ್ಲ. ಅವರು ತಮ್ಮ ಗತಿಯು ಕಡೆಗೆ ಏನಾಗುವದೋ ಎಂದು ಆದಿನ ರಾತ್ರಿ ಪರಸ್ಪರವಾಗಿ ಚಿಂತಿಸಿದರು. ಅವರು ತಮ್ಮತಮ್ಮೊಳಗೆ—ನಳಿಕಾಯಂತ್ರದ ಮೇಲೆ ಕುಳಿತ ಗಿಣಿಯು ಪಂಜರದಲ್ಲಿ ಬೀಳುವಂತೆ, ಇಲ್ಲವೆ ಮಾಂಸದ ಆಶೆಯಿಂದ ಮೀನವು ಗಂಟಲದಲ್ಲಿ ಗಾಣವನ್ನು ನಡಿಸಿಕೊಳ್ಳುವಂತೆ ಕಡೆಗೆ ನಮ್ಮ ಗತಿಯು ಆಗುವಹಾಗೆ ತೋರುತ್ತದೆ, ಎಂದು ಹಗಲುರಾತ್ರಿ ಚಿಂತಿಸುತ್ತ ಕ್ಷಯರೋಗಪೀಡಿತರಂತೆ ದಿನದಿನಕ್ಕೆ ಕ್ಷೀಣವಾಗತೊಡಗಿದರು.

ಒಂದಾನೊಂದು ದಿನ ಅರಸನು ಜಯದೇವಸ್ವಾಮಿಗಳನ್ನು ಕುರಿತು— ಸ್ವಾಮಿ, ಚರಣದಲ್ಲಿ ನನ್ನದೊಂದು ವಿನಂತಿಯಿರುವದು. ಎಷ್ಟೋ ಸಂತರು ಮನೆಗೆ ಬರುತ್ತಿರುವರು. ಅವರಿಗೆ ಸ್ವಾಮಿಯವರು ದೂರದಿಂದಲೇ ನಮಸ್ಕರಿಸುತ್ತಿದ್ದು, ಮೊನ್ನೆ ಬಂದಿರುವ ಇಬ್ಬರು ಸಂತರಿಗೆ ಮಾತ್ರ ಸಾಷ್ಟಾಂಗವೆರಗಿದ ಕಾರಣವೇನು? ಪ್ರತಿನಿತ್ಯ ನಾನು ಪರಿಪರಿಯಾಗಿ ಅವರನ್ನು ಉಪಚರಿಸುತ್ತಿದ್ದರೂ ದಿನದಿನಕ್ಕೆ ಅವರ ದೇಹಗಳು ಯಾಕೆ ಕೃಶವಾಗಹತ್ತಿರುವವು? ಎನ್ನಲು ಜಯದೇವಸ್ವಾಮಿಗಳು—ನೃಪನಾಥನೇ, ಸಂತರಿಗೆ ವಿಷಯಭೋಗವು ಸೇರುವದಿಲ್ಲ. ವಿರಕ್ತರಿಗೆ ಮಾಯಾಮಮತೆಗಳು ವಿಷದಹಾಗೆ ತೋರುತ್ತವೆ. ಎಷ್ಟೋ ವೈಷ್ಣವ ಜನರು ಬರುತ್ತಿದ್ದರೂ ಇವರು ಎಲ್ಲರಿಗಿಂತಲೂ ವಿರಕ್ತರಾಗಿರುವರು. ನೀನು ಭಾಗ್ಯಶಾಲಿಯಾದದ್ದರಿಂದಲೇ ಅವರು ನಿನ್ನ ಬಳಿಗೆ ಬಂದಿರುವರು. ಈಗ ಅವರು ಹೋಗಲಿಕ್ಕೆ ಇಚ್ಛಿಸುತ್ತಿದ್ದರೆ, ಅವರು ಬೇಡುವಷ್ಟು ದ್ರವ್ಯವನ್ನು ಕೊಟ್ಟುಕಳಿಸಿಕೊಡಬೇಕು, ಎಂದು ಹೇಳಿದರು. ಅದಕ್ಕೆ ಅರಸನು ಅವಶ್ಯವಾಗಿ ಹಾಗೆ ಮಾಡುವೆನೆಂದು ಹೇಳಿ ಸ್ವಾಮಿಯವರನ್ನು ನಮಸ್ಕರಿಸಿ ಹೊರಟು ಹೋದನು.

ಒಂದಾನೊಂದು ದಿನ ವೇಷಧಾರಿಗಳಾದ ಸಂತರು ಅರಸನನ್ನು ಕುರಿತು— ಅರಸನೇ, ನಾವು ತೀರ್ಥವಾಸಿಗಳು., ಇನ್ನು ನಾವು ನಮ್ಮ ಸ್ಥಳಕ್ಕೆ ಹೋಗುವೆವು, ಅನ್ನಲು ಅರಸನು—ಸ್ವಾಮಿ, ತಮ್ಮ ಇಚ್ಛೆಯು ಏನಿರುವದೆಂದು ಕೇಳಿದನು. ಅದಕ್ಕೆ ಸಂತರು ನಮಗೆ ಎರಡು ಚಕ್ಕಡಿ ದ್ರವ್ಯವನ್ನು ಕೊಡಬೇಕೆಂದು ಕೇಳಲು,, ಅದರಂತೆ ಅರಸನು ದ್ರವ್ಯವನ್ನು ಅರ್ಪಿಸಿ ಸಂಗಡ ದೂತರನ್ನು ಕಳುಹಿದನು. ಸಂತರು ಜಯದೇವಸ್ವಾಮಿಗಳನ್ನು ಕಂಡು ತೀವ್ರವಾಗಿ ಮಾರ್ಗಸ್ಥರಾದರು. ಅವರು ಮಾರ್ಗವನ್ನು ಕ್ರಮಿಸುತ್ತ ದೂರ ಅರಣ್ಯದಲ್ಲಿ ಹೋಗಲು, ರಾಜದೂತರು ವೇಷಧಾರಿಗಳಾದ ಸಂತರನ್ನು ಕುರಿತು—ಸ್ವಾಮಿ, ನಮ್ಮ ರಾಜಮಂದಿರಕ್ಕೆ ಎಷ್ಟೋ ಸಾಧುಸಂತರು ಬರುತ್ತಿರುವರು. ಅವರಲ್ಲಿ ನಿಮ್ಮ ಮೇಲೆಯೇ ಜಯದೇವಸ್ವಾಮಿಗಳು ವಿಶೇಷ ಕೃಪೆ ಮಾಡಿದ ಕಾರಣವೇನು? ಈ ಸಂಶಯವನ್ನು ನಿವಾರಿಸಬೇಕೆಂದು ಬೇಡಿಕೊಳ್ಳಲು, ವೇಷಧಾರಿಗಳು—ಎಲೈ ದೂತರೇ, ಪೂರ್ವಾಶ್ರಮದಲ್ಲಿ ನಾವೂ, ನಿಮ್ಮ ಸ್ವಾಮಿಗಳೂ ಒಬ್ಬ ದುಷ್ಟಕರ್ಮಿಯಾದ ಅರಸನ ಬಳಿಯಲ್ಲಿ ಇದ್ದೆವು. ನಿಮ್ಮ ಸ್ವಾಮಿಯವರ ಹೆಸರು ಜಯದೇವನು. ಆತನು ಆ ದುಷ್ಟ ಅರಸನ ಮಂತ್ರಿಯಾಗಿದ್ದನು, ನಾವು ಸೇವಕರಾಗಿ

ದ್ದೆವು. ಹೀಗಿರಲು, ಒಂದಾನೊಂದು ತಪ್ಪಿನ ಸಲುವಾಗಿ ಅರಸನು ಜಯದೇವ ಮಂತ್ರಿಯ ಮೇಲೆ ಸಿಟ್ಟಾಗಿ ಅರಣ್ಯದಲ್ಲಿ ಆತನ ಶಿರಚ್ಛೇದ ಮಾಡಬೇಕೆಂದು ವಿಧಿಸಿ, ಆ ಕೆಲಸಕ್ಕೆ ನಮ್ಮನ್ನು ನೇಮಿಸಿದನು. ಆಗ ನಾವು ಆತನನ್ನು ಅರಣ್ಯಕ್ಕೆ ಕರೆದೊಯ್ದು ಪ್ರಾಣಹರಣ ಮಾಡದೆ, ಕಯ್‌ಕಾಲುಗಳನ್ನು ಕಡಿದು, ಗವಿಯಲ್ಲಿ ಚಲ್ಲಿಕೊಟ್ಟುಬಿಟ್ಟೆವು. ನಾವು ತಿರುಗಿ ಪಟ್ಟಣಕ್ಕೆ ಹೋದಬಳಿಕ, ಅಂದಿನಿಂದಲೇ ರಾಜಸೇವೆಯನ್ನು ಬಿಟ್ಟು ವೈರಾಗ್ಯವನ್ನು ತಾಳಿ ವಿಷ್ಣುಭಕ್ತರಾದೆವು. ಬಳಿಕ ತೀರ್ಥ-ಯಾತ್ರೆಗಳನ್ನು ಮಾಡುತ್ತ ಮಾಡುತ್ತ ನಿಮ್ಮ ಪಟ್ಟಣಕ್ಕೆ ಬರಲು, ರಾಜಮಂದಿರದಲ್ಲಿ ಆದ ಉಭಯತರ ದರ್ಶನದಿಂದ ಒಬ್ಬರ ಗುರುತು ಒಬ್ಬರಿಗೆಹತ್ತಿ ಜಯದೇವಮಂತ್ರಿಗೆ ನಾವು ಮಾಡಿದ ಉಪಕಾರದ ಸ್ಮರಣವಾಯಿತು; ಆದ್ದರಿಂದಲೇ ಆತನು ಸಾಷ್ಟಾಂಗ ನಮಸ್ಕಾರ ಮಾಡುತ್ತ ನಮ್ಮ ಬಳಿಗೆ ಬಂದು, ಅರಸನಿಗೆ ಹೇಳಿ ನಮ್ಮ ಸೇವೆಯನ್ನು ಮಾಡಿಸಿದನು, ಎಂದು ಹೇಳಿದರು.

ವೇಷಧಾರಿಗಳು ನುಡಿದ ಈ ಸುಳ್ಳು ಮಾತುಗಳನ್ನು ಕೇಳಿ ಭೂಮಿಯು ಗಡಗಡನೆ ನಡುಗಿತು. ಅಸತ್ಯಕ್ಕಿಂತ ಹೆಚ್ಚಿನ ಪಾಪವು ಸೃಷ್ಟಿಯಲ್ಲಿ ಯಾವದೂ ಇಲ್ಲವು! ಸೇವಕರು ನೋಡುತ್ತಿರಲು, ಭೂಮಿಯು ಇಬ್ಭಾಗವಾಗಿ ವೇಷಧಾರಿಗಳು ಅದರಲ್ಲಿ ಹೋದರು. ಆಗ ಸೇವಕರು ಆಶ್ಚರ್ಯಪಟ್ಟು ಭಯದಿಂದ— ಅಹಾ! ಬಹು ಅನರ್ಥವಾಯಿತು, ಇನ್ನು ಅರಸನು ನಮ್ಮನ್ನು ಶಿಕ್ಷಿಸುವನಲ್ಲ! ಏನು ಮಾಡೋಣ, ಎಂದು ಚಿಂತಿಸತೊಡಗಿದರು. ಆಗ ಅವರಲ್ಲಿ ಒಬ್ಬನು— ಇದಕ್ಕೆ ಹೆದರುವದೇಕೆ? ಜಯದೇವಸ್ವಾಮಿಗಳ ಬಳಿಗೆ ಹೋಗಿ ಇದ್ದ ವರ್ತಮಾನವನ್ನು ಸತ್ಯವಾಗಿ ಹೇಳಿದರಾಯಿತು, ಎಂದು ಅದಕ್ಕೆ ಸೇವಕರೆಲ್ಲರೂ ಸಮ್ಮತಿಸಿ, ತಿರುಗಿ ಪಟ್ಟಣಕ್ಕೆ ಬಂದು, ನಡೆದ ವರ್ತಮಾನವನ್ನೆಲ್ಲ ಜಯದೇವಸ್ವಾಮಿಗಳ ಮುಂದೆ ಹೇಳಿದರು.

ಸೇವಕರ ಮಾತುಗಳನ್ನು ಕೇಳಿ ಜಯದೇವಸ್ವಾಮಿಗಳ ಕಣ್ಣುಗಳು ನೀರಿನಿಂದ ತುಂಬಿದವು. ಅವರು—ಎಲೈ ಪತಿತಪಾವನನಾದ ಕೃಷ್ಣನೇ, ಭಕ್ತವತ್ಸಲನೇ, ರುಕ್ಮಿಣೀರಮಣನೇ, ಜಗಜ್ಜೀವನನೇ, ನನ್ನ ಶತ್ರುಗಳಿಗೆ ಅಧೋಗತಿಯನ್ನು ಯಾಕೆ ಕೊಟ್ಟೆ? ವಿರೋಧಭಕ್ತಿಯನ್ನು ಮಾಡಿದ ನಿನ್ನ ವೈರಿಯಾದ ರಾವಣನಿಗೆ ಸಾಯುಜ್ಯಪದವಿಯನ್ನು ಕೊಟ್ಟ ನೀನು ನನ್ನ ವೈರಿಗೆ ಅಧೋಗತಿಯನ್ನು ಕೊಡಬಹುದೇ! ನೂರು ತಪ್ಪುಗಳನ್ನು ಮಾಡಿದ ಶಿಶುಪಾಲನಲ್ಲಿ ದಯೆ ತೋರಿದ ನೀನು ನನ್ನ ವೈರಿಯನ್ನು ಅಧೋಗತಿಗೆ ಯಾಕೆ ಒಯ್ದಿ! ಕಂಸ,

ಚಾಣೂರ, ಪೂತನೆ ಮೊದಲಾದವರಿಗೆ ಮೋಕ್ಷವನ್ನಿತ್ತ ನೀನು ನನ್ನ ವೈರಿಗಳಿಗೆ ಅಧೋಗತಿಯನ್ನು ಕೊಡಬಹುದೇ? ಎಂದು ಪ್ರಾರ್ಥಿಸಿದರು.

ಜಯದೇವ ಸ್ವಾಮಿಗಳ ಈ ಕರುಣಾವಾಣಿಯನ್ನು ಕೇಳಿ ಸಂತುಷ್ಟನಾದ ಶ್ರೀಹರಿಯು ಕೂಡಲೆ ಜಯದೇವಸ್ವಾಮಿಗಳಿಗೆ ದರ್ಶನವನ್ನು ಕೊಟ್ಟನು. ಆ ಮೇಘಶ್ಯಾಮನಾದ ನಾರಾಯಣನು ಚತುರ್ಭುಜಗಳುಳ್ಳ ಸಗುಣರೂಪದಿಂದ ಪ್ರಸನ್ನನಾದ ಕೂಡಲೆ, ಜಯದೇವಸ್ವಾಮಿಗಳ ಕೈ-ಕಾಲುಗಳು ಚಿಗಿತವು. ಇತ್ತ ವಿಷ್ಣುದೂತರು ವೇಷಧಾರಿಗಳನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ವೈಕುಂಠಕ್ಕೆ ಕರೆದೊಯ್ದರು. ಭಕ್ತರ ಮಹಿಮೆಯು ಅಗಾಧವಾದದ್ದು. ಅದನ್ನು ಬ್ರಹ್ಮಾದಿ ದೇವತೆಗಳೂ ತಿಳಿಯಲಾರರು. ಜಯದೇವಸ್ವಾಮಿಗಳ ಭಕ್ತಿಗೆ ಪ್ರ-ಸನ್ನನಾದ ರುಕ್ಮಿಣೀಪತಿಯು ಸ್ವಾಮಿಗಳನ್ನು ಕುರಿತು—ಜಯದೇವನೇ, ನಿನ್ನ ಭಕ್ತಿಯು ಧನ್ಯವಾದದ್ದು! ಕ್ಷಮಾ-ದಯಾ-ಶಾಂತಿಗಳು ನಿನ್ನಲ್ಲಿ ವಾಸಿಸುತ್ತಿರುವವು. ಶತ್ರು-ಮಿತ್ರರನ್ನು ಸರಿಯಾಗಿ ತಿಳಿಯುವವರಿಗೆ ಹೃಷಿಕೇಶನಾದ ನಾನು ಆಧೀನನಾಗಿರುತ್ತೇನೆ, ಎಂದು ನುಡಿದು ಆ ವೈಕುಂಠವಾಸಿಯಾದ ಶ್ರೀ ನಾರಾಯಣನು ಅದೃಶ್ಯನಾದನು.

ಜಯದೇವಸ್ವಾಮಿಗಳಿಗೆ ಕೈಕಾಲುಗಳು ಬಂದದ್ದನ್ನು ನೋಡಿ ಅರಸನ ಮನಸ್ಸಿಗೆ ಬಹಳ ಚಮತ್ಕಾರವಾಯಿತು. ಆತನು ಕೈಜೋಡಿಸಿ ಸ್ವಾಮಿಗಳನ್ನು ಕುರಿತು, ತಮ್ಮ ಹಿಂದಿನ ವೃತ್ತಾಂತವನ್ನು ಹೇಳೋಣವಾಗಬೇಕೆಂದು ಪ್ರಾರ್ಥಿಸಿದನು. ಜಯದೇವಸ್ವಾಮಿಗಳು ತಮ್ಮ ಪೂರ್ವವೃತ್ತಾಂತವನ್ನೆಲ್ಲ ಹೇಳಿದರು. ಆಗ ಜಯಜಯಕಾರದಿಂದ ವೈಷ್ಣವರು ನಾಮ ಗರ್ಜನವನ್ನು ಮಾಡಿದರು. ಅರಸನು ಕೂಡಲೆ ಪಲ್ಲಕ್ಕಿಯನ್ನು ಕಳಿಸಿ ಪತಿವ್ರತೆಯೂ, ಸೌಂದರ್ಯದ ಖನಿಯೂ, ಲಕ್ಷ್ಮಿಯ ಅವತಾರವೂ ಆದ ಪದ್ಮಾವತಿಯನ್ನು ಕರಿಸಿದನು. ಅರಸನು ವಸ್ತ್ರ ಭೂಷಣಾಲಂಕಾರಗಳನ್ನೂ, ಮುಕ್ತಾಹಾರಗಳನ್ನೂ ಗುರುಪತ್ನಿಗೆ ಅರ್ಪಿಸಿ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿದನು; ಮತ್ತು ಏಕಾಂತಗೃಹಕ್ಕೆ ಹೋಗಿ ತನ್ನ ಹೆಂಡತಿಯನ್ನು ಕುರಿತು—ಈ ಜಯದೇವರಾಣಿಯಾದ ಪದ್ಮಾವತೀದೇವಿಯು ನನ್ನ ಗುರುಮಾತೆಯಾಗಿರುವಳು. ನೀನು ಹಗಲಿರುಳು ಕೈಮುಟ್ಟಿ ಆ ಮಾತೆಯ ಸೇವೆಯನ್ನು ಮಾಡತಕ್ಕದ್ದು, ಎಂದು ಹೇಳಿದನು. ಅದನ್ನು ಕೇಳಿ ರಾಜಪತ್ನಿಯು ಅವಶ್ಯವಾಗಿ ಆಗಲೆಂದು ಹೇಳಿದಳು. ಅರಸನು ಮನಸ್ಸಿನಲ್ಲಿ ವಿಚಾರಮಾಡಿ ಕೂಡಲೆ ಸೇವಕರನ್ನು ಬಿಡಿಸಿ

ಜಯದೇವಸ್ವಾಮಿಗಳ ಸೇವೆಯನ್ನು ತನ್ನ ಕೈಮುಟ್ಟಿ ಮಾಡತೊಡಗಿದನು.

ಹೀಗಿರಲು, ಒಂದಾನೊಂದು ದಿನ ರಾಜಸ್ತ್ರೀಯರು ಸಭೆಯಲ್ಲಿ ಕುಳಿತಿದ್ದರು. ಪದ್ಮಾವತೀದೇವಿಯು ಅಗ್ರಸ್ಥಾನದಲ್ಲಿ ಕುಳಿತಿದ್ದಳು. ಅಷ್ಟರಲ್ಲಿ ಆಕಸ್ಮಾತ್ತಾಗಿ ಒಬ್ಬ ದೂತನು ಬಂದು, ರಾಜಪತ್ನಿಯ ತಮ್ಮನು ತೀರಿಕೊಂಡನೆಂತಲೂ, ಆತನ ಹೆಂಡತಿಯು ಶಾಂತ ಮನಸ್ಸಿನಿಂದ ಸಹಗಮನವನ್ನು ಮಾಡಿದಳೆಂತಲೂ ಹೇಳಿದನು. ಅದನ್ನು ಕೇಳಿ ಸ್ತ್ರೀಯರೆಲ್ಲ ತಟಸ್ಥರಾಗಿ ಆಶ್ಚರ್ಯಪಡತೊಡಗಿದರು. ಪದ್ಮಾವತಿಯು ಮಾತ್ರ ಸಮಾಧಾನದಿಂದ ಕುಳಿತಿದ್ದಳು. ಅದನ್ನು ನೋಡಿ ಎಲ್ಲ ಸ್ತ್ರೀಯರು ಆಶ್ಚರ್ಯಪಟ್ಟರು. ಆಗ ರಾಜಪತ್ನಿಯು ಕೈಜೋಡಿಸಿ ವಿನಯದಿಂದ ಪದ್ಮಾವತಿಯನ್ನು ಕುರಿತು—ತಾಯಿಯೇ, ನನ್ನ ತಮ್ಮನ ಹೆಂಡತಿಯು ಸತಿಹೋದದ್ದನ್ನು ಕೇಳಿ ತಮಗೆ ಆಶ್ಚರ್ಯವಾಗದಿರುವ ಕಾರಣವೇನು? ಮಾಯಾ ಮಮತೆಗಳನ್ನು ಬಿಟ್ಟು ಆ ಪತಿವ್ರತೆಯು ಪತಿಯೊಡನೆ ಹೋದದ್ದರಿಂದ ಏಳು ಜನ್ಮಗಳಲ್ಲಿಯೂ ಆಕೆಯು ಅದೇ ಪತಿಯನ್ನು ಹೊಂದುವಳಲ್ಲವೆ? ಎಂದು ಕೇಳಿದಳು. ಅದಕ್ಕೆ ಪದ್ಮಾವತಿಯು—ರಾಜಮಹಿಷಿಯೇ, ಪತಿಯ ಮರಣವಾರ್ತೆಯನ್ನು ಕೇಳಿ ಹೀಗೆ ಅಗ್ನಿಪ್ರವೇಶವನ್ನು ಯಾಕೆ ಮಾಡಬೇಕು? ತನ್ನ ಪತಿಯು ಮುಂದೆ ಹೋದ ಬಳಿಕ ಎಂದು ಭೆಟ್ಟಿಯಾಗುವನೋ ತಿಳಿಯದು. ಗಂಡನ ಮರಣದ ವಾರ್ತೆಯನ್ನು ಕೇಳಿದ ಕೂಡಲೆ, ಸೂರ್ಯಾಸ್ತದಿಂದ ಕಿರಣಗಳು ಅದೃಶ್ಯವಾಗುವಂತೆ, ಹೆಂಡತಿಯು ಪ್ರಾಣವನ್ನು ಕೊಡತಕ್ಕದ್ದು, ಎಂದು ಹೇಳಲು, ರಾಜಪತ್ನಿಯು ವಿಸ್ಮಿತಚಿತ್ತಳಾಗಿ, ಈಕೆಯು ಅನುಭವವಿಲ್ಲದೆ ಮಾತಾಡಿದ್ದರಿಂದ ಈಕೆಯ ಮಾತುಗಳು ಅಸತ್ಯವೆಂದು ಭಾವಿಸಿದಳು. ಅನುಭವವಿಲ್ಲದ ಬ್ರಹ್ಮಜ್ಞಾನವೂ, ಪ್ರಾಣವಿಲ್ಲದ ಶರೀರವೂ, ಈಶ್ವರ ಕೃಪೆಯಿಲ್ಲದೆ ಮಾತಾಡುವದೂ ವ್ಯರ್ಥವಾಗುವಂತೆ ಪದ್ಮಾವತಿಯ ಮಾತುಗಳು ರಾಜಪತ್ನಿಗೆ ವ್ಯರ್ಥವಾಗಿ ತೋರಿದವು. ಧನಧಾನ್ಯಗಳಿಲ್ಲದ ಮನೆಯೂ, ಮೂಗು ಇಲ್ಲದ ಮೋರೆಯೂ, ಮಹತ್ವವಿಲ್ಲದ ಕಾರಭಾರವೂ, ಬಂಜೆಹೆಂಗಸಿನ ಸೌಂದರ್ಯವೂ, ಧನಲುಬ್ಧನ ವ್ಯರ್ಥವಾದ ಪ್ರೇಮವೂ, ಸಾಧನವಿಲ್ಲದ ಶುದ್ಧಭಾವವೂ ನಿಷ್ಫಲವಾಗಿ ತೋರುವಂತೆ ರಾಜಪತ್ನಿಗೆ ಪದ್ಮಾವತಿಯ ಮಾತುಗಳು ಅಸತ್ಯವಾಗಿ ತೋರಿದವು. ಆಕೆಯು ತನ್ನ ಮಂತ್ರಿಯನ್ನು ಕರೆಸಿ ಸಮಯ ನೋಡಿ ಪದ್ಮಾವತಿಯ ಪತಿಯಾದ ಜಯದೇವನು ಮರಣಹೊಂದಿದನೆಂಬ ಸುಳ್ಳು ವರ್ತಮಾನವನ್ನು ಊರಲ್ಲಿ ಹುಟ್ಟಿಸೆಂದು ಹೇಳಿದಳು.

ಒಂದಾನೊಂದು ದಿನ ಅರಸನು ಜಯದೇವಸ್ವಾಮಿಗಳನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಮಂತ್ರಿಯೊಡನೆ ವನಕ್ರೀಡೆಗಾಗಿ ಅರಣ್ಯಕ್ಕೆ ಹೊರಟನು. ಆಗ ಮಂತ್ರಿಯು ಪಟ್ಟಣಕ್ಕೆ ಒಬ್ಬ ದೂತನನ್ನು ಅಟ್ಟಿ, ಜಯದೇವಸ್ವಾಮಿಗಳನ್ನು ಹುಲಿಯು ಕೊಂದಿತೆಂಬ ಸುದ್ದಿಯನ್ನು ಊರಲ್ಲಿ ಹಬ್ಬಿಸಿದನು; ಮತ್ತು ರಕ್ತದಲ್ಲಿ ವಸ್ತ್ರಗಳನ್ನು ತೊಯ್ಸಿ ಅವನ್ನು ಒಂದಿನಿಂದ ಕಳಿಸಿದನು. ಈ ವರ್ತಮಾನವನ್ನು ರಾಜಪತ್ನಿಯು ಕೇಳಿ ಕಪಟಭಾವದಿಂದ ಅಳುತ್ತ ಪದ್ಮಾವತಿಯು ಇದ್ದಲ್ಲಿಗೆ ಬಂದು—ಅವ್ವಾ, ಅನರ್ಥವಾಯಿತು; ಹುಲಿಯು ಜಯದೇವಸ್ವಾಮಿಗಳನ್ನು ಕೊಂದಿತಂತೆ, ಎಂದು ಹೇಳಿದಳು. ಅದನ್ನು ಕೇಳಿ ಪದ್ಮಾವತಿಯು—ಈ ಮಾತು ಸತ್ಯವೇನೆಂದು ರಾಜಪತ್ನಿಯನ್ನು ಕೇಳಲು, ಆಕೆಯು—ಸತ್ಯವು, ಸತ್ಯವು; ಜಯದೇವಸ್ವಾಮಿಗಳನ್ನು ಹುಲಿಯು ಕೊಂದದ್ದು ಮೂರು ಮೂರು ವೇಳೆಗೂ ಸತ್ಯವು," ಎಂದು ಹೇಳಿದಳು. ರಾಜಪತ್ನಿಯ ಈ ಮಾತುಗಳನ್ನು ಕೇಳಿದ ಕೂಡಲೆ ಪದ್ಮಾವತಿಯು ಪ್ರಾಣವನ್ನು ಬಿಟ್ಟಳು. ಸೂರ್ಯಾಸ್ತವಾಗುತ್ತಲೆ ಕಿರಣಗಳೂ, ದೀಪವು ಶಾಂತವಾದ ಕೂಡಲೆ ಪ್ರಕಾಶವೂ ಲೋಪಿಸುವಂತೆ ಪದ್ಮಾವತಿಯು ಪತಿಮರಣವಾರ್ತೆಯನ್ನು ಕೇಳಿದ ಕೂಡಲೆ ಮರಣ ಹೊಂದಿದಳು. ಇಷ್ಟರಲ್ಲಿ ಅರಸನು ಪಟ್ಟಣಕ್ಕೆ ಬಂದು ಆದ ಅನರ್ಥವನ್ನು ಪ್ರಧಾನಿಯ ಮುಖದಿಂದ ಕೇಳಿ, ಹೆಂಡತಿಯ ಪ್ರಾಣವನ್ನು ತಕ್ಕೊಳ್ಳಬೇಕೆಂದು ಮಾಡಿದನು; ಆದರೆ ಸ್ತ್ರೀಹತ್ಯದ ದೋಷವು ಬರುತ್ತದೆಂಬ ವಿಚಾರವು ಉತ್ಪನ್ನವಾಗಲು, ಆತನು ತಾನೇ ಅಗ್ನಿಪ್ರವೇಶ ಮಾಡಿ ದೇಹವನ್ನು ಬಿಡಬೇಕೆಂದು ನಿಶ್ಚಯಿಸಿದನು. ರಾಜಾಜ್ಞೆಯಿಂದ ಊರಹೊರಗೆ ಅಗ್ನಿಯು ಪ್ರದೀಪ್ತವಾಯಿತು. ಅರಸನು ಜಯದೇವಸ್ವಾಮಿಗಳನ್ನು ನಮಿಸುವದಕ್ಕಾಗಿ ಬಂದು—ಸ್ವಾಮೀ, ನನ್ನಿಂದ ದೊಡ್ಡ ಅನರ್ಥವು ಒದಗಿತು, ಎಂದು ಹೇಳಿದನು. ಜಯದೇವಸ್ವಾಮಿಗಳು ಅಂತರ್ಜ್ಞಾನದಿಂದ ಎಲ್ಲ ವರ್ತಮಾನವನ್ನು ತಿಳಿದು, ನೀನು ಪ್ರಾಣ ಕೊಡಲಾಗದೆಂದು ಅರಸನಿಗೆ ಹೇಳಿದರು; ಮತ್ತು ತಾವು ಪದ್ಮಾವತಿಯ ಶವದ ಬಳಿಗೆ ಬಂದು, ತಂಬೂರಿ ತಾಳಗಳನ್ನು ತಕ್ಕೊಂಡು ರಾಧಾವಿಲಾಸವನ್ನು ಅನ್ನತೊಡಗಿದರು. ಸದ್ಯಕ್ಕೆ ಲೋಕದಲ್ಲಿ ಪ್ರಸಿದ್ಧವಾಗಿರುವ ಇಪ್ಪತ್ತುನಾಲ್ಕು ಅಷ್ಟಕಪದ್ಯಗಳ ಗಾಯನವನ್ನೇ ಜಯದೇವಸ್ವಾಮಿಗಳು ತತ್‌ಕ್ಷಣದಲ್ಲಿಯೇ ಮಾಡಿದರು. ಆ ಮೇಲೆ ಸಾಬಡಿ ಭಾಷೆಯಿಂದ ಹರಿನಾಮಗಾಯನ ಮಾಡುತ್ತ ಅಂಗಳದಲ್ಲಿ ಕುಣಿಯ ಹತ್ತಿದರು—ಭಕ್ತವತ್ಸಲನೇ, ಗೋಪಾಲಕನೇ, ಜಗದ್ವಂದ್ಯನೇ,

ಗಜೇಂದ್ರನ ಕರುಣಾಸ್ವರವನ್ನು ಕೇಳಿ ನೀನು ಬೇಗದಿಂದ ಬಂದೆ. ಅದರಂತೆ ಪ್ರಹ್ಲಾದರಕ್ಷನೇ, ಮನಮೋಹನನೇ, ಬೇಗನೆ ಈಗ ಪ್ರಾಪ್ತನಾಗು. ದ್ರೌಪದಿಯ ಲಜ್ಜೆಯನ್ನು ನಿವಾರಿಸಿದವನೇ, ಪಾಂಡವರನ್ನು ರಕ್ಷಿಸಿದವನೇ, ಗೋಪಿಕಾಸ್ತ್ರೀಯರ ಮನಸ್ಸನ್ನು ರಂಜಿಸಿದವನೇ ಬೇಗನೆ ಈಗ ಪ್ರಾಪ್ತನಾಗು. ಅನಾಥರಿಗೆ ನಾಥನಾದವನೇ, ರುಕ್ಮಿಣೀವರನೇ, ಭೀಮಾತೀರವಾಸಿಯೇ, ದಿಗಂಬರನೇ, ಪತಿತಪಾವನನೇ, ಜಗತ್ತನ್ನು ಉದ್ಧರಿಸುವವನೇ ಬೇಗನೆ ಈಗ ಪ್ರಾಪ್ತನಾಗು.

ಜಯದೇವಸ್ವಾಮಿಗಳ ಈ ಕರುಣಾವಾಣಿಯನ್ನು ಕೇಳಿ ನಾರಾಯಣನು ಕೂಡಲೆ ಪ್ರತ್ಯಕ್ಷನಾದನು. ಆತನು ಜಯದೇವನನ್ನು ಅಪ್ಪಿಕೊಂಡು, ನಿನ್ನ ಅಷ್ಟಪದ್ಯಗಳ ಅಖಂಡ ಗಾಯನವನ್ನು ಮಾಡುವವರ ಹಾಗೂ ಪ್ರೀತಿಯಿಂದ ಕೇಳುವವರ ಬಳಿಯಲ್ಲಿ ಲಕ್ಷ್ಮೀಪತಿಯಾದ ನಾನು ಕೈಜೋಡಿಸಿ ನಿಂತುಕೊಳ್ಳುವೆನು, ಎಂದು ವರವನ್ನು ಕೊಟ್ಟನು. ಬಳಿಕ ಆ ಜಗಜ್ಜೀವನನು ಪದ್ಮಾವತಿಯನ್ನು ಆಲಿಂಗಿಸಿ ಸಜೀವಗೊಳಿಸಿದನು. ಪ್ರೇತವು ಎದ್ದ ಕೂಡಲೆ ಜಯಜಯಕಾರ ಧ್ವನಿಯು ಉತ್ಪನ್ನವಾಯಿತು. ದೇವತೆಗಳು ವಿಮಾನದಲ್ಲಿ ಕುಳಿತು ಪುಷ್ಪವೃಷ್ಟಿಯನ್ನು ಸುರಿಸಿದರು. ಎಲ್ಲರಿಗೂ ಬಹಳ ಸಂತೋಷವಾಯಿತು. ವೈಷ್ಣವವೀರರು ಪ್ರೇಮದಿಂದ ಗರ್ಜಿಸತೊಡಗಿದರು. ಅರಸನು ಭಕ್ತಿಯಿಂದ ಜಯದೇವಸ್ವಾಮಿಗಳಿಗೆ ನಮಸ್ಕಾರವನ್ನು ಮಾಡಿದನು. ಈ ಪ್ರಕಾರದ ಹಲವು ಮಹಿಮೆಗಳು ಜಯದೇವಸ್ವಾಮಿಗಳಿಂದ ಪ್ರಕಟಿಸಲ್ಪಟ್ಟವು.

ಜಯದೇವಸ್ವಾಮಿಗಳ ಈ ಉತ್ತಮವಾದ ಚರಿತ್ರದ ಗಾಯನ ಮಾಡುವವರಿಗೂ, ಶ್ರವಣ ಮಾಡುವವರಿಗೂ ಸಂಕಟಸಮಯದಲ್ಲಿ ಲಕ್ಷ್ಮೀಪತಿಯು ಪ್ರಸನ್ನನಾಗುವನೆಂದು ಮಹಾತ್ಮರಾದ ಮಹಿಪತಿಸ್ವಾಮಿಗಳು ಸಾರಿರುವರು.

ಈ ಜಯದೇವಕವಿಗಳ ಮಂಗಳಕರವಾದ ಚರಿತ್ರದಿಂದ ಸಂಸಾರಿಕರಾದ ನಾವು ಕಲಿಯತಕ್ಕ ಸಂಗತಿಗಳು ಹಲವು ಇರುವವು. ನಿರ್ಲೋಭತ್ವ, ಶತ್ರುಗಳನ್ನೂ ಮಿತ್ರರನ್ನೂ ಸರಿಯಾಗಿ ನೋಡುವದು, ಸರ್ವತ್ರ ಈಶ್ವರಭಾವವನ್ನು ವಹಿಸುವದು ಈ ಗುಣಗಳು ಮೂರ್ತಿಮಂತವಾಗಿ ಅವರಲ್ಲಿ ವಾಸಿಸುತ್ತಿದ್ದವು. ಈ ದೈವಿಕ ಗುಣಗಳಿಗಾಗಿಯೇ ಆ ಭಕ್ತಶಿರೋಮಣಿಗೆ ದೇವರು ಪ್ರತ್ಯಕ್ಷವಾಗಿದ್ದನು. ಈ ಉಜ್ವಲಗುಣಗಳ ಗಾಳಿತಗಲದ ನಾವು, ಶ್ರೀಜಯದೇವಕವಿಗಳ ಚರಿತ್ರವನ್ನು ಓದಲಿಕ್ಕೂ ಅನಧಿಕಾರಿಗಳೆಂದು ತಿಳಿಯತಕ್ಕದ್ದು; ಯಾಕಂದರೆ,

ಅವರ ಚರಿತ್ರವನ್ನು ಓದಿದಂತೆ ನಮಗೆ ಸಮಾಧಾನವಾಗುವದರ ಬದಲು, ಮನಸ್ಸಿನಲ್ಲಿ ಇಲ್ಲದ ವಿಕಲ್ಪಗಳು ಉತ್ಪನ್ನವಾಗುತ್ತವೆ. ಇಲ್ಲದ ಕಲ್ಪನೆಗಳು ತಲೆದೋರುತ್ತವೆ. ಕಾಮಣಿಯಾದವರ ಕಣ್ಣಿಗೆ ಜಗತ್ತೆಲ್ಲ ಹಚ್ಚಗೆ ತೋರುವಂತೆ, ಚಿತ್ತಶುದ್ಧಿಯಿಲ್ಲದ ನಮಗೆ ಶ್ರೀಜಯದೇವಸ್ವಾಮಿಗಳ ಚರಿತ್ರವು ಹೆಸರಿಡತಕ್ಕದ್ದಾಗಿ ತೋರುವದು ಆಶ್ಚರ್ಯವಲ್ಲ. ಹೀಗೆ ಹೆಸರಿಡದೆ ಭಕ್ತಿಭಾವವನ್ನು ತಾಳುವವನು ನಿಶ್ಚಯವಾಗಿ ಪುಣ್ಯವಂತನೆಂದು ತಿಳಿಯತಕ್ಕದ್ದು;

ಹೀಗೆ ಮಲಿನ ಚಿತ್ತವುಳ್ಳ ನಾವು ಸತ್ಪುರುಷರ ಚರಿತ್ರವನ್ನು ಹಳಿದು, ಇಲ್ಲವೆ ಉದಾಸೀನ ಮಾಡಿ ಮನಬಂದಂತೆ ನಡೆಯುವದು ಹಿತಕರವಲ್ಲ. ಜಯದೇವಕವಿಗಳಂತೆ ನಾವು ಆಗದಿದ್ದರೂ, ಕೆಲವುಮಟ್ಟಿಗಾದರೂ ಅವರ ಗುಣಗಳನ್ನು ಸಂಪಾದಿಸುವದು ತಕ್ಕದ್ದು. ಅದರಿಂದ ನಮ್ಮ ಸಂಸಾರಸುಖವೂ ಹೆಚ್ಚುವದು. ನಾವು ಧನಲುಬ್ಧರಾಗದೆ ಕೆಲವುಮಟ್ಟಿಗಾದರೂ ಉದಾರರಾದರೆ, ಆಪ್ತರೂ, ಇಷ್ಟರೂ, ನೆರೆಹೊರೆಯುವರೂ ನಮ್ಮನ್ನು ಪ್ರೀತಿಸುವರು, ಅದರಿಂದ ನಮಗೆ ಸುಖವಾಗುವದು. ಅದರಂತೆ ಆದಷ್ಟು ಶತ್ರುಭಾವವನ್ನು ಕಡಿಮೆ ಮಾಡುವದರಿಂದ ನಮ್ಮ ಮನಸ್ಸಿನ ಸಮಾಧಾನವು ಹೆಚ್ಚುವದು; ಕೈಕೊಂಡ ಕಾರ್ಯಗಳು ಸುಲಭವಾಗಿ ಸಾಧಿಸುವವು; ಮಿತ್ರತ್ವವು ಹೆಚ್ಚಾದ ಮಾನದಿಂದ ಆನಂದವೂ ಹೆಚ್ಚುವದು. ಇದೇ ಮೇರೆಗೆ ದೇವರಲ್ಲಿ ಭಕ್ತಿಯಿಡುತ್ತ ಹೋಗುವದರಿಂದ ಪರಲೋಕದ ಭಯವು ಕಡಿಮೆಯಾಗುವದು; ಈ ಲೋಕದಲ್ಲಿ ಶಾಂತಿಯೂ ಹೆಚ್ಚುವದು. ಈ ಗುಣಗಳು ಜಯದೇವಸ್ವಾಮಿಗಳಷ್ಟು ನಮ್ಮಲ್ಲಿ ಹೆಚ್ಚಿದರೆ, ನಾವೂ ಪ್ರತ್ಯಕ್ಷ ದೇವರನ್ನು ಕಾಣಬಹುದು.

ಸಾಂಸಾರಿಕರಾದ ನಮ್ಮಿಂದ ಒಮ್ಮೆಲೆ ಈ ಗುಣಗಳನ್ನು ಸಂಪಾದಿಸುವದು ಆಗದು; ದಿನಸಾಧನದಿಂದ ಸಂಪಾದಿಸಿದರೆ ಸಂಪಾದಿಸಬಹುದು. ಎಲ್ಲ ಪಾಪಗಳಿಗೆ ಲೋಭವು ಮೂಲವಾದದ್ದರಿಂದ ಮೊದಲು ಅದನ್ನು ಬಿಡುವ ಸಾಧನಮಾಡಬೇಕು. ಲೋಭದಲ್ಲಿ ಧನಲೋಭವು ಹೆಚ್ಚಿನದು. ಅದನ್ನುಷ್ಟು ಬಿಡುತ್ತಹೋದರೆ ಉಳಿದ ವಸ್ತುಗಳ ಮೇಲಿನ ಲೋಭವನ್ನು ಬಿಡುವದಕ್ಕೆ ಪ್ರಯಾಸವಾಗುವದು. ಧನಲೋಭವನ್ನು ಬಿಡಲಿಚ್ಛಿಸುವವನು ಮೊದಲು ಅನ್ಯಾಯದ ಗಳಿಕೆಗೆ ಮನಸ್ಸು ಮಾಡುವದನ್ನು ಬಿಡಬೇಕು; ಆ ಮೇಲೆ ತನ್ನ ಹಾಗು ತನ್ನವರ ಹಿತಕ್ಕಾಗಿ ಜೀನತನ ಮಾಡದೆ ವೆಚ್ಚ ಮಾಡುವದನ್ನು ಕಲಿಯಬೇಕು; ತರುವಾಯ ಜನರು ಹೊಗಳಬೇಕೆಂಬ ಉದ್ದೇಶದಿಂದಲೇ ಆಗಲೊಲ್ಲದೇಕೆ, ದಾನಧರ್ಮ ಮಾಡ

ಬೇಕು. ಹೀಗೆ ಅನ್ಯಾಯದ ಗಳಿಕೆಗೆ ಹೇಸಿ, ತನ್ನ ಹಾಗೂ ತನ್ನವರ ಮೇಲಿನ ಲೋಭದಿಂದ ಧನವ್ಯಯ ಮಾಡಲಿಕ್ಕೂ, ಹೊಗಳಿಕೆಗೆ ಮೆಚ್ಚಿ ದಾನಧರ್ಮ ಮಾಡಲಿಕ್ಕೂ ಹತ್ತಿದಾಗ ಮನಸ್ಸು ಸೋಯದ ಹಾಗಾಯಿತೆಂದರೆ, ಲೋಭ ತ್ಯಾಗದ ಮೊದಲನೆಯ ಮೆಟ್ಟನ್ನು ಹತ್ತಿದೆವೆಂದು ತಿಳಿಯಬೇಕು. ಇಷ್ಟಾದ ಬಳಿಕ ಪ್ರಾಚೀನ ಪುಣ್ಯದಿಂದ ಸತ್ಸಮಾಗಮವಾದರೆ, ಶ್ರೀ ಜಯದೇವಕವಿಗಳ ಶಿಷ್ಯರಂತೆ ನಾವೂ ಲೋಭವನ್ನು ನಾಶಗೊಳಿಸುವ ಪಾತ್ರತೆಯನ್ನು ಪಡೆಯ ಬಹುದು.

ಇದರಂತೆ ಶತ್ರುಗಳನ್ನು ಮಿತ್ರರಂತೆ ನೋಡಲಿಕ್ಕೆ ಸಾಧನಮಾಡುವವರು ಮೊದಲು ತಮ್ಮ ಬಂಧುಬಳಗದವರ ವಿಷಯವಾಗಿಯೂ, ಮಿತ್ರರ ವಿಷಯವಾಗಿ ಯೂ ಎಂದೂ ಶತ್ರುಭಾವವು ಉತ್ಪನ್ನವಾಗದಂತೆ ಎಚ್ಚರ ಪಡಬೇಕು; ತರು ವಾಯ ಸ್ವಾರ್ಥಬುದ್ಧಿಯಿಂದೇ ಆಗಲಿ ನೆರೆಹೊರೆಯವರೊಡನೆ ದ್ವೇಷವನ್ನು ಬಳಿಸಬಾರದು. ಆಮೇಲೆ ಶತ್ರುಗಳ ವಿಷಯದ ತಮ್ಮಲ್ಲಿಯ ಶತ್ರುಭಾವ ವನ್ನು ಕಡಿಮೆಮಾಡತೊಡಗಬೇಕು. ಹೀಗೆ ಸಾತ್ವಿಕವೃತ್ತಿಯನ್ನು ತಾಳುತ್ತ ಹೋಗುತ್ತಿರಲು, ಪ್ರಾಚೀನಪುಣ್ಯದಿಂದ ಸತ್ಸಮಾಗಮವಾದರೆ, ಶ್ರೀ ಜಯ ದೇವ ಸ್ವಾಮಿಗಳ ಶಿಷ್ಯರಂತೆ ನಾವೂ ಶತ್ರುಭಾವವನ್ನು ನೀಗಬಹುದು.

ಈಶ್ವರಭಕ್ತಿಯ ವಿಷಯವಾಗಿಯೂ ಹೀಗೆಯೇ ಸಾಧನ ಮಾಡಬೇಕು. ಮೊದಲು ಜನ್ಮ ಕೊಟ್ಟು ರಕ್ಷಿಸಿದ ತಾಯಿ-ತಂದೆಗಳನ್ನೂ, ವಿದ್ಯಾದಾನಮಾಡಿದ ಗುರುಗಳನ್ನೂ, ಹಿತೋಪದೇಶ ಮಾಡುವ ಹಿರಿಯರನ್ನೂ, ಪ್ರಾಣ-ಧನಗಳನ್ನು ರಕ್ಷಿಸುವ ಅರಸನನ್ನೂ ವಿಶ್ವಾಸದಿಂದ ಮನ್ನಿಸಲಿಕ್ಕೆ ಕಲಿಯಬೇಕು. ತರು ವಾಯ ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡುವ ಶೂರರನ್ನೂ, ಸದ್ಗುಣಿಗ ಳನ್ನೂ, ಸದಾಚಾರ ಸಂಪನ್ನರನ್ನೂ ಆದರಿಸತೊಡಗಬೇಕು. ಆಮೇಲೆ ಮನ ಸ್ಸನ್ನು ರಮಿಸುವ ತೀರ್ಥಗಳಲ್ಲಿಯೂ, ಕ್ಷೇತ್ರಗಳಲ್ಲಿಯೂ, ದೇವಸ್ಥಾನಗಳಲ್ಲಿಯೂ ವಿಶ್ವಾಸವಿಡಬೇಕು. ಹೀಗೆ ದೈವಿಕಭಾವನೆಯು ಹೆಚ್ಚುತ್ತಾಹೋಗುತ್ತಿರಲು, ಪ್ರಾಚೀನಪುಣ್ಯದಿಂದ ಸತ್ಸಮಾಗಮವಾದರೆ, ಜಯದೇವಸ್ವಾಮಿಗಳ ಶಿಷ್ಯರಂತೆ ನಾವೂ ಸರ್ವತ್ರದಲ್ಲಿ ಈಶ್ವರಭಾವವನ್ನು ತಾಳಬಹುದು.

ಹೀಗೆ ಸತ್ಸಮಾಗಮದ ಯೋಗದಿಂದ ನಿರ್ಲೋಭತ್ವಾದಿ ಮೇಲಿನಮೂರು ಗುಣಗಳನ್ನು ಸಂಪಾದಿಸಿದವರಲ್ಲಿಯೇ ಭೂತದಯವು ನೆಲೆಗೊಳ್ಳುವದು. ಭೂತ

ದಯೆಯೇ ಜ್ಞಾನವು. ಕಂಡವರಲ್ಲಿ ಭೂತದಯೆಯು ಇರಲಾರದು; ಆದ್ದರಿಂದ ಈ ಭವಸಾಗರದಿಂದ ಪಾರಾಗಲೆಳಿಸುವವನು ಸತ್ಸಹವಾಸದ ಯೋಗದಿಂದ ಭೂತ ದಯೆಯನ್ನು ಸಂಪಾದಿಸತಕ್ಕದ್ದು. ತಮ್ಮಲ್ಲಿ ಭೂತದಯೆಯು ಇರುತ್ತದೋ ಇಲ್ಲವೋ ಎಂಬದನ್ನು ಸಂಸಾರಿಕರಿಗೆ ನೋಡಿ ಕೊಳ್ಳುವದಕ್ಕಾಗಿ ಒಂದು ಸುಲ ಭವಾದ ಉಪಾಯುವನ್ನು ಮೇಲಿನ ಚರಿತ್ರದಲ್ಲಿ ಹೇಳಿರುತ್ತದೆ: ಅದೇನಂದರೆ— ತನ್ನ ಮಕ್ಕಳು ಅತ್ತದ್ದನ್ನು ನೋಡಿ ಚಡಪಡಿಸುವಷ್ಟೇ, ಪರರ ಮಕ್ಕಳು ಅತ್ತ ದ್ದನ್ನು ನೋಡಿ ಚಡಪಡಿಸುವವನಲ್ಲಿ ಭೂತದಯವು ಇರುತ್ತದೆಂದು ತಿಳಿಯ ಬೇಕು. ಸಂಸಾರಿಕರಾದ ನಾವು ಈ ಒರೆಗಲ್ಲಿಗೆ ತಿಕ್ಕಿ ನಮ್ಮ ಭೂತದಯುವನ್ನು ಪರೀಕ್ಷಿಸಿ, ಸಾಧನ ಮಾಡತಕ್ಕದ್ದು.

ಸಾರಾಂಶ, ನಾವು:—

೧ ಧನವನ್ನು ಒಚ್ಚಿಟ್ಟು, ಮಲೆಯುಗೊಡದೆ, ಸ್ವ ಪರಹಿತಕ್ಕಾಗಿ ಅದನ್ನು ವೆಚ್ಚಮಾಡುತ್ತಿರಬೇಕು.

೨ ಧರ್ಮವಾಸನೆಯುಳ್ಳವರಾಗಿರಬೇಕು.

೩ ಶತ್ರುಭಾವವನ್ನು ಕಡಿಮೆಮಾಡುವ ಸಾಧನವಿಡಬೇಕು.

೪ ತಂದೆ-ತಾಯಿಗಳಲ್ಲಿ, ಗುರುಹಿರಿಯರಲ್ಲಿ ವಿಶ್ವಾಸವಿಡಬೇಕು.

೫ ರಾಜನಿಷ್ಠನಾಗಿರಬೇಕು.

೬ ಸದ್ಗುಣಿಗಳನ್ನೂ, ಸದಾಚಾರಸಂಪನ್ನರನ್ನೂ ಆದರಿಸಬೇಕು.

೭ ಆಸ್ತಿಕಭಾವವುಳ್ಳವರಾಗಿರಬೇಕು.

೮ ದೃಢನಿಶ್ಚಯದಿಂದ ಸತ್ಸಮಾಗಮವನ್ನು ಮಾಡಬೇಕು.

ಅಂದರೆ, ನಾವು ಶ್ರೀ ಜಯದೇವಸ್ವಾಮಿಗಳ ಚರಿತ್ರವನ್ನು ಓದಿದ್ದು ಸಾರ್ಥಕವಾಗುವದು.



# ಶ್ರೀ ನಾಮದೇವ.



ಈ ಸೃಷ್ಟಿಯಲ್ಲಿ ಅಧರ್ಮಪ್ರವೃತ್ತಿಯು ಆದ ಕೂಡಲೆ ಅದನ್ನು ಪರಿಹರಿಸುವದಕ್ಕಾಗಿ ಪರಮಾತ್ಮನು ಅನೇಕ ಉಪಾಯಗಳನ್ನು ಕೈಕೊಳ್ಳುತ್ತಾನೆ. ಅವುಗಳಲ್ಲಿ ಅವತಾರಕಾರ್ಯವು ಮಹತ್ವವಾದದ್ದು. ಈ ಅವತಾರಗಳೇ ಈಶ್ವರ ವಿಭೂತಿಗಳು. ಅವು ಈ ಲೋಕದಲ್ಲಿ ಅನೇಕ ಅಮಾನುಷ ಕೃತ್ಯಗಳನ್ನು ತೋರಿಯಾಗಲಿ, ಸದುಪದೇಶವನ್ನು ಮಾಡಿಯಾಗಲಿ, ಬೇರೆ ಬಗೆಯಿಂದಲೇ ಆಗಲಿ, ಧರ್ಮವೃತ್ತಿಯನ್ನು ಜಾಗ್ರತೆಗೊಳಿಸಿ ಲೋಕೋದ್ಧಾರ ಮಾಡುತ್ತವೆ. ಇಂಥ ವಿಭೂತಿಗಳಲ್ಲಿ ಈ ಚರಿತ್ರನಾಯಕನೊಬ್ಬನಾಗಿದ್ದಾನೆ.

ಒಂದು ಸಮಯದಲ್ಲಿ ಶ್ರೀಹರಿಯು ಕ್ಷೀರಸಾಗರದಲ್ಲಿದ್ದಾಗ ಉದ್ಧವನನ್ನು ಕರೆಯಿಸಿ—ನನ್ನ ಪ್ರೇಮಪಾತ್ರನೇ, ನೀನು ಮೃತ್ಯುಲೋಕಕ್ಕೆ ಹೋಗಿ ಧರ್ಮಜಾಗ್ರತೆಯನ್ನುಂಟು ಮಾಡು; ಪಾಪಿಷ್ಠರಾದ ಜನರನ್ನು ಉದ್ಧರಿಸು, ಎಂದು ಹೇಳಿದನು. ಅದಕ್ಕೆ ಆತನು ದೇವರ ಅಪ್ಪಣೆಯನ್ನು ತಲೆಯಲ್ಲಾಂತು ಬದ್ಧಾಂಜಲಿಯಾಗಿ ಅಂದದ್ದೇನಂದರೆ—ದೇವಾ, ಕರುಣಾಳುವೇ! ನಿನ್ನ ಅಪ್ಪಣೆಯೇ ನನಗೆ ಮಾನ್ಯವು; ಆದರೆ ಗರ್ಭವಾಸವಾಗದಂತೆಯೂ ಅಯೋನಿಸಂಭವನಾಗುವಂತೆಯೂ ನನ್ನನ್ನು ಕರುಣಿಸು, ಎಂದು ಪ್ರಾರ್ಥಿಸಲು, ಪರಮಾತ್ಮನು ಅವನ ಈ ಬಿನ್ನಹದಂತೆ ಅನುಗ್ರಹಿಸಿ ಸಿಂಪಿನಲ್ಲಿ ಶಿಶುರೂಪದಿಂದ ಅವನನ್ನು ಇರಿಸಿ ಮಳೆಯ ಸಂಗಡ ಅದು ಭೀಮಾನದಿಯಲ್ಲಿ ಬೀಳುವಂತೆ ಮಾಡಿದನು.

ಇತ್ತ ಭೂಲೋಕದಲ್ಲಿ ದಾಮಾಜೀ ಎಂಬ ಸಿಂಪಿಗನು ಭಗವಂತನ ಪ್ರೀತಿಯ ಭಕ್ತನಾಗಿಯೂ, ವೈರಾಗ್ಯಶಾಲಿಯಾಗಿಯೂ ಪಂಢರಪುರದಲ್ಲಿ ಇರುತ್ತಿದ್ದನು. ಅವನು ದಿನಾಲು ಚಂದ್ರಭಾಗದಲ್ಲಿ ಸ್ನಾನ ಮಾಡಿ ಗುಡಿಗೆ ಹೋಗಿ ಪಾಂಡುರಂಗನನ್ನು ಪೂಜಿಸಿದ ಹೊರತು ಊಟ ಮಾಡುತ್ತಿದ್ದಿಲ್ಲ. ಇವನಿಗೆ ಪರಮ ಸಾಧ್ವಿಯೂ ದೇವಬ್ರಾಹ್ಮಣರಲ್ಲಿ ವಿಶ್ವಾಸವುಳ್ಳವಳೂ ಆದ ಗುಣಾಬಾಯಿ (ಗೋಣಾಯಿ) ಯೆಂಬ ಹೆಸರಿನ ಧರ್ಮಪತ್ನಿಯಿದ್ದಳು. ಇವರಿಗೆ ಪುತ್ರಸಂತಾನವಿಲ್ಲದ್ದರಿಂದ ಒಮ್ಮೆ ಗೋಣಾಯಿಯು ಪಾಂಡುರಂಗನಲ್ಲಿ ಹೋಗಿ

ಪುತ್ರನನ್ನು ಬೇಡಿಕೊಂಡು ಬರಲು. ಪತಿಯನ್ನು ಪ್ರಾರ್ಥಿಸಿದಳು. ಆಗ ದಾಮಾಜಿಯು—ಮುಗ್ಧೆ! ಹುಳತಿಂದ ಬೀಜವನ್ನು ಬಿತ್ತಿದರೆ ಪೈರು ಬರುವದೇ? ಮುಪ್ಪಿನಲ್ಲಿ ಮಕ್ಕಳಾಗುವದುಂಟೇ? ಮಳೆಗಾಲ ಮುಗಿದ ಮೇಲೆ ಮೋಡಗಳು ಮಳೆಸುರಿಯುವವೇ? ಶ್ರಾವಣಮಾಸದಲ್ಲಿ ಮಾವಿನಹಣ್ಣು ಬಯಸಿದರೆ ಬರುವವೇ? ಹುಚ್ಚೀ, ಮುಧುಕೆಯಾಗಿ ಸಂತಾನವನ್ನು ಬಯಸಲಿಕ್ಕೆ ನಿನಗೆ ನಾಚಿಕೆಯಾದರೂ ಹೇಗೆ ಬರಲೊಲ್ಲದು, ಎನ್ನಲು ಆ ಸ್ವಾಧ್ವಿಯು ವಿನಯದಿಂದ ಮತ್ತೆ ನುಡಿದಳೇನಂದರೆ—ಪ್ರಾಣದೊಡೆಯರೇ! ತಾವು ನುಡಿದದ್ದು ನಿಜವು; ಆದರೆ ದೇವರಿಗೆ ಯಾವದೂ ಅಸಾಧ್ಯವಲ್ಲ. ಸೀತಾಪತಿಯು ಸೇತುವೆ ಕಟ್ಟುವಾಗ ಪಾಷಾಣಗಳನ್ನು ತೇಲಿಸಲಿಲ್ಲವೇ? ಆ ಭಕ್ತವತ್ಸಲನು ದೇವಕಿಯ ಬಸುರಿನಲ್ಲಿ ತಾನೇ ಬಂದು ಶಿಶುಪಾಲನನ್ನು ಕೊಂದು ನಂದಗೋಪಾದಿಗಳನ್ನು ಆನಂದಿಸಲಿಲ್ಲವೇ? ಪರಮೇಶ್ವರನಿಗೆ ಯಾವದು ಅಸಾಧ್ಯವು? ಎಲ್ಲವೂ ಅವನಾಧೀನವಾಗಿರುವದು. ಹೀಗಿರಲು, ಮುದುಕರಿಗೆ ಮಕ್ಕಳನ್ನು ಕೊಡುವದಕ್ಕೆ ಆತನಿಗಾಗದೆ?

ಹೆಂಡತಿಯ ಈ ಮಾತಿಗೆ ದಾಮಾಜಿಯು ನಕ್ಕು—ಒಳ್ಳೇದು ಈಗ ಗುಡಿಗೆ ಹೋಗಿ ನಿನ್ನ ಅಪೇಕ್ಷೆಯನ್ನು ದೇವರಲ್ಲಿ ಅರಿಕೆ ಮಾಡಿಕೊಳ್ಳುವೆನು, ಎಂದು ಹೇಳಿ, ನಿತ್ಯನಿಯಮದಂತೆ ದೇವಾಲಯಕ್ಕೆ ಹೋದನು. ಮತ್ತು ತನ್ನ ಹೆಂಡತಿಯ ಇಚ್ಛೆಯನ್ನು ಶ್ರೀಪಾಂಡುರಂಗನ ಮುಂದೆ ಉಸರಿ ನಿತ್ಯದ ಸೇವೆ ಮಾಡಿ ವಿರಾಮಕ್ಕಾಗಿ ಅಲ್ಲಿಯೇ ತುಸ ಅಡ್ಡಾದನು. ಈ ಗಂಡ-ಹೆಂಡಿರ ನಿಕಟವಾದ ಭಕ್ತಿಭಾವಕ್ಕೆ ಮೆಚ್ಚಿದ ವಿಠ್ಠಲನು, ದಾಮಾಜಿಯ ಸ್ವಪ್ನದಲ್ಲಿ ಬಂದು 'ನಾಳಿನ ದಿನವೇ ನಿಮ್ಮ ಬಯಕೆಯು ಪೂರ್ಣವಾಗುವದು, ಸಂತಾನದ ಅಭ್ಯುದಯವು ಆಗುವದು, ಚಿಂತೆ ಬೇಡ' ಎಂದು ಹೇಳಿದನು. ದಾಮಾಜಿಯು ಎಚ್ಚತ್ತು ಮನೆಗೆ ಬಂದು ಹೆಂಡತಿಯ ಮುಂದೆ ಕನಸಿನ ಸಂಗತಿಯನ್ನು ಹೇಳಲು ಆಕೆಯು ಪರಮಾನಂದಭರಿತಳಾದಳು. ಗಂಡ-ಹೆಂಡಿರಿಬ್ಬರು, ದೇವರು ಯಾವ ಬಗೆಯಿಂದ ತಮಗೆ ಸಂತಾನ ಕೊಡುವನೋ, ಎಂದು ಚಿಂತಿಸ ತೊಡಗಿದರು. ದಾಮಾಜಿಯು ಮರುದಿವಸ ದಿನದಂತೆ ಭೀಮಾನದಿಗೆ ಸ್ನಾನಕ್ಕೆ ಹೋದನು. ಆಗ ಹೊಳೆಯೊಳಗೆ ನೀರಮೇಲೆ ತೇಲಿ ಬರುತ್ತಿರುವ ಬಹು ಶುಭ್ರವಾದ ಸಿಂಪು ಅವನ ಕಣ್ಣಿಗೆ ಬಿತ್ತು. ಅದರ ಹೊಳಪನ್ನೂ, ಸೌಂದರ್ಯವನ್ನೂ ನೋಡಿ ದಾಮಾಜಿಯು ಬಹಳ ಬೆರಗಾಗಿ ಅದನ್ನು ಹಿಡಿಯಬೇಕೆಂದು ಯೋಚಿಸ ಹತ್ತಿ

ದನು. ಅಷ್ಟರಲ್ಲಿ ಆ ಸಿಂಪು ಅವನ ಹತ್ತರ ಕೈಗೆ ನಿಲುಕುವಷ್ಟು ಸಮೀಪದಲ್ಲಿ ಬಂತು, ಅದರೊಳಗಿಂದ ಒಂದು ವಿಲಕ್ಷಣವಾದ ಮಂಜುಳ ಧ್ವನಿಯು ಅವನಿಗೆ ಕೇಳಬರಹತ್ತಿತು. ಆಗಂತೂ ಹೇಗೆಯೇ ಆಗಲಿ, ಇದನ್ನು ತೆಗೆದುಕೊಂಡು ಇದರಲ್ಲಿದ್ದದ್ದನ್ನು ನೋಡಬೇಕೆಂಬ ಲವಲವಿಕೆಯು ಆತನಲ್ಲಿ ಹೆಚ್ಚಾಯಿತು. ಕೂಡಲೆ ಕೈನೀಡಿ ಆತನು ಸಿಂಪನ್ನು ತಾನಿದ್ದೆಡೆಗೆ ಬರಮಾಡಿಕೊಂಡು ಅದನ್ನು ಕೈಯಲ್ಲಿ ತೆಗೆದುಕೊಂಡು ನೋಡಲು, ಅದರಲ್ಲೊಂದು ಪುಟ್ಟ ಕೂಸು ಕಣ್ಣಿಗೆ ಬಿತ್ತು. ಅದನ್ನು ಹಾಗೆಯೇ ಹರುಷದಿಂದ ಮನೆಗೆ ತಂದು ಹೆಂಡತಿಯ ಕೈಯಲ್ಲಿ ಕೊಟ್ಟನು. ಮುದುಕಿಯಾಗಿದ್ದರೂ ಈಶಕೃಪೆಯಿಂದ ಅವಳ ಮೊಲೆಗಳು ಹಾಲು ತುಂಬಿದವು. ಆದನ್ನರಿತು ದಾಮಾಜಿಯು ನಿಶ್ಚಿಂತನಾದನು.

ಗೋಣಾಬಾಯಿಯು ಬಲು ಅಕ್ಕರದಿಂದಲೂ, ಎಚ್ಚರದಿಂದಲೂ ಆ ಕೂಸನ್ನು ಕಾಪಾಡಿದಳು. ಆ ಕೂಸಿಗೆ ನಾಮದೇವನೆಂದು ಹೆಸರನ್ನಿಟ್ಟರು. ಜನ್ಮ ದಾರಭ್ಯ ನಾಮದೇವನು ಸಕಲ ಪ್ರಾಣಿಗಳ ಮೇಲೂ ಬಹು ದಯವನ್ನು ತೋರುತ್ತಿದ್ದನು. ಪರದುಃಖವು ಇವನಿಗೆ ಎಳ್ಳಷ್ಟಾದರೂ ಸೇರುತ್ತಿದ್ದಿಲ್ಲ. ಹುಡುಗನು ರೂಪದಿಂದ ಸುಂದರನಿದ್ದಂತೆ ಗುಣದಿಂದಲೂ ಸುಂದರನಿದ್ದನು. ಮನಬಂದಂತೆ ತಿರುಗುವದು ಸ್ವಾಭಾವಿಕವಾಗಿ ಸಣ್ಣ ಸಣ್ಣ ಹುಡುಗರಿಗೆ ಸೇರಿಕೆಯಾದ ಸಂಗತಿಯಷ್ಟೇ? ನಮ್ಮ ನಾಮದೇವನಂತು ತಿರುಗಲಿಕ್ಕೆ ಎಂದೂ ಬೇಸರಿಯುವವನಲ್ಲ; ಅವನು ಕೂತಲ್ಲಿ ಕೂಡ್ರುತ್ತಿದ್ದಿಲ್ಲ; ನಿಂತಲ್ಲಿ ನಿಲ್ಲುತ್ತಿದ್ದಿಲ್ಲ; ಹೇಳಿದರೆ ಕೇಳುತ್ತಿದ್ದಿಲ್ಲ. ಈ ಬಗೆಯಾಗಿ ಆತನಲ್ಲಿ ಚಾಂಚಲ್ಯವಿದ್ದರೂ ಅದನ್ನು ಆತನು ಕೆಟ್ಟ ಕೆಲಸದಲ್ಲಿ ಎಂದೂ ಉಪಯೋಗಿಸಲಿಲ್ಲ. ಅಪೂರ್ವವಾಗಿ ದೊರೆತ ಮಗನೆಂದು ತಾಯಿ-ತಂದೆಗಳು ಆತನಿಗೆ ಯಾವ ಬಗೆಯ ಪ್ರತಿಬಂಧವನ್ನೂ ಮಾಡುತ್ತಿದ್ದಿಲ್ಲ. ನಾಮದೇವನು ಪಾಂಡುರಂಗನ ಗುಡಿಗೆ ಒರುತ್ತಿರುವ ಜನರೊಡನೆ ದೇವರ ಭಜನೆಯನ್ನು ಮಾಡಹತ್ತುವನು; ಅವರಂತೆ ಕುಣಿಯುವನು; ತಾಳಗಳನ್ನು ಹಾಕುವನು; ತಮ್ಮಟೆಯನ್ನು ಬಾರಿಸುವನು; "ವಿಠ್ಠಲ ವಿಠ್ಠಲ" "ಪಾಂಡುರಂಗ-ಪಾಂಡುರಂಗ" ಎಂದು ಭಜನೆ ಮಾಡುವನು. ಆಟನೋಟಗಳಲ್ಲಾಗಲಿ, ಕಿಡಿಗೇಡಿತನದ ಕೆಲಸದಲ್ಲಾಗಲಿ ಆತನು ಎಂದೂ ತೊಡಗಲಿಲ್ಲ. ಚಿಕ್ಕಂದಿನ ಈ ಆಚರಣದಿಂದ ಇವನು ಮುಂದೆ ದೊಡ್ಡ ಸಂತನಾಗುವನೆಂದೂ ಸಂಸಾರಿಕನಾಗನೆಂದೂ ಎಲ್ಲರೂ ಅನ್ನುತ್ತಿದ್ದರು. ಕೊನೆಗೆ ಅದೇ ದಿಟವಾಯಿತು.

ಒಂದು ದಿನ ದಾಮುಸೆಟ್ಟಿಯು ವ್ಯಾಪಾರಕ್ಕಾಗಿ ನೆರೆಹಳ್ಳಿಗೆ ಹೋಗಿರಲು,

ಗೋಣಾಬಾಯಿಯು "ಪಾಂಡುರಂಗನ ಪೂಜೆಮಾಡಿ ನಿತ್ಯದಂತೆ ನೈವೇದ್ಯ ಕೊಟ್ಟು ಬಾ" ಎಂದು ಮಗನಿಗೆ ಹೇಳಿ, ಮಾಡಿದ ಅಡಿಗೆಯನ್ನು ತಬಕದಲ್ಲಿ ಬಡಿಸಿ ಗುಡಿಗೆ ಕಳುಹಿದಳು. ಕಲ್ಲಿನ ಮೂರ್ತಿಯು ಉಣ್ಣುವದಿಲ್ಲವೆಂಬದು ಆ ಶುದ್ಧಭಾವದ ನಾಮದೇವನಿಗೇನು ಗೊತ್ತು? ಪೂಜೆ ಮಾಡಿದ ಕೂಡಲೆ ಆತನು ನೈವೇದ್ಯದ ತಬಕವನ್ನು ದೇವರ ಮುಂದಿಟ್ಟು—ದೇವರೇ, ತಡವಾಗುತ್ತದೆ, ಬೇಗನೇ ಉಣ್ಣಬೇಕು, ಎಂದು ನುಡಿದನು; ಆದರೆ ಪಾಂಡುರಂಗನ ಶಿಲಾಮೂರ್ತಿಯು ಉಲುಕಲಿಲ್ಲ. ಆಗ ನಾಮದೇವನು—ದೇವಾ ವಿಠ್ಠಲಾ, ನಿನ್ನ ಪ್ರೀತಿಯ ಭಕ್ತನು ನೈವೇದ್ಯ ತಂದಿಲ್ಲೆಂದು ಊಟಮಾಡಲೊಲ್ಲೆಯಾ? ಅಥವಾ ನೈವೇದ್ಯ ತರಲು ತಡವಾಯಿತೆಂದು ಸಿಟ್ಟಾಗಿ ಊಟ ಮಾಡದಾದೆಯಾ? ನೀನು ಉಣ್ಣದಿದ್ದರೆ ಅವ್ವನು ನನ್ನನ್ನು ಬಡಿಯಲಿಕ್ಕಿಲ್ಲವೇ? ನಮ್ಮ ಅಪ್ಪನು ತಂದಾಗ ಉಣ್ಣುವದೂ, ನಾನು ತಂದರೆ ಉಣ್ಣದಿರುವದೂ ಮೋಸದಕೆಲಸವಲ್ಲವೇನು? ದೇವರೇ, ನಾನು ತಂದದ್ದನ್ನು ಉಣ್ಣದೆ ಉಪವಾಸ ಬೀಳುವೆಯಾ? ಎಂದು ಕಳವಳಗೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದನು. ನಾಮದೇವನ ಈ ಶುದ್ಧಭಾವಕ್ಕೂ, ಕನಿಕರಕ್ಕೂ ಕರುಣಾಳುವಾದ ಪಾಂಡುರಂಗನು ಮೆಚ್ಚಿ, ಪ್ರಸನ್ನನಾಗಿ ಅವನನ್ನು ಆಲಿಂಗಿಸಿ, ತಂದ ಅಡಿಗೆಯನ್ನು ಆನಂದದಿಂದ ಉಂಡನು.

ಈ ಮೇರೆಗೆ ನಾಮದೇವನು ಪಾಂಡುರಂಗನನ್ನು ಉಣ್ಣಿಸಿ ಬರಿಯದಾದ ತಬಕವನ್ನು ತೆಗೆದುಕೊಂಡು ಮನೆಗೆ ಬರಲು, ಅವನ ತಾಯಿಯು—ನಾಮ್ಯಾ, ನೈವೇದ್ಯವನ್ನು ಯಾರಿಗೆ ಕೊಟ್ಟೆ? ಎಲ್ಲಿಯಾದರೂ ಚಲ್ಲಿದೆಯೋ? ಏನುಮಾಡಿದಿ? ಎಂದು ಗದ್ದರಿಸಿದಳು. ಆಗ ನಾಮದೇವನು—ಅವ್ವಾ, ನೈವೇದ್ಯವನ್ನು ದೇವರು ದಿನದಂತೆ ಉಂಡನು, ಎಂದು ಹೇಳಿಬಿಟ್ಟನು. ಮರುದಿವಸ ದಾಮಾಜಿಯು ವ್ಯಾಪಾರಮಾಡಿಕೊಂಡು ಮನೆಗೆ ಬರಲಾಗಿ ಗೋಣಾಯಿಯು ನೈವೇದ್ಯದ ಸಂಗತಿಯನ್ನೆಲ್ಲ ಆತನಿಗೆ ಹೇಳಿದಳು. ಈ ಮಾತು ದಾಮಾಜಿಗೆ ಅರಿದೆನಿಸಿತು. ಕೂಡಲೆ ಆತನು ನಾಮದೇವನನ್ನು ಕರೆದು—ತಮ್ಮಾ, ದೇವರು ನೈವೇದ್ಯವನ್ನು ಉಣ್ಣುವನೇ? ತೋರಿಸುವೆಯಾ? ಎನ್ನಲು, 'ಓಹೋ! ಈಗ ನಡೆಯಿರಿ, ತೋರಿಸುತ್ತೇನೆ' ಎಂದು ಹೇಳಿದನು. ಕೂಡಲೆ ಸ್ನಾನಮಾಡಿ ಪೂಜಾಸಾಹಿತ್ಯಗಳನ್ನೂ ನೈವೇದ್ಯವನ್ನೂ ತೆಗೆದುಕೊಂಡು ಆ ತಂದೆ-ಮಕ್ಕಳಿಬ್ಬರೂ ಪಾಂಡುರಂಗನ ದೇವಾಲಯಕ್ಕೆ ಹೋದರು. ನಾಮದೇವನು ಯಥಾವಿಧಿಯಾಗಿ ದೇವರನ್ನು ಷೋಡಶೋಪಚಾರಗಳಿಂದ ಪೂಜಿಸಿ ನೈವೇದ್ಯದ ಪಾತ್ರೆಯನ್ನು ದೇವರ

ಷ್ಟುಂದೆ ಸರಿಸಿದನು. ಆಗ ದೇವರು—ನಾಮದೇವಾ, ನಿಮ್ಮಪ್ಪನು ನಿನ್ನ ಸಂಗಡ ಬಂದಿರುವನು. ಅವನ ದೃಷ್ಟಿಗೆ ನಾನು ಎಂದೂ ಬೀಳುವದಿಲ್ಲ. ನಿನಗೆ ಮಾತ್ರ ಬೇಕಾದಾಗ ದರ್ಶನ ಕೊಡುವೆನು. ಈಗ ನೈವೇದ್ಯವನ್ನು ಉಣ್ಣ ಬೇಕೆಂದು ನೀನು ಒತ್ತಾಯ ಮಾಡಬೇಡ, ಎಂದು ಹೇಳಿದನು. ಆಗ ನಾಮನು—ದೇವರೇ, ನೀನು ಬಹು ಕಪಟಿಯೆಂದು ತೋರುತ್ತದೆ. ನಮ್ಮ ಪ್ಪನಿಗೆ ದರ್ಶನ ಕೊಡುವದಿಲ್ಲೆಂದು ಅನ್ನುವ ನೀನು ನಿನ್ನೆ ನನಗೆ ಭೆಟ್ಟಿಯಾದ ದ್ದಾದರೂ ಸುಳ್ಳು ಎಂಬಂತೆ ತೋರುತ್ತದೆ! ಈ ಬಗೆಯ ವಂಚನೆಯು ತಕ್ಕ ದ್ದಲ್ಲ, ಅನ್ನಲು, ನಾಮದೇವನ ಈ ಮಾತು ಕೇಳಿ ದೇವರು ನಸುನಕ್ಕು ದಾಮ ಸೆಟ್ಟಿಗೆ ದರ್ಶನವನ್ನು ಇತ್ತು ತಂದ ನೈವೇದ್ಯವನ್ನು ಉಂಡನು. ಆಗ ತಂದೆ ಮಕ್ಕಳಿಗೆ ಆದ ಆನಂದಕ್ಕೆ ಅಳತೆಯಿಲ್ಲ. ಆಗ ದಾಮಸೆಟ್ಟಿಯು—ನಾಮ ದೇವಾ, ನಿನ್ನಂಥ ಸತ್ಪುತ್ರನು ನಮಗೆ ದೊರಕಿದ್ದರಿಂದಲೇ, ನಾವು ಪ್ರತ್ಯಕ್ಷ ಪರಮಾತ್ಮನನ್ನು ಕಂಡು ಕೃತಕೃತ್ಯರಾದೆವು, ಎಂದು ಅಂದು ದೇವರಿಗೆ ನಮ ಸ್ಕಾರ ಮಾಡಿ ಮಗನನ್ನು ಕರಕೊಂಡು ಮನೆಗೆ ಬಂದು ಈ ಸಂಗತಿಯನ್ನು ಗೋಣಾಯಿಗೆ ಹೇಳಿದನು. ಅದನ್ನು ಕೇಳಿ ಅವಳೂ ಸಂತೋಷಪಟ್ಟಳು.

ಒಂದು ದಿನ ಗೋಣಾಬಾಯಿಯು ತನ್ನ ಬೇನೆಯ ನಿವಾರಣಕ್ಕಾಗಿ ಮಗ ನಿಗೆ ಜಾಲೆಯ ತೊಟೆಯನ್ನು ತರ ಹೇಳಿದಳು. ಹೇಳುವದೊಂದೇ ತಡ, ನಾಮ ದೇವನು ಒಂದು ಕೊಡಲಿಯನ್ನು ಹೆಗಲಮೇಲಿಟ್ಟು ಜಾಲೆಯ ಮರಕ್ಕೆ ನಡೆ ದನು. ಆ ಗಿಡಕ್ಕೆ ಒಂದು ಪೆಟ್ಟು ಹಾಕಲು, ಅದರೊಳಗಿಂದ ಅಂಟು ಧಾರೆ ಗಟ್ಟಿ ಸುರಿಯ ಹತ್ತಿತು. ಅದನ್ನು ಕಂಡು ಕನಿಕರ ಹುಟ್ಟಿ ನಾಮದೇವನು— ಅಯ್ಯೋ, ನಾನೆಂಥ ಕೆಟ್ಟ ಕೆಲಸ ಮಾಡಿದೆನಲ್ಲ! ಕರುಣೆಯಿಲ್ಲದೆ ಈ ಗಿಡವನ್ನು ಕಡಿಯ ಹತ್ತಿದ್ದು ಎಂಥ ಅಲ್ಲದ ಕೆಲಸವಾಯಿತು! ನಮ್ಮ ಮೈಗೆ ಉಗುರಿನಿಂದ ಚಿವುಟಿದರೆ ಹೊರಡುವ ಬೆವರು ಬೆವರಾದ ನೆತ್ತರವನ್ನು! ಕಂಡು ಬಡಬಡ ಕೊಂಡು ಅಳುತ್ತಿರುವ ನಾವು ದಳದಳನೆ ಸುರಿಯುವ ಈ ಗಿಡದ ನೆತ್ತರವನ್ನು ನೋಡಿ ಕಲ್ಲಿನಂತೆ ಕಠೋರ ಮನಸ್ಕರಾಗಿ ಕೂಡ್ರುವದು ಎಂದೂ ಸಲ್ಲದು. ಈ ಹಿಂಸಾದೋಷವು ಹೇಗೆ ತಪ್ಪೀತು? ಶಿವ, ಶಿವಾ! ವಿಠ್ಠಲಾ, ಈಗಿನ ಈ ತಪ್ಪನ್ನು ಕ್ಷಮಿಸು. ಇನ್ನು ಮೇಲೆ ಇಂಥ ತೊಂದರೆಯಲ್ಲಿ ತೊಡಗಲಿಕ್ಕಿಲ್ಲ. ನಿನ್ನನ್ನು ಅಗಲಿ ಬಂದರೆ ಹೀಗಾಗುವದೇ ಸರಿ, ಎಂದು ಮನದಲ್ಲಿ ಅಂದುಕೊಂಡು ಮುಂದುಗಾ ಣದೆ ಸುಮ್ಮನೆ ಕುಳಿತನು. ಈ ಸಂಗತಿಯೇ ಅವನ ಮನಸ್ಸು ತಿರಗಲಿಕ್ಕೆ ಕಾರಣ

ವಾಯಿತು. ಮುಂದೆ ಅವನು ಹೆಸರಾದ ಸಂತನಾದನು.

ಮುಂದೆ ನಾಮದೇವನು ಪ್ರಾಯಕ್ಕೆ ಬಂದಕೂಡಲೆ ಅವನಿಗೆ ಅನುರೂಪಳೂ, ಕುಲಶೀಲಸಂಪನ್ನೆಯೂ ಆದ ರಾಜಾಬಾಯಿಯೆಂಬ ಕನ್ಯೆಯನ್ನು ಗೊತ್ತುಮಾಡಿ ಲಗ್ನಮಾಡಿದರು. ಕೆಲಕಾಲದ ಮೇಲೆ ಅವಳು ಗರ್ಭಿಣಿಯಾಗಿ ಗಂಡು ಕೂಸು ಹೆತ್ತಳು. ಆ ಕೂಸಿನ ನಾಮಕರಣಕ್ಕೆ ದೇವರು ಸ್ವತಃ ಬಂದು ರಾಜಾಬಾಯಿಗೆ ಸೀರೆ ಕುಪ್ಪಸಗಳನ್ನೂ, ಕೂಸಿಗೆ ಅಂಗಿ ಕುಂಚಿಗೆಗಳನ್ನೂ ಉಡುಗರೆ ಕೊಟ್ಟು ಕೂಸಿಗೆ ನಾರಾಯಣನೆಂಬ ಹೆಸರಿಟ್ಟು ನಿಜಮಂದಿರಕ್ಕೆ ತೆರಳಿದನು. ಬರಬರುತ್ತ ನಾಮದೇವನ ಮನಸ್ಸು ವಿಠ್ಠಲನಾಮದಲ್ಲಿಯೇ ತಲ್ಲೀನವಾಗಿ ಆತನು ಗುಡಿಯನ್ನು ಬಿಟ್ಟು ಬಾರದಾದನು. ಪಾಂಡುರಂಗನ ಮಂದಿರವೇ ಅವನ ಮನೆಯಾಯಿತು. ಇದನ್ನು ನೋಡಿ ಗೋಣಾಯಿಯು ಮಗನಿಗೆ—ನಾಮ್ಯಾ, ಸಂಸಾರದ ಚಿಂತೆಯು ನಿನಗೆ ಇಲ್ಲವೇ ಇಲ್ಲವಲ್ಲ! ಹಲವರು ಸಾಧುಸಂತರು ಪ್ರಪಂಚದಲ್ಲಿದ್ದು ಈಶ್ವರಾರಾಧನೆಯನ್ನು ಮಾಡುವದಿಲ್ಲವೆ? ನಿನಗೇನು ಮಂಕು ಬಡೆಯಿತು? ಹಗಲೆಲ್ಲ ಆ ಕಲ್ಲಿನ ಮುಂದೆ ನಿಂತರೇನು ಬರುವದು. ನಾವು ಮುದುಕರಾದೆವು. ಸಂಸಾರದ ಭಾರವು ನಿನ್ನನ್ನು ಅವಲಂಬಿಸಿರುತ್ತದೆ. ಹೀಗಿದ್ದು ನೀನು ಅನ್ನ ಅರಿವೆಗಳ ಪರಿವೆ ಇಲ್ಲದೆ, ಹೆಂಡಿರು-ಮಕ್ಕಳು ಗೋಳಾಡುವಂತೆ ಮಾಡಿ ಗುಡಿಹಿಡಿದು ಕೂಡುವದು ಎಷ್ಟುಮಾತ್ರವೂ ಸರಿಯಲ್ಲ, ಎಂದು ಅಳ್ಳಗಳೆದು ಮಾತಾಡಿದಳು. ಆಗ ತಾಯಿಯ ಮಾತು ಮನಸ್ಸಿಗೆ ನಟ್ಟು ನಾಮದೇವನು ಗುಡಿಗೆ ಹೋಗಿ ದೇವರನ್ನು ಕುರಿತು ಪರಮಾತ್ಮನೇ, ನನ್ನನ್ನು ಈ ಸಂಸಾರದಲ್ಲೇಕೆ ದೂಡಿದೆ? ಈ ದುಃಖರೂಪವಾದ ಪ್ರಪಂಚದಿಂದ ಹೇಗೆ ಪಾರಾಗಲಿ? ಮನೆಯಲ್ಲಿ ತಾಯಿಯಕಾಟ, ಹೆಂಡತಿಯಕಾಟ; ಮನೆಮಾರು ನನಗೆ ಬೇಡಾಗಿದೆ, ಮನೆಯವರಿಗೆ ಬೇಕಾಗಿದೆ, ನಾನು ಮುಂದೆ ಹ್ಯಾಗೆ ಬಾಳ್ವೆಮಾಡಲಿ? ಎಂದು ದುಃಖಿಸತೊಡಗಿದನು. ದೇವರು ನಾಮದೇವನ ಈ ಕರುಣ ಹುಟ್ಟುವ ನುಡಿಯನ್ನು ಕೇಳಿ ನಾಮಾ, ಇನ್ನು ಮೇಲೆ ನೀನು ಎಲ್ಲಿಯೂ ಹೋಗಬೇಡ, ನನ್ನಲ್ಲಿಯೇ ಇರು. ಅಂದರೆ ನಿನಗೆ ಮಾಯಾಮೋಹಗಳು ತಟ್ಟಲಿಕ್ಕಿಲ್ಲ. ನೀನೂ ನನ್ನಂಶಭೂತನಾಗಿಯೇ ಹುಟ್ಟಿರುವೆ. ಸೂರ್ಯನಿರುವಲ್ಲಿ ಕಿರಣಗಳಿರುವದೂ, ಸಕ್ಕರೆ ಇದ್ದಲ್ಲಿ ಸೀ ಇರುವದೂ ಸ್ವಾಭಾವಿಕವಾಗಿದೆ. ಅವುಗಳನ್ನು ಬೇರೆಬೇರೆ ಮಾಡಲಿಕ್ಕೆ ಬರುವದಿಲ್ಲ. ಗಂಗೆಯಿಂದ ತೀರ್ಥಗಳು ಅಭೇದವಾಗಿರುವಂತೆ ನಾವಿಬ್ಬರೂ ಅಭೇದವಾಗಿರುವೆವು. ನೀನು ನನ್ನಲ್ಲಿಬೆರೆತು ದ್ವೈತವನ್ನು ಖಂಡಿಸು. ಏನೂ

ಚಿಂತೆಮಾಡಬೇಡ, ಎಂದು ಸಮಾಧಾನ ಹೇಳಿದನು. ಅದಕ್ಕೆ ನಾಮದೇವನು—ದೇವಾ, ನಿನ್ನ ಮಾತು ನಿಜವು. ನಾನೇನು ಸಂಸಾರಕ್ಕೆ ಹೆದರುವದಿಲ್ಲ. ನಿನ್ನ ನಾಮ ಸಂಕೀರ್ತನದಿಂದ ಭವತಾಪಗಳು ನಿವಾರಣವಾಗದೇನು ಮಾಡುವವು? ನೀನು ಅಭೇದವನ್ನು ತೋರಿ ಮೋಕ್ಷವು ಹೆಚ್ಚಿನದೆಂದು ಮೇಲುಮಾಡಿ ಹೇಳುವೆ; ಆದರೆ ನಿನ್ನ ನಾಮಸ್ಮರಣ ಸುಖದ ಮುಂದೆ ಅದು ತೀರ ತುಚ್ಛವೆಂದು ನಾನು ತಿಳಿಯುತ್ತೇನೆ. ನೀನು ದೇವನು, ನಾನು ಭಕ್ತನು. ನಿನ್ನ ಭಕ್ತನಿದ್ದದ್ದೇ ನಿಜವಿದ್ದರೆ ಜನ್ಮಜನ್ಮಾಂತರದಲ್ಲಿಯೂ ನಿನ್ನ ವಾಣಿಯು ನನ್ನ ನಾಲಿಗೆಯ ಮೇಲೆ ಕುಣಿದಾಡುವಂತೆ ಅನುಗ್ರಹಿಸು, ಎಂದು ಬೇಡಿಕೊಂಡನು. ನಾಮದೇವನ ಈ ಮಾತುಗಳನ್ನು ಕೇಳಿ ಪಾಂಡುರಂಗನು ರುಕ್ಮಿಣಿಯನ್ನು ಕುರಿತು—ಪ್ರಿಯೇ, ನಾಮನ ಭಕ್ತಿಯು ಸಗುಣರೂಪದಲ್ಲಿ ವಿಶೇಷವಾಗಿರುವದು. ಆತ್ಮಬೋಧದಿಂದ ಇವನಿಗೆ ಸಮಾಧಾನವಾಗುವದಿಲ್ಲ. ಎಂದು ನುಡಿದು ನಾಮದೇವನನ್ನು ಅಪ್ಪಿಕೊಂಡು ನಿನ್ನ ಮನೆತನದ ಸ್ಥಿತಿಯು ಹೇಗೆ ಇರುವದೆಂಬದನ್ನು ನಾಚದೆ ಹೇಳು ಎಂದನು. ಅದಕ್ಕೆ ನಾಮದೇವನು—ಹೇ ಜಗನ್ನಾಥನೇ! ನಿನ್ನ ಕೃಪೆಯಿಂದ ನನಗೇನೂ ಕೊರತೆಯಿಲ್ಲ; ಆದರೆ ನಿನ್ನ ಮನೆಯು ವೈಕುಂಠಭುವನವು, ನನ್ನದು ಮುರುಕ ಗುಡಿಸಲು, ನಿನ್ನ ಮನೆಯಲ್ಲಿ ಅಷ್ಟಸಿದ್ಧಿಗಳು ವಾಸವಾಗಿವೆ, ನನ್ನ ಮನೆಯಲ್ಲಿ ಇಲಿ ಹೆಗ್ಗಣಗಳು ತುಂಬಿರುತ್ತವೆ; ನೀನು ಪೀತಾಂಬರವನ್ನುಡುತ್ತೀ, ನಾನೂ ನನ್ನ ಮಕ್ಕಳು ಹರಕು ಪಂಜೆಗಳನ್ನುಡುತ್ತೇವೆ; ನಿನಗೆ ಮಲಗಲಿಕ್ಕೆ ಶೇಷಪರ್ಯಂಕವು, ನನಗೆ ಹುಲ್ಲುಚಾಪೆಯು; ನಿನ್ನಲ್ಲಿ ಬೆಳ್ಳಿ ಬಂಗಾರಗಳಿಗೆ ಕೊರತೆಯಿಲ್ಲ, ನನ್ನ ಮನೆಯಲ್ಲಿ ನಿನ್ನ ನಾಮಸ್ಮರಣಕ್ಕೆ ಕಡಿಮೆಯಿಲ್ಲ, ಎಂದು ಹೇಳಿದನು. ನಾಮದೇವನ ಈ ವಿನೋದಪೂರ್ಣವಾದ ಮಾತು ಕೇಳಿ ದೇವರು ಮುಗುಳು ನಗೆ ನಗಹತ್ತಿದನು.

ಇತ್ತ ನಾಮದೇವನ ಮನೆಯಲ್ಲಿ ನಾಮದೇವನ ತಾಯಿಗೂ ಹೆಂಡತಿಗೂ ಬಡತನದ ಸಲುವಾಗಿ ಜಗಳ ನಡೆದಿತ್ತು. ನಾಮದೇವನ ಹೆಂಡತಿಯು ತನ್ನ ಅತ್ತೆಯ ಮುಂದೆ—ಅತ್ತೆಯವರೇ, ಉಡಲಿಕ್ಕೆ ನನಗೆ ಒಳ್ಳೇ ಸೀರೆ ಇರದಿದ್ದರೂ ಅಡ್ಡಿಯಿಲ್ಲ, ಗಟ್ಟಿಮುಟ್ಟಿಯಾದ ಮಡಿಸೀರೆಯಾದರೂ ಬೇಡವೆ? ಉಣ್ಣಲಿಕ್ಕೆ ಹೊಟ್ಟೆತುಂಬ ಅನ್ನವೂ ಇಲ್ಲ, ಬಡತನ ಅನುಭವಿಸುವದಕ್ಕಾಗಿಯೇ ನಿಮ್ಮ ಮನೆಗೆ ಬಂದಂತಾಯಿತು. ಸೇವಾ ಸೂತ್ರಗಳನ್ನು ಮಾಡುತ್ತ ಗಂಡಂದಿರಂತೂ ಪಂಢರಿನಾಥನ ಪಾಲಾದರು; ಸಂಸಾರ ಮಾಡಲಿಕ್ಕೆ ಅವರು ಬರುವ ಲಕ್ಷಣವಿಲ್ಲವೆಂದು ಗುಣುಗುಟ್ಟುತ್ತಿದ್ದಳು. ಜಗದ್ವ್ಯಾಪಕನಾದ ಪರಮಾತ್ಮನಿಗೆ ಇದೆಲ್ಲವೂ

ಗೊತ್ತಿದ್ದದ್ದೇ! ಕೂಡಲೇ ಆ ಕರುಣಾಳುವು ಕೇಶವಸೆಟ್ಟಿಯೆಂಬ ಬಣಜಿಗನ ವೇಷಹಾಕಿಕೊಂಡು ಹೊನ್ನಿನ ಚೀಲವನ್ನು ಹೊತ್ತುಕೊಂಡು ನಾಮದೇವನ ಮನೆ ಕೇಳುತ್ತ ಬಂದನು. ಇವನ ಬರುವಿಕೆಯನ್ನು ನೋಡಿ ಊರಜನರು—"ಮೊದಲೇ ಅವರಿಗೆ ಅನ್ನವಿಲ್ಲ ಅದರಲ್ಲಿ ಇವನಾರೋ ಅವರ ಮನೆಗೆ ಹೋಗುತ್ತಾನೆ," ಎಂದು ನಗುತ್ತಿದ್ದರು.

ನಾಮದೇವನ ಮನೆಯು ಚಿಕ್ಕದಾಗಿದ್ದರೂ ಅಚ್ಚುಕಟ್ಟಾಗಿತ್ತು. ಮನೆಯ ಸುತ್ತಲೂ ತುಳಸಿಯ ಗಿಡಗಳನ್ನು ಹಚ್ಚಿ ಹೂದೋಟವನ್ನು ಮಾಡಿದ್ದನು. ಕಾವೀಅರಿವೆಯ ಪತಾಕಿಯು ಅವನ ಮನೆಯು ಮುಂದೆ ಒಪ್ಪುತ್ತಿತ್ತು. ಇದರಿಂದ ಅದು ಕೇಳದಿದ್ದರೂ ಯಾವನೋ ಒಬ್ಬ ಧರ್ಮಿಷ್ಠನ ಮನೆಯೆಂದು ಗೊತ್ತಾಗುವಂತೆ ಇತ್ತು. ಕೇಶವಶೆಟ್ಟಿಯು ನಾಮದೇವನ ಮನೆಗೆ ಬಂದು—"ನಾನೊಬ್ಬ ಆಪ್ತನು ಬಂದಿದ್ದೇನೆ. ಕುಳಿತುಕೊಳ್ಳಲಿಕ್ಕೆ ಏನಾದರೂ ಕೊಡುವಿರಾ" ಎಂದು ನಾಮದೇವನ ಹೆಂಡತಿಯನ್ನು ಕೇಳಿದನು. ಆಗ ಆಕೆಯು ಒಳಗಿಂದಲೇ—ಇವನಾರು? ಎಲ್ಲಿಯ ಆಪ್ತನು ಎಂದು ಮನದಲ್ಲಿ ಅಂದುಕೊಂಡು ಮನೆಯ ಯಜಮಾನರು ಮನೆಯಲ್ಲಿಲ್ಲ, ತಿರುಗಿ ಹೋಗಿರೆಂದು ಅವನಿಗೆ ಥಟ್ಟನೆ ಹೇಳಿಬಿಟ್ಟಳು; ಮತ್ತು ಅಲ್ಲಿ ನಿಂತಿದ್ದ ನೆರೆಮನೆಯವಳ ಕೂಡ—"ಅವ್ವಾ ನಾನೇನು ಮಾಡಲಿ? ಬರಹೋಗುವವರು ನಮ್ಮ ಜೀವ ತೆಗೆದುಕೊಳ್ಳುತ್ತಾರೆ. ದಿನಾಲು ಇದೇ ಹಾಡು! ಸಾಧುಗಳು ಮನೆಗೆ ಬರುತ್ತಾರೆ. ತಾಳ ತಮ್ಮಟಿಗಳನ್ನು ತೆಗೆದುಕೊಂಡು ಭೇದಾಭೇದಾವಿಲ್ಲದೆ ವಿಠ್ಠಲ ವಿಠ್ಠಲ ಅನ್ನುತ್ತ ಮನಬಂದಂತೆ ಕುಣಿಯುತ್ತಾರೆ. ಇವರಿಗೆ ಯಾರೂ ಹೇಳಕೇಳುವವರಿಲ್ಲ. ನಮ್ಮ ಯಜಮಾನರಂತು ಬಂದಂಥ ಸಾಧುಸಂತರಿಗೆ ಅನ್ನವನ್ನು ಹಾಕದೆ ಕಳಿಸಬೇಡವೆಂದು ಕಟ್ಟಪ್ಪಣೆ ಮಾಡಿದ್ದಾರೆ. ಮನೆಯಲ್ಲಿ ನೋಡಿದರೆ ನೆರೆಅಕ್ಕಿ ಇಲ್ಲ ನನಗೆ ಬಹಳ ಗೋಳಾಟ ಬಂದಿತು. ಏನು ಮಾಡಲಿ ಎಂದಳು. ಈ ಮಾತುಗಳನ್ನು ಮರೆಗೆ ನಿಂತುಕೊಂಡಿದ್ದ ದೇವರು ಕೇಳಿಯೂ ಕೇಳದವನಂತೆ ನಟಿಸಿ, ಬಂದವರಿಗೆ ಕುಳಿತುಕೊಳ್ಳಲಿಕ್ಕೆ ಬೇಗನೆ ಏನಾದರೂ ಕೊಡಿರೆಂದು ಮತ್ತೊಮ್ಮೆ ಒತ್ತಿ ನುಡಿದನು. ಆಗಲೂ ರಾಜಾಬಾಯಿಯು ಬಾಗಿಲ ಮರೆಗೆ ನಿಂತು, "ತಾವು ಯಾರು? ತಮ್ಮ ಹೆಸರೇನು? ಬಂದ ಕಾರಣವಾವುದು?" ಎಂದು ಕೇಳಲು, ದೇವರು—ತಾಯಿಾ, ನಾನು ಕೇಶವಶೆಟ್ಟಿಯೆಂಬ ಕನ್ನಡ ದೇಶದ ಬಣಜಿಗನು. ನನಗೂ ನಾಮದೇವನಿಗೂ ಕಡೆಗೂ ಗೆಳೆತನವು; ಆದರೆ

ಆವನಿಗೆ ಬಡತನ ಬಂದದ್ದು ಕೇಳಿ, ಹೊನ್ನು ತಂದಿದ್ದೇನೆ. ಹೊನ್ನಿನ ಚೀಲ ವನ್ನು ಕೊಟ್ಟು ಬೇಗನೆ ತಿರುಗಿ ಹೋಗತಕ್ಕವನಿದ್ದೇನೆ, ಎಂದು ಹೇಳಿದನು.

ಈ ಮಾತು ಕೇಳಿ ರಾಜಾಬಾಯಿಯು ಹೊರಗೆ ಬಂದು ಕುಳಿತುಕೊಳ್ಳ ಲಿಕ್ಕೆ ಹುಲ್ಲಿನ ಚಾಪೆಯನ್ನು ಕೊಟ್ಟಳು. ಹಣ ನೋಡಿ ಹೆಣ ಬಾಯಿ ತೆರೆಯು ತ್ತದೆಂಬ ಮಾತು ಸುಳ್ಳಲ್ಲ. ಮೊದಲು ಬಿರಸು ಮಾತಾಡಿ ಈಗ ಸನ್ಮಾನ ಮಾಡುವದನ್ನು ನೋಡಿ ದೇವರು ನಗುತ್ತ—ಅವ್ವಾ! ಈಗ ಎಷ್ಟು ಸವಿಮಾತು ಗಳನ್ನಾಡುವೆಯಲ್ಲ! ಬರಿಗೈಯಿಂದ ಯಾರ ಭೆಟ್ಟಿಗೂ ಹೋಗಬಾರದು ಕಂ ಡಿಯಾ! ಉಡುಗರೆಯನ್ನು ತಕ್ಕೊಳ್ಳದೆ ಲಗ್ನಕ್ಕೂ, ದ್ರವ್ಯವಿಲ್ಲದೆ ರಾಜದರ್ಶನ ಕ್ಕೂ ಸರ್ವಥಾ ಹೋಗಬಾರದು. ಹೆಣ್ಣುಮಕ್ಕಳ ಇಲ್ಲವೆ ಅಕ್ಕತಂಗಿಯರ ಮನೆಗೆ ಬರಿಗೈಯಿಂದ ಹೋಗಕೂಡದು. ಸಾಧುಸಂತರ ಹಾಗು ಗುರುಗಳ ದರ್ಶನಕ್ಕೆ ಹೋಗುವವನು ತುಲಸಿಯ ದಳವನ್ನಾದರೂ ಒಯ್ಯಬೇಕು. ಹಿಡಿ ತುಂಬ ಅವಲಕ್ಕಿಯನ್ನು ಕೊಟ್ಟದ್ದಕ್ಕಾಗಿ ಶ್ರೀ ಕೃಷ್ಣನು ಬಂಗಾರದ ಪಟ್ಟಣ ವನ್ನು ಸುದಾಮನಿಗೆ ಕೊಟ್ಟ ಕಥೆಯು ಎಲ್ಲರಿಗೂ ಗೊತ್ತುಂಟು. ಹೀಗೆ ಜಗ ತ್ತೆಲ್ಲವೂ ಆಶಾಬದ್ಧವಾಗಿರುತ್ತದೆ. ರಾಜಾಯಿಯೇ, ಇನ್ನು ಮೇಲೆ ನನ್ನ ಮೇಲೆ ನನ್ನ ಪ್ರಿಯ ಮಿತ್ರನಾದ ನಾಮದೇವನಿಗೆ ತೊಂದರೆ ಕೊಡಬೇಡ. ಚೀಲದೊ ಳಗಿನ ಹೊನ್ನು ತೀರುತ್ತಲೇ ನನ್ನನ್ನು ಸ್ಮರಿಸು. ನಿನ್ನ ಗೆಳೆಯನಾದ ಕೇಶವ ಶೆಟ್ಟಿಯು ಬಂದಿದ್ದನೆಂದೂ, ಬಡತನ ಹಿಂಗಲು ಹೊನ್ನು ಕೊಟ್ಟು ಹೋದ ನೆಂದೂ ಆತನಿಗೆ ಹೇಳು, ಎಂದು ಹೇಳಿದನು. ಬಿರಿನುಡಿ ನುಡಿದದ್ದಕ್ಕೆ ಕ್ಷಮಿಸಿ ಭೋಜನ ಮಾಡಿ ಹೋಗಬೇಕು. ಯಜಮಾನರಲ್ಲಿ ನಿಮ್ಮ ಪ್ರೇಮ ವಿದ್ದದ್ದು ನನಗೆ ಗೊತ್ತಿದ್ದಿಲ್ಲ, ಎಂದು ರಾಜಾಯಿಯು ಬಹುಪರಿಯಿಂದ ಹೇಳಿ ದಳು. ಆದರೆ ಕೇಶವಸೆಟ್ಟಿಯು--ನಾಮನು ಇಲ್ಲದೆ ನಾನು ಉಣ್ಣಲಾರೆನೆಂದು ಹೇಳಿ ಹೊರಟು ಹೋಗಿ ರುಕ್ಮಿಣಿಗೆ ಎಲ್ಲ ಸಂಗತಿಯನ್ನು ಹೇಳಿದನು.

ಇತ್ತ ರಾಜಾಯಿಯು ಹೊನ್ನಿನ ಗೋಣಿಯನ್ನು ನೋಡಿ ಬಹಳ ಸಮಾಧಾನ ಪಟ್ಟಳು. ತನ್ನ ಪತಿಯು ಸೇವೆಮಾಡಿದ್ದರಿಂದ ದೇವರು ಪ್ರಸನ್ನನಾಗಲು ದ್ರವ್ಯವು ಪ್ರಾಪ್ತವಾಗಿರಬಹುದೆಂದು ನೆನಿಸಿದಳು. ಆಕೆಯು ಚೀಲವನ್ನು ಬಿಚ್ಚಿ ಉಡಿತುಂಬ ಹೊನ್ನು ತಕ್ಕೊಂಡು ಪೇಟೆಗೆ ಹೋಗಿ ವ್ಯಾಪಾರಸ್ಥನ ಕೈಯಲ್ಲಿ ಕೊಟ್ಟು ತನಗೆ ಬೇಕಾಗಿರುವ ಸಾಮಾನುಗಳನ್ನು ಹೇಳಿ ಮನೆಗೆ ಬಂದಳು. ವ್ಯಾಪಾರಸ್ಥನು ಇದನ್ನು ನೋಡಿ ಆಶ್ಚರ್ಯಪಟ್ಟು ಕಾಳು-ಕಡಿ, ತುಪ್ಪ-ತೊಗರಿ,

ವಸ್ತ್ರ-ಒಡವೆ-ಹಾಸಿಗೆ-ಹುಪ್ಪಡಿ ಮೊದಲಾದ ಸಾಮಾನುಗಳನ್ನು ನಾಮದೇವನ ಮನೆಗೆ ಕಳಿಸಿಕೊಟ್ಟನು. ಅವನ್ನು ಕಂಡು ರಾಜಾಯಿಗೆ ಬಹಳ ಸಂತೋಷವಾಯಿತು.

ಇತ್ತ ಗೋಣಾಯಿಯು ಹೊರಗೆ ಹೋಗಿದ್ದಳು. ಆಕೆಗೆ ಈ ವರ್ತಮಾನವೇನೂ ಗೊತ್ತಿದ್ದಿಲ್ಲ. ಆಕೆಯು ಅಲ್ಲಲ್ಲಿ ತಿರುಗಿ ಕಾಳು ದೊರಕಿಸಿಕೊಂಡು ಮನೆಗೆ ಬರಬರುತ್ತ ಸಿಟ್ಟಾಗಿ ಗುಡಿಯನ್ನು ಸೇರಿದ ನಾಮನಿಗೆ ತಿಳಿಯ ಹೇಳಿ ಅವನನ್ನು ಮನೆಗೆ ಕರಕೊಂಡು ಹೋಗಬೇಕೆಂದು ಯೋಚಿಸಿ ವಿಠ್ಠಲನ ಮಂದಿರಕ್ಕೆ ಬಂದಳು. ಆಕೆಯನ್ನು ನೋಡಿ ವಿಠ್ಠಲನು ನಾಮದೇವನನ್ನು ಬೆನ್ನ ಹಿಂದೆ ನಿಲ್ಲಿಸಿಕೊಂಡನು. ಗೋಣಾಯಿಯು ದೇವರಿಗೆ ಶಿರಸ್ಸಾಂಗ ನಮಸ್ಕಾರಗಳನ್ನು ಹಾಕಿ—'ದೇವಾ! ವಿಠ್ಠಲಾ, ನಿನ್ನ ಸಂಗತಿಯಿಂದ ನನ್ನ ಮಗನು ಕೆಟ್ಟು ಹೋದನು; ಮನೆ-ಮಾರು ತೊರೆದನು; ಹೆಂಡಿರು ಮಕ್ಕಳ ಪರಿವೆಯನ್ನು ಬಿಟ್ಟನು; ಮಾಯಾ ಮಮತೆಗಳನ್ನು ನೀಗಿದನು. ನಮ್ಮೆಲ್ಲರ ಗೋಳು ಕಟ್ಟಿಕೊಂಡು ನಿನ್ನ ದೇಗುಲವನ್ನು ಸೇರಿದನು. ನಮ್ಮ ಸಂಸಾರದ ದುಃಸ್ಥಿತಿಯನ್ನು ನೋಡಿ ದುರ್ಜನರು ನಗುತ್ತಿರುವರು. ಈತನು ದೇಹಬುದ್ಧಿಯನ್ನು ಬಿಟ್ಟು ಸ್ಪಷ್ಟವಾಗಿ ಸಮಾಧಿಯನ್ನು ಭೋಗಿಸುತ್ತಿರುವನು. ನೀನು ಅದ್ವೈತವನ್ನು ಬೋಧಿಸಿದ್ದರಿಂದ ಈತನ ಸಂಸಾರ ಬುದ್ಧಿಯು ಅಳಿದು ಹೋಯಿತು. ನಿನ್ನ ಸಹವಾಸ ಮಾಡಿದವರನ್ನು ನಿನ್ನಂತೆ ಮಾಡಿಕೊಳ್ಳುವೆ. ಅವರು ತಿರುಗಿ ಸಂಸಾರದಲ್ಲಿ ಬಂದದ್ದನ್ನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ. ಆಪ್ತೇಷ್ಟರಿಂದ ಅಗಲಿಸಿ ನಾಮನ ಬೆನ್ನ ಕಟ್ಟಿರುತ್ತೀ. ಮನೆಯಲ್ಲಿ ಅವನ ಹೆಂಡತಿಯು ಕಷ್ಟಪಡುತ್ತಿರುವಳು. ನಿನಗೆ ದಯೆ ಬರುವದಿಲ್ಲವೇ? ಈಗ ನಾನು ನಿನ್ನ ಛಪೆಂಬುಡುವದಿಲ್ಲ. ಮಮತೆಯಿಂದ ನಾಮನನ್ನು ರಕ್ಷಿಸಿದ ನನಗೆ ನಿರಾಶೆಯನ್ನುಂಟುಮಾಡಿದಿ. ನಮ್ಮ ದುಃಖವನ್ನು ಲಾಲಸದೆ ನಾಮನನ್ನು ನಿನ್ನ ಗುಡಿಯಲ್ಲಿ ಇಟ್ಟುಕೊಂಡದ್ದು ನಿನ್ನ ಕಾರುಣ್ಯಶೀಲಕ್ಕೆ ತಕ್ಕದ್ದಲ್ಲ. ಛೇ! ನೀನೇನು ಮಾಡೀ, ನಿನ್ನ ಅವಗುಣಗಳು ಎಲ್ಲರಿಗೂ ಗೊತ್ತಿಲ್ಲವೆ? ಔದಾರ್ಯದ ಜಂಭವನ್ನು ಮಾತ್ರ ಮೇಲೆ ಮೇಲೆ ಮೆರೆಸುತ್ತೀ. ನೀನು ಹೆರವರಿಂದ ಪ್ರತಿಂಗತವಾಗಿ ಏನಾದರೂ ಎಬ್ಬಿಸದೆ ಯಾರಿಗೆ ಏನು ಕೊಟ್ಟಿರುವೆ? ಸುದಾಮನಿಂದ ಅವಲಕ್ಕಿಯನ್ನು ಸುಲಿದು ಸುವರ್ಣಪುರವನ್ನು ಅವನಿಗೆ ಕೊಟ್ಟಿರುವೆ? ದ್ರೌಪದಿಯಿಂದ ಹರಿವೆಯ ಪಲ್ಲೆಯ ಎಳೆಯನ್ನು ಎಳಕೊಂಡು ಎಲಾ ಋಷಿಗಳಿಗೆ ಉಣಬಡಿಸಿದೆ. ಬಲಿಷ್ಠ

ನಾದ ರಾವಣನನ್ನು ಗೆಲ್ಲಲಿಕ್ಕೆ ಆತನ ಮನೆಜಗಳದ ಲಾಭವನ್ನು ಪಡೆದುಕೊಂಡು ವಿಭೀಷಣನಿಗೆ ಲಂಕೆಯನ್ನು ದಾನವಾಗಿ ಕೊಟ್ಟಿ. ಹೀಗೆ ನಿನ್ನ ದುರ್ಗುಣಗಳನ್ನು ಎಷ್ಟು ಹೇಳಿದರೂ ತೀರದು. ಅವನ್ನು ಆದಿಶೇಷನು ವರ್ಣಿಸಲಾರನು. ನಾನು ನಿನ್ನ ಭಿಡೆಯನ್ನು ಕಾದದ್ದರಿಂದಲೇ ನಿನ್ನ ದೇವತ್ವವು ಉಳಿದಿರುತ್ತದೆ, ಎಂದು ಸಿಟ್ಟಿನಿಂದ ಒದರಾಡ ಹತ್ತಿದಳು.

ಗೋಣಾಬಾಯಿಯ ಈ ಮಾತುಗಳನ್ನು ಕೇಳಿ ವಿಠ್ಠಲನು ಮುಗುಳುನಗೆಯಿಂದ—ಅವ್ವಾ, ನೀನು ವ್ಯರ್ಥವಾಗಿ ನನ್ನಮೇಲೆ ಅಪವಾದ ಯಾಕೆ ಹೊರಿಸುತ್ತೀ? ದೇಟು ಸಡಲಿದ ಹಣ್ಣು, ಗಾಳಿಯಿಂದ ಬೀಳುವಂತೆ ನಾಮನು ತಾನಾಗಿಯೇ ಬಂದು ನನ್ನನ್ನು ದುಂಬಾಲಬಿದ್ದರೆ ನಾನೇನು ಮಾಡಲಿ? ಸುಳ್ಳೇ ಸಿಟ್ಟಾಗಬೇಡ. ನಿನ್ನಲ್ಲಿ ಮಗನೆಂಬ ಕಕ್ಕುಲತೆಯು ಇದ್ದರೆ, ಅವನನ್ನು ಕರೆದುಕೊಂಡು ಹೋಗು. ನನ್ನ ಕಡೆಗೆ ಏನೂ ತಪ್ಪಿಲ್ಲ. ಅಪವಾದ ಬರುವ ಕಾಲವು. ತಾಯಿಾ, ನೀನೇನು ಮಾಡೀ? ನಾನು ಜನ್ಮರಹಿತನೂ, ಶಾಶ್ವತನೂ, ಅಜಿಂಕ್ಯನೂ, ಗುಣರಹಿತನೂ ಆಗಿದ್ದರೂ, ನಾಮನ ಮೇಲಿನ ಪ್ರೀತಿಯಿಂದ ಸಾಕಾರನೂ, ಸಗುಣನೂ ಆದೆನು. ಗಿಡಗಳಿಗೆ ಆದ ಹಣ್ಣುಗಳನ್ನು ತೋಟಿಗನು ಕೊಯ್ದುಕೊಂಡು ಹೋಗುವಂತೆ ಕರ್ಮಯೋಗದಿಂದ ಅವರವರ ಫಲಭೋಗವು ಅವರವರಿಗೆ ಆಗುವದಿಲ್ಲ. ಅದೇ ಮೇರೆಗೆ ಜಗದ್ರೂಪ ವೃಕ್ಷವಾದ ನನ್ನಲ್ಲಿ ನಾಮನೆಂಬ ಅಮೃತಫಲವು ಉತ್ಪನ್ನವಾಗಿರಲು, ನೀನು ಅದನ್ನು ಕೊಯ್ದುಕೊಂಡಿರುತ್ತೀ; ಅದರ ದುಃಖವು ನನಗಿರುತ್ತದೆ.

ವಿಠ್ಠಲನ ಈ ಮಾತುಗಳನ್ನು ಕೇಳಿ ಗೋಣಾಯಿಯು—ಸ್ವಾಮಿಾ, ಇಂಥ ದೊಡ್ಡ ದೊಡ್ಡ ಮಾತು ಹೇಳಿ ಬಡಿವಾರ ಬಡಿಯಲಿಕ್ಕೆ ಎಲ್ಲರಿಗೂ ಬರುತ್ತದೆ. ನನ್ನ ಹೊಟ್ಟೆಯಲ್ಲಿ ಕಲ್ಲು ತುಂಬಿ ಮಗನನ್ನು ಅಗಲಿಸಬೇಕೆನ್ನುತ್ತೀ? ಒಕ್ಕಲಿಗನು ಹೊಲದಲ್ಲಿ ದುಡಿದುಡಿದು ಪೈರು ಬೆಳೆಯಬೇಕು. ಅರಸನು ದಂಡಕಟ್ಟಿ ಆಯತವಾಗಿ ಕಾಳಿಗೆ ಪಾಲುಗಾರನಾಗಬೇಕು! ಇದು ನ್ಯಾಯವೇ? ನಾನು ನಾಮನನ್ನು ಉಣಿಸಿ ತಿನಿಸಿ ಬೆಳಿಸಿ ದೊಡ್ಡವನನ್ನು ಮಾಡಬೇಕು; ನೀನು ಅವನ ಒಡೆಯನಾಗಿ ಕೂಡ್ರಬೇಕು. ಸೈ! ಸೈ! ಪುಂಡರ ರೀತಿಯೇ ಇದು, ಎಂದು ನುಡಿದಳು. ಇವಳ ಮಾತಿಗೆ ವಿಠ್ಠಲನು ಸಿಟ್ಟಿಗೇಳದೆ, ಇವಳನ್ನು ಸಮಾಧಾನಪಡಿಸದಿದ್ದರೆ ನನ್ನ ಹರಲಿ ಮಾಡುವಳೆಂದು ಬಗೆದು—ಅವ್ವಾ, ಗೋಣಾಬಾಯಿಯೇ, ನಿನ್ನ ಪುಣ್ಯವು ಹೆಚ್ಚಿನದು. ಹೀಗೆಂತಲೇ ನಿನ್ನ ಹೊಟ್ಟೆಯಲ್ಲಿ

ಇಂಥ ಈಶಭಕ್ತನು ಜನಿಸಿದನು. ಸಾವಿತ್ರಿಯ ಹೊಟ್ಟೆಯಲ್ಲಿ ನಾರದನೂ, ಅನ ಸೂಯೆಯ ಹೊಟ್ಟೆಯಲ್ಲಿ ದತ್ತಾತ್ರಯನೂ, ಸುನೀತಿಯ ಹೊಟ್ಟೆಯಲ್ಲಿ ಧ್ರುವನೂ ಹುಟ್ಟಿದಂತೆ ನಿನ್ನ ಹೊಟ್ಟೆಯಲ್ಲಿ ಭಗವದ್ಭಕ್ತನಾದ ಈ ನಾಮನು ಹುಟ್ಟಿರು ವನು. ಧನ್ಯಳು! ಧನ್ಯಳು!! ಗೋಣಾಬಾಯಿಯೇ, ನೀನು ನಿಜವಾಗಿಯೂ ಧನ್ಯಳು ಕಂಡೆಯಾ! ವೈಷ್ಣವಶಿರೋಮಣಿಯು ನಿನ್ನ ಸ್ತನಪಾನ ಮಾಡಿರುವನು. ನಿತ್ಯ ನಿನ್ನ ಕೂಡ ಊಟಮಾಡುತ್ತಿರುವನು. ನಿನ್ನೊಡನೆ ಸಲಿಗೆಯಿಂದ ನಡೆ ಯುತ್ತಿರುವನು. ಇದೇನು ಸಾಧಾರಣ ಭಾಗ್ಯವಲ್ಲ. ನೀನು ಪುಣ್ಯವಂತೆ ಯೆಂದೇ ಇಂಥ ಪುಣ್ಯಾತ್ಮನು ನಿನಗೆ ಮಗನಾದನು, ಎಂದು ಸಮಾಧಾನವನ್ನು ಹೇಳಿದನು.

ಗೋಣಾಬಾಯಿಗೆ ಇಂಥ ಸಾಧುವಾದ ನುಡಿಗಳಿಂದೇನೂ ಪ್ರಯೋಜನ ವಾಗಲಿಲ್ಲ. ಅವಳು ಮತ್ತಿಷ್ಟು ರೊಚ್ಚಿಗೆದ್ದು, ದೇವರಿಗೆ—ಮನೆ ಮುರುಕ ವಿಠ್ಠಲಾ! ಇಂಥ ಮಾತಿನಿಂದ ಉಬ್ಬಿಸಿದರೆ ನಾನು ಉಬ್ಬುವವಳೇ? ನಿನ್ನ ಕಪಟ ನಾಟಕವನ್ನು ನಾನೆಲ್ಲ ಬಲ್ಲೆನು. ಮಂದಿಯ ಮಕ್ಕಳಿಗೆ ಇಲ್ಲದ್ದೊಂದು ಬೋಧೆ ಮಾಡಿ ಭಜನೆಗೆ ಹಚ್ಚಿ ಅವರನ್ನು ಹುಚ್ಚರಂತೆ ಕುಣಿಸುವದು ನಾನು ಅರಿಯದ ಮಾತಲ್ಲ. ನಿನ್ನ ಮಹಾತ್ಮ್ಯವು ಶುಕ ಸನಕಾದಿಗಳಂಥ ಸಾಧು ಸಂತರಿಗೆ ಗೊತ್ತಾದೀತು? ನನ್ನಂಥ ಹೆಂಗಸಿಗೆ ತಿಳಿಯಲಾರದು. ನನಗೆ ನಾಮನೊ ಬ್ಬನೇ ಮಗನು. ಅವನೇ ನಮ್ಮನ್ನು ಸಲಹಿ ಸಾಕುವವನು. ಹೀಗಿರಲು ಮನೆ ಮಾರು ನೀಗಿ ವಿದೇಹಸ್ಥಿತಿಯುಳ್ಳವನಾಗಿ ಮರುಳನಂತೆ ಹೆಂಡಿರು ಮಕ್ಕಳ ಪರಿವೆ ಇಲ್ಲದೆ ನಿನ್ನ ದೇಗಲು ಸೇರಿದರೆ ನಮ್ಮಂಥ ಅನಾಥರ ಗತಿಯೇನು! ಏನಾದರೂ ಬುದ್ಧಿಹೇಳಿ ನಾಮನನ್ನು ಮನೆಗೆ ಕಳಿಸಿದರೆ ಒಳಿತಾಯಿತು. ಇಲ್ಲದಿ ದ್ದರೆ ನಾಲ್ಕುಮಂದಿಯಲ್ಲಿ ನಿನ್ನ ಹರಲಿಯನ್ನು ಮಾಡದೆ ಬಿಡಲಿಕ್ಕಿಲ್ಲ. 'ದೇವರು' ಎಂದು ಇಲ್ಲಿಯ ವರೆಗೆ ಕೈಗಾದರೆ ನಿನಗೆ ನಮ್ಮ ಕರುಣ ಬರಲೊಲ್ಲದು. (ನಾಮನ ದೇವನ ಕಡೆಗೆ ಮೋರೆ ತಿರುವಿ) ಏ ನಾಮ್ಯಾ! ಸಂಸಾರಕ್ಕೆ ಹೆದರಿ ಕುಳಿತರೆ ಕೇಳುವರಾರು? ಮನೆಗೆ ನಡೆ. ಹೆಂಡಿರು ಮಕ್ಕಳ ಹೊಟ್ಟೆಗೆ ಹಾಕದೆ ಕೈಸಾಗದ ಹೇಡಿಯಂತೆ ಇರುವದು ಸರಿಯಲ್ಲ. ಪ್ರಪಂಚವನ್ನು ಒಕ್ಕಲಿಡಲಿಕ್ಕೆ ಈ ಪುಂಡ ಪಂಡಿತನಾದ ಯಾದವನಾಯಕನು ಹೇಳಿದನೇ! ಹೆರವರ ಪ್ರಪಂಚವನ್ನು ಕೆಡಿ ಸಲಿಕ್ಕೆಂತಲೇ ಈತನು ಬಂದು ಇಟ್ಟಂಗಿಯ ಮೇಲೆ ನಿಂತು ನೋಡುತ್ತಿರು ವನೇ! ಅವನ ಕಣ್ಣೆದುರಿಗೆ ನಿನ್ನನ್ನು ಎಳೆದೊಯ್ಯುತ್ತೇನೆ ನೋಡು. ಅವನು

ಬಿಡಿಸುತ್ತಿದ್ದರೆ ಬಿಡಿಸಲಿ, ಎಂದು ಅಂದವಳೇ ನಾಮನ ಕೈಹಿಡಿದು ಜಗ್ಗಹತ್ತಿದಳು. ಪಾಂಡುರಂಗನನ್ನು ಅಗಲುವ ಪ್ರಸಂಗ ಬಂದಿತೆಂದು ನಾಮನು ದಳದಳ ಕಣ್ಣೀರು ಸುರಿಸಹತ್ತಿದನು. ದೇವರು ಅವನಿಗೆ ಸಮಾಧಾನ ಹೇಳಿ ಶಾಂತಗೊಳಿಸಿ ಗೋಣಾಯಿಯ ಕೈಯಲ್ಲಿ ಮಗನನ್ನು ಕೊಟ್ಟು, ನಮ್ಮ ಮೇಲೆ ನಿರರ್ಥಕ ನಿಮಿತ್ತವನ್ನು ಹೊರಿಸಬೇಡವೆಂದು ಆಕೆಗೆ ಹೇಳಿ ಉಭಯತರನ್ನು ಮನೆಗೆ ಅಟ್ಟಿದನು. ಹಾದಿಯಲ್ಲಿ ಗೋಣಾಯಿಯು ಮಗನಿಗೆ—ಪ್ರಪಂಚದ ಮೇಲಿನ ಮಾಯೆಯನ್ನು ಬಿಟ್ಟು ವಿಠ್ಠಲನಿಗೆ ಶರಣು ಹೋಗೆಯಾ, ಎಂದು ಕೇಳಿದಳು. ಅದಕ್ಕೆ ನಾಮದೇವನು ಏನೂ ಉತ್ತರ ಕೊಡದೆ ತಲೆಯನ್ನು ಬಾಗಿಸಿದನು.

ಅವರಿಬ್ಬರು ಮನೆಗೆ ಬಂದು ನೋಡುವಷ್ಟರಲ್ಲಿ ರಾಜಾಬಾಯಿಯು ಪಂಚಪಕ್ವಾನ್ನಗಳ ಅಡಿಗೆಯನ್ನು ಮಾಡಿಕೊಂಡು ಕುಳಿತಿದ್ದಳು. ಮನೆಯಲ್ಲಿ ಹರಕ-ಮುರಕ ಚಾಪಿಗಳೆಲ್ಲ ಹೋಗಿ, ಹೊಸ ಹೊಸ ಜಮುಖಾನೆಗಳು. ಗಾದಿಗಳು ಬಂದಿದ್ದವು. ಸೋರಕ ಪಾತ್ರೆಗಳೆಲ್ಲ ಇಲ್ಲದಾಗಿ ಗಟ್ಟಿಮುಟ್ಟ ಪಾತ್ರೆಗಳು ತುಂಬಿದ್ದವು. ಇದನ್ನೆಲ್ಲ ಕಂಡು ಅವರು ದಂಗು ಬಡಿದವರಂತೆ ನಿಂತುಕೊಂಡರು. ನಾಮದೇವನು ಐಶ್ವರ್ಯವನ್ನು ನೋಡಿ ಹರ್ಷಬಡುವ ಬದಲು ರಾಹು ನುಂಗಿದ ಸೂರ್ಯನಂತೆ ಕಪ್ಪಾದನು. ಆತನು ತನ್ನ ತಾಯಿಗೆ ಈ ಸಂಪತ್ತು ಎಲ್ಲಿಂದ ಬಂತೆಂದು ಕೇಳಲು, ಆಕೆಯು ನನಗೆ ಯಾವ ಸಂಗತಿಯೂ ಗೊತ್ತಿಲ್ಲವೆಂದು ಹೇಳಿದಳು. ಮತ್ತು ತನ್ನ ಸೊಸೆಗೆ—ರಾಜಾಯಿ, ಈ ಬಗೆಯ ಸಂಪತ್ತು ಎಲ್ಲಿಂದ ಬಂತು ಹೇಳೆನಲು, ರಾಜಾಯಿಯು—ಈಗಂತೂ ಹೊತ್ತಾಗಿದೆ, ಮೊದಲು ಊಟವಾಗಲಿ, ಮುಂದಿನ ಮಾತು ಮುಂದೆ, ಎಂದು ನುಡಿದು ಸ್ನಾನಕ್ಕಾಗಿ ಕಾಸಿದ ನೀರು ತಂದಿಟ್ಟು ಅಣಿ ಮಾಡಿದಳು. ಹೆಂಡತಿಯ ಈ ದಿನದ ವರ್ತನವನ್ನು ನೋಡಿ ನಾಮದೇವನು—'ಹಣವಿಲ್ಲದಿದ್ದರೆ ಯಾರಿಗೆ ಯಾರೂ ಆಗುವದಿಲ್ಲ. ಆಪ್ತರಿಷ್ಟರು ವೈರಿಗಳಾಗುತ್ತಾರೆ. ಮಾಯೆಯ ಭೂತಾಟಿಕೆಯು ಇಷ್ಟು ಸೋಜಿಗವಾಗಿದೆ?ಎಂದು ಮನಸ್ಸಿನಲ್ಲಿ ಅಂದುಕೊಂಡು ಹೆಂಡತಿಯನ್ನು ಕುರಿತು—ಪ್ರಿಯೇ, ಇದೆಲ್ಲ ಸೌಭಾಗ್ಯವು ಎಲ್ಲಿಂದ ಬಂದಿತು ಹೇಳು, ಎನಲು ಅವಳು ಹಿಂದೆ ನಡೆದ ಕೇಶವಸೆಟ್ಟಿಯ ಎಲ್ಲ ವೃತ್ತಾಂತವನ್ನು ಯಥಾಸ್ಥಿತವಾಗಿ ಹೇಳಿದಳು. ಕೂಡಲೆ ನಾಮದೇವನು 'ಪರಮಾತ್ಮನೇ, ಹೀಗೆ ನನ್ನ ಸಲುವಾಗಿ ವೇಷಧಾರಿಯಾಗಿ ಬಂದು ನಮ್ಮ ಬಡತನ ಹಿಂಗುವಂತೆ ಹೊನ್ನು ಕೊಟ್ಟು ಹೋದೆಯಾ! ಮಾಯಾತೀತನಾದ ನೀನು ನನ್ನ ಸಲುವಾಗಿ ಇಷ್ಟು ಕಷ್ಟಪಡ

ಬೇಕಾಯಿತೇ? ಯೋಗಿಗಳಿಗೆ ದರ್ಶನ ಕೊಡದ ನೀನು ನನ್ನ ಸಲುವಾಗಿ ಕೇಶವ ಶೆಟ್ಟಿಯಾದೆಯಾ, ಎಂದು ಅನನ್ಯಭಾವದಿಂದ ಶ್ರೀಪತಿಯನ್ನು ಸ್ತುತಿಸಿದನು. ಬಳಿಕ ಊರೊಳಗಿನ ಬ್ರಾಹ್ಮಣರನ್ನೆಲ್ಲ ಕರೆದು ಸಂಪತ್ತನ್ನೆಲ್ಲ ದಾನಮಾಡಿ ಉಪಾಧಿರಹಿತನಾಗಿ ಸದ್ಭಾವದಿಂದ ಪುರುಷೋತ್ತಮನನ್ನು ಭಜಿಸಹತ್ತಿದನು.

ಕಾರ್ತಿಕ ಮಾಸದಲ್ಲಿ ಸಾಧುಸಂತರು ಶ್ರೀ ವಿಠೋಬನ ದರ್ಶನಕ್ಕಾಗಿ ಪ್ರತಿವರ್ಷವೂ ಬರುತ್ತಿದ್ದರು. ಅದರಂತೆ ಒಂದು ವರ್ಷ, ನಿವರ್ತಿನಾಥ, ಗೋರೋಬಾ ಕುಂಬಾರ ಮುಂತಾದ ಸಂತಶಿರೋಮಣಿಗಳು ಬಂದಿದ್ದರು. ನಾಮದೇವನಂತು ಅಲ್ಲಿಯೇ ಇದ್ದನು. ತನ್ನೊಡನೆ ಶ್ರೀ ಪರಮಾತ್ಮನಾದ ವಿಠ್ಠಲನು ಬಹಳ ಸಲಿಗೆಯಿಂದ ನಡೆದುಕೊಳ್ಳುತ್ತಾನೆಂದೂ, ತನ್ನ ಮಾತನ್ನು ಕೇಳುತ್ತಾನೆಂದೂ ನಾಮದೇವನು ಅಭಿಮಾನಪಡುತ್ತಿದ್ದನು. ಒಂದು ದಿನ ಚಂದ್ರಭಾಗದ ಮಳಲಬೈಲಲ್ಲಿ ಎಲ್ಲಾ ಸಾಧುಸಂತರು ಕುಳಿತುಕೊಂಡು ಸುಖ-ಸಲ್ಲಾಪಗಳನ್ನಾಡುತ್ತ, ವೇದಾಂತ ವಿಷಯದಲ್ಲಿ ವಾದ-ವಿವಾದ ಮಾಡುತ್ತ ಕುಳಿತಿದ್ದರು. ಅವರ ಸಂದಣಿಯಲ್ಲಿ ನಾಮದೇವನೂ ಸಹಜವಾಗಿ ಬಂದು ಕುಳಿತನು. ಕೂಡಲೆ ನಿವರ್ತಿನಾಥರು—ಕಾಕಾ, ಗೋರೋಬಾ ನೀನು ಕುಂಬಾರನು. ನಿನಗೆ ಹಸಿಬಿಸಿ ಗಡಿಗೆ ಮಡಿಕೆಗಳು ಯಾವವೆಂಬುವದು ಗೊತ್ತಿದ್ದ ಮಾತಷ್ಟೇ! ಎಂದು ನುಡಿದರು. ಅದಕ್ಕೆ ಗೋರೋಬನು—ಅಹುದಹುದು, ನನಗೆ ಅದು ನಿತ್ಯದ ಕೆಲಸವಾಗಿದೆ, ಗೊತ್ತಿರಲಿಕ್ಕೆ ಬೇಕು, ಗೊತ್ತುಂಟು, ಎಂದು ಹೇಳಿದನು. ಕೂಡಲೆ ನಿವರ್ತಿನಾಥರು—ಹಾಗಾದರೆ ಇಲ್ಲಿ ಕೂಡಿದ ಘಟಗಳನ್ನು ಪರೀಕ್ಷಿಸಿ ಹೇಳು ನೋಡುವಾ! ಅಂದರು.

ಈ ಮಾತಿನ ಇಂಗಿತವು ಎಲ್ಲರಿಗೂ ಹೊಳೆಯಿತು; ಆದರೆ ನಾಮದೇವನಿಗೆ ಮಾತ್ರ ಅದು ತಿಳಿಯಲಿಲ್ಲ. ಇದರಿಂದ ಅವನು ಮರುಳನಂತೆ ಎಲ್ಲರ ಮೋರೆಯನ್ನು ಮಿಕಿಮಿಕಿ ನೋಡಹತ್ತಿದನು. ಗೋರೋಬನು ಬಡಿಮಣಿಯಿಂದ ಎಲ್ಲರ ತಲೆಗೆ ಪೆಟ್ಟು ಹಾಕಿದನು. ಆ ಏಟನ್ನು ತಾಳಲಾರದೆ ನಾಮದೇವನು—ಕಾಕಾನವರೇ, ಇದರಲ್ಲಿ ನಿಮ್ಮ ಜಾಣತನವೇನೆಂಬದು ನನಗಂತೂ ತಿಳಿಯದಾಗಿದೆ. ಎಂದು ಗಟ್ಟಿಯಾಗಿ ನುಡಿಯಲು, ಗೋರೋಬನು—ಇದೊಂದು ಮಾತ್ರ ಹಸಿಬಿಸಿಯಾದ (ಕಚ್ಚಾ) ಗಡಿಗೆಯಿದೆ. ಇನ್ನೂ ಇವನಲ್ಲಿ ಅಖಂಡವಾದ ಸಮಾಧಾನವಾಗಲಿ, ಸುಖದುಃಖಗಳ ಸಮತ್ವವಾಗಲಿ ಬಂದಿಲ್ಲ, ಎಂದು ನುಡಿದನು. ಇದನ್ನು ಕೇಳಿದ ಕ್ಷೂಡಲೆ ನಾಮದೇವನ ಮನಸ್ಸಿಗೆ ಬಹಳ ಹತ್ತಿ-

ಹೊಡೆದ ಪೆಟ್ಟಿಗಿಂತ ನುಡಿದ ಪೆಟ್ಟು ಹೆಚ್ಚಾಗಿ ನಾಮದೇವನಿಗೆ ಅಪಮಾನವು ಸಹಿಸದಂತಾಯಿತು. ಕೂಡಲೆ ಆತನು ಅಲ್ಲಿಂದೆದ್ದು ಮೋರೆ ತಿರುವಿ ನೆಟ್ಟಗೆ ಗುಡಿಯನ್ನು ಸೊಕ್ಕು ದೇವರ ಮುಂದೆ ದೊಡ್ಡ ದನಿಯಿಂದ ಬಿಕ್ಕಿಬಿಕ್ಕಿ ಅಳತೊಡಗಿದನು. ಆಗ ಶ್ರೀವಿಠ್ಠಲನು—ತಮ್ಮಾ, ನಾಮ್ಯಾ ಯಾಕೆ ಅಳುವೆ? ಯಾರೇನು ಮಾಡಿದರು? ಆದದ್ದಾದರೂ ಏನು? ಹೇಳು ಎಂದನು. ಆಗ ನಾಮದೇವನು ಹುಬ್ಬು ಗಂಟಿಕ್ಕಿ ಉರಿಮೋರೆಯಿಂದ—ಸಾಕು, ದೇವಾ! ನಿನ್ನ ಸಂಗತಿ ಸಾಕು ಇಷ್ಟುದಿವಸ ನಿನ್ನ ಸೇವೆ ಮಾಡಿದ ಫಲವು ನನಗೆ ಈ ಹೊತ್ತು ಸಿಕ್ಕಿತು. ಬಡಿಮಣೆಯಿಂದ 'ಧುಪ್ ಧುಪ್' ಎಂದು ಕುಂಬಾರನಿಂದ ಬಡಿಸಿಕೊಂಡೆನು. ಇದಲ್ಲದೆ ಎಲ್ಲಾ ಸಂತರಲ್ಲಿ ನಾನೊಬ್ಬನು ಮಾತ್ರ 'ಕಚ್ಚಾ' ಎಂದು ನಿರ್ಣೀತನಾದೆನು. ನಿನಗೆ ಇಂದು ಸಮಾಧಾನವಾಯಿತೇ! ಲೋಭಮಾತ್ರ ಇರಲಿ, ಎಂದು ಹೇಳಿ ಪುನಃ ಅಳಹತ್ತಿದನು. ಅದಕ್ಕೆ ದೇವರು—ನಾಮ್ಯಾ, ಲೋಭವಿರಲಿ ಎಂದು ನುಡಿಯುತ್ತೀಯಲ್ಲ, ಎಲ್ಲಿಗೆ ಹೋಗುವೆ, ಹೇಳು. ಎಂದು ಕೇಳಲು, ಎಲ್ಲಿಗೇನು? ಜೀವಕೊಡಲಿಕ್ಕೆ ಹೋಗುವೆನು, ಎಂದು ನಾಮನು ಪ್ರತ್ಯುತ್ತರವಿತ್ತನು.

ನಾಮದೇವನ ಈ ನುಡಿಕೇಳಿ ದೇವರು ನಸುನಕ್ಕು—ನಾಮ್ಯಾ, ಶಾಬಾಸ್, ಸಣ್ಣ ಮಾತಿಗೆ ಇಷ್ಟು ಅನರ್ಥ ಮಾಡುವರೇ! ನೀನು ಇಂಥವನೆಂದು ನನಗೆ ಗೊತ್ತಿದ್ದಿಲ್ಲ ಬಿಡು; ನಿಜವಾಗಿ ನೀನು ಇನ್ನೂ ಕಚ್ಚಾಸ್ಥಿತಿಯಲ್ಲಿಯೇ ಇರುವೆ. ವಿಠ್ಠಲನ ಸಂಗಡ ಮಾತಾಡುವೆನು, ಆಡುವೆನು, ಉಣ್ಣುವೆನು, ನನಗೇನು ಕೊರತೆಯೆಂದು ನೀನು ತಿಳಿದಿರುತ್ತೀ; ನಿನ್ನ ಈ ಬಿಂಕವು ಸರ್ವಥಾ ಯೋಗ್ಯವಲ್ಲ. ಸಮಾಧಾನ ತಾಳು, ಗುರುವನ್ನು ಶರಣು ಹೋಗು; ಅಂದರೆ ಮಾತ್ರ ಅಭಿಮಾನವು ನಾಶವಾಗಿ ಮುಂದೆ ಇಂಥ ಪ್ರಸಂಗವೇ ನಿನಗೆ ಬರಲಿಕ್ಕಿಲ್ಲ. ಕೈಸಾಗದ ಹೇಡಿಯಂತೆ ಅಳುವದು ನಿನಗೆ ತಕ್ಕದ್ದೇನು? ಎಂದು ಜರೆದು ನುಡಿದನು.

ವಿಠ್ಠಲನ ಈ ಮಾತುಗಳನ್ನು ಕೇಳಿ ನಾಮದೇವನು—'ದೇವಾ' ನೀನು ಗುರುಗಳಿಗೆ ಗುರುವು. ಹೀಗಿರಲು ಬೇರೆ ಕಡೆಗೆ ಅಟ್ಟುವದು ಸರಿಯೇ! ನೀನೇ ಆ ಗುರುಮಂತ್ರವನ್ನು ಉಪದೇಶಿಸು, ಅಂದರಾಯಿತು. ಅನ್ನಲು ವಿಠ್ಠಲನು—ಹಾಗಲ್ಲ. ನಾನು ಹೇಳಿದಂತೆ ಕೇಳು. ಅದರಿಂದ ನಿನಗೆ ಕಲ್ಯಾಣವಾಗುವದು. ಬ್ರಹ್ಮೋಪದೇಶವು ನಿನಗೆ ಬಾರಸೀಗ್ರಾಮದಲ್ಲಿರುವ ವಿಸೋಬಾ ಖೇಚರ ಎಂಬವರಿಂದ ದೊರೆಯತಕ್ಕದ್ದುಂಟು, ಅಲ್ಲಿಗೆ ತೆರಳು, ಎಂದು ಹೇಳಿ

ದರು. ದೇವರ ಅಪ್ಪಣೆಯಿಂದ ನಾಮದೇವನು ಬಾರಸೀಗ್ರಾಮಕ್ಕೆ ಹೋಗಿ ಏಕನಿಷ್ಠೆಯಿಂದ 'ವಿಸೋಬಾ ಖೇಚರ' ಎಂಬ ಸಾಧುವರ್ಯರ ಸೇವೆ ಮಾಡಿ ಅವರನ್ನು ಒಲಿಸಿಕೊಂಡನು. ಅವರ ಉಪದೇಶದಿಂದ ಪರಿಪಕ್ವವಾದ ಬುದ್ಧಿಯುಂಟಾಯಿತು. ಪರಮೇಶ್ವರ ಪ್ರಾಪ್ತಿಯ ಸುಲಭೋಪಾಯವು ಗೊತ್ತಾಯಿತು. ಶ್ರವಣ-ಮನನ-ನಿಧಿಧ್ಯಾಸಗಳ ಯೋಗದಿಂದ ಬ್ರಹ್ಮಜ್ಞಾನವು ನಾಮದೇವನಿಗಾಯಿತು. ಬಳಿಕ ದೇವರ ಅಪ್ಪಣೆಯಿಂದ ಆತನು ಶತಕೋಟಿ ಅಭಂಗಗಳನ್ನು (ಪದಗಳನ್ನು) ರಚಿಸಿದನು. ಅವುಗಳಲ್ಲಿ ದೇವರ ಗುಣಾನುವಾದವೂ ಭಕ್ತಿಮಾರ್ಗದ ತತ್ವಗಳೂ ತುಂಬಿ ತುಳುಕುತ್ತಿರುವವು. ಅವು ಪಾಮರರಿಗೆ ಸಹ ತಿಳಿಯುವಷ್ಟು ಸುಲಭ ಸರಣಿಯುಳ್ಳವುಗಳಾಗಿವೆ. ಅನಿರ್ವಾಚ್ಯವಾದ ಪ್ರೇಮವನ್ನು ದೇವರಲ್ಲಿಡಬೇಕೆಂದು ಅವು ಸಾರಿ ಹೇಳುತ್ತವೆ.

ಈ ಮೇರೆಗೆ ಶ್ರೀಗುರುಕೃಪೆಯಿಂದ ಸಿದ್ಧನಾದ ನಾಮದೇವನು ಐವತ್ತು ವರ್ಷದ ವಯಸ್ಸಿನವನಾಗಿ ಶಾಲಿವಾಹನ ಶಕದ ೧೨೭೦ ನೇ ಇಸವಿಯಲ್ಲಿ ಸಮಾಧಿಸ್ಥನಾದನು. ನಾಮದೇವನ ಯೋಗದಿಂದ ದಾಮಾಜಿಯಂಥ ದರಿದ್ರ ಸಿಂಪಿಗನಿಗಾದರೂ ದೇವರ ದರ್ಶನವಾಯಿತು.

ಈ ನಾಮದೇವನ ಚರಿತ್ರದಿಂದ ಹಲವು ಮಹತ್ವದ ಸಂಗತಿಗಳು ನಮ್ಮ ಕಣ್ಣಿಗೆ ಕಟ್ಟುತ್ತವೆ. ಅವುಗಳಲ್ಲಿ ಸಂಸಾರೋಪಾಧಿಯು ಎಂಥವರನ್ನಾದರೂ ಮೋಹಕ್ಕೆ ಗುರಿಮಾಡುತ್ತದೆಂಬದು ಒಂದನೆಯ ಸಂಗತಿಯು. ನಾಮದೇವನ ತಂದೆ-ತಾಯಿಗಳಾದ ದಾಮಾಜಿ-ಗೋಣಾಬಾಯಿಯವರು ಭಗವದ್ಭಕ್ತರು. ನಾಮದೇವನು ಅಯೋನಿಜನೆಂಬದೂ, ಆತನು ಪಾಷಾಣ ಮೂರ್ತಿಯಿಂದ ನೈವೇದ್ಯಭಕ್ಷಣವನ್ನು ಮಾಡಿಸಿದನೆಂಬದೂ ಅವರಿಗೆ ಗೊತ್ತಿತ್ತು. ಅಷ್ಟೇಕೆ, ನಾಮದೇವನಂಥ ಮಹಾತ್ಮನಾದ ಸತ್ಪುತ್ರನ ಸಹವಾಸದಿಂದ ಪ್ರತ್ಯಕ್ಷ ಪಾಂಡುರಂಗನು ಅವರೊಡನೆ ಸಲಿಗೆಯಿಂದ ಮಾತಾಡುತ್ತಿದ್ದನು. ಇಂಥ ಯೋಗ್ಯತೆಯ ಗೋಣಾಯಿಯು ನಾಮದೇವನನ್ನು ಸಂಸಾರಪಾಶದಿಂದ ಬಿಗಿಯಲು ಹೋಗಿದ್ದಳು. ಅಂದಬಳಿಕ ನಮ್ಮಂಥ ಪಾಮರರ ಪಾಡೇನು? ಇಂಥ ದುರ್ಧರವಾದ ಸಂಸಾರೋಪಾಧಿಯು ಕತ್ತರಿಸಲಿಕ್ಕೆ ಸತ್ಸಮಾಗಮವು ಮಾತ್ರ ಸಾಣೆ ಹಿಡಿದ ಕತ್ತಿಯಾಗಿರುವದೆಂಬದನ್ನು ಮರೆಯಲಾಗದು. ಈಶ್ವರನು ಪ್ರತ್ಯಕ್ಷವಾದರೂ ಸಂಸಾರ ಬಾಧೆಯು ತಪ್ಪದೆಂಬದು ಈ ಚರಿತ್ರದಿಂದ ಗೊತ್ತಾಗಿದೆ? ಆದ್ದರಿಂದಲೇ ಹರನಿಗಿಂತ ಗುರುವು ಹೆಚ್ಚಿನವನೆಂಬದು ಪ್ರಸಿದ್ಧವಾಗಿದೆ.

ಶುದ್ಧಭಾವಕ್ಕೂ ಉತ್ಕಟವಾದ ಭಕ್ತಿಗೂ ಮೆಚ್ಚಿದ ದೇವರು ಭಕ್ತರ ಇಚ್ಛೆಯಂತೆ ವರ್ತಿಸುವನೆಂಬದು ಈ ಚರಿತ್ರದಲ್ಲಿ ಒಡೆದು ಕಾಣುವ ಎರಡನೆಯ ಸಂಗತಿಯು. ನಿರಾಕಾರನೂ ನಿರ್ಗುಣನೂ ಆದ ಪರಮಾತ್ಮನು ನಾಮದೇವನ ಸಲುವಾಗಿ ಸಾಕಾರನೂ ಸಗುಣನೂ ಆದನು. ನಾಮದೇವನಂಥ ನಿರಿಚ್ಛನಾದ ಭಕ್ತನಿಗೆ ತನ್ನ ಸನ್ನಿಧಿಯ ವಾಸದ ಸುಖವನ್ನು ಕೊಟ್ಟನು. ರಾಜಾಯಿ-ಗೋಣಾಯಿಯರಂಥ ವಿಷಯೇಚ್ಛೆಯುಳ್ಳ ಮಂದಾಧಿಕಾರಿಗಳಾದ ಭಕ್ತರ ಇಚ್ಛೆಯನ್ನು, ಕೇಶವಶೆಟ್ಟಿಯ ರೂಪದಿಂದ ಧನವನ್ನು ಒದಗಿಸಿಕೊಟ್ಟು ಪೂರ್ಣಮಾಡಿದನು. ಮಗನನ್ನು ಕುರಿತು ಹಂಬಲಿಸುತ್ತಿದ್ದ ಗೋಣಾಯಿಗೆ ನಾಮದೇವನನ್ನು ಒಪ್ಪಿಸಿದನು; ಕುಂಬಾರನ ಬಡಿಮಣೆಯ ಪೆಟ್ಟಿನಿಂದ ವ್ಯಸನಪಡುತ್ತಿದ್ದ ನಾಮದೇವನನ್ನು ಸದ್ಗುರುವಿನ ಬಳಿಗೆ ಅಟ್ಟಿದನು. ಇದನ್ನೆಲ್ಲ ವಿಚಾರಿಸಿದರೆ, ದೇವರು ಬಯಕೆಯನ್ನಷ್ಟು ಪೂರ್ಣಮಾಡುವನಲ್ಲದೆ, ತನ್ನಂತೆ ಭಕ್ತರನ್ನು ಮಾಡಿಕೊಳ್ಳುವ ಸಾಮರ್ಥ್ಯವು ಆತನಲ್ಲಿ ಇಲ್ಲೆಂಬದು ಗೊತ್ತಾಗುತ್ತದೆ. ಈ ಸಾಮರ್ಥ್ಯವು ಸದ್ಗುರುವಿನಲ್ಲಿ ಮಾತ್ರ ಇರುತ್ತದೆ; ಆದ್ದರಿಂದ ನಾವು ಸದ್ಗುರುವಿಗೆ ಶರಣು ಹೋಗತಕ್ಕದ್ದು. ಆ ಸದ್ಗುರುವು ಪ್ರಾಪ್ತನಾಗಲಿಕ್ಕೆ ಈಶ್ವರಕೃಪೆಯು ಬೇಕಾಗುವದು.

ಶಿಷ್ಟಪರಿಪಾಲನ-ದುಷ್ಟಶಾಸನಗಳ ನೆಪದಿಂದ ಈಶ್ವರನಲ್ಲಿ ವೈಷಮ್ಯಭಾವವಿರುವಂತೆ ತೋರುತ್ತದೆ. ಇದೇ ಕಾರಣದಿಂದ ನಾವು ಆತನಿಗೆ ಭಕ್ತಾಭಿಮಾನಿಯೆಂಬ ಬಿರುದು ಕೊಡುತ್ತೇವೆ. ಆದರೆ ಸತ್ಪುರುಷರ ಮಾತು ಹೀಗಲ್ಲ. "ಇವರು ನಮ್ಮವರು, ಇವರು ಹೊರಗಿನವರು" ಎಂಬ ಭೇದಬುದ್ಧಿಯೇ ಅವರಲ್ಲಿ ಇರುವದಿಲ್ಲ. ಆದ್ದರಿಂದ ಅವರು ನಿರಭಿಮಾನಿಗಳಾಗಿರುವರು. ಈ ನಿರಭಿಮಾನಸ್ಥಿತಿಯೇ ಮೋಕ್ಷಕ್ಕೆ ಸಾಧನವು. ಇಂಥ ಸದ್ಗುರುವನ್ನು ಸಂಪಾದಿಸುವದಕ್ಕಾಗಿ ಪ್ರತ್ಯಕ್ಷ ವಿಠ್ಠಲನು ನಾಮದೇವನನ್ನು ಸದ್ಗುರುವಿನ ಬಳಿಗೆ ಅಟ್ಟಿದನು. ಈ ಮೂರನೆಯ ಮಾತನ್ನು ನಾವು ಮರೆಯದೆ ಸದ್ಗುರುವನ್ನು ಸಂಪಾದಿಸಿಕೊಳ್ಳತಕ್ಕದ್ದು.



# ಶ್ರೀ ಕಬೀರದಾಸ



ಈ ಲೋಕದಲ್ಲಿ ಹುಟ್ಟಿ ಬಾಳುವ ಪ್ರತಿಯೊಬ್ಬ ಮನುಷ್ಯನು ಸುಖಪ್ರಾಪ್ತಿಗಾಗಿ ಹೆಣಗುತ್ತಿರುತ್ತಾನೆ. ಅವನು ಈ ಸುಖಾಪೇಕ್ಷೆಯಿಂದ ತನ್ನ ಆಯುಷ್ಯದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ವಿಧದ ಆಚರಣಗಳನ್ನು ಕೈಕೊಳ್ಳುವನು. ಆ ಆಯುಷ್ಯದ ಮುಖ್ಯ ಭಾಗಗಳು ನಾಲ್ಕು ಇರುವವು. ಅವಕ್ಕೆ ಆಶ್ರಮಗಳೆನ್ನುವರು. ಆ ಆಶ್ರಮಗಳಿಗೆ ಕ್ರಮವಾಗಿ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ ಎಂದು ಹೆಸರುಗಳಿರುವವು. ಅವುಗಳಲ್ಲಿ ಗೃಹಸ್ಥಾಶ್ರಮವು ಪರೋಪಕಾರಕ್ಕೆ ತಕ್ಕದ್ದಾದ್ದರಿಂದ ಎಲ್ಲ ಆಶ್ರಮಗಳಲ್ಲಿ ಶ್ರೇಷ್ಠವೆಂದು ಎಣಿಸಲ್ಪಡುವದು ಗೃಹಸ್ಥರು ಆಪ್ತರೊಡನೆ ಸಂಸಾರವನ್ನು ಮಾಡಬೇಕಾಗುವದು. ಸಂಸಾರದೊಳಗಿನ ಜನರು ಪರಸ್ಪರರು ಅನಕೂಲವಾಗಿರದಿದ್ದರೆ ದುಃಖವು ಉಂಟಾಗುವದು. ಆ ಅನುಕೂಲಸ್ಥಿತಿಯು ಪುಣ್ಯವಂತರಿಗೆ ಮಾತ್ರ ಒದಗುವದು. ಅಂಥ ಪುಣ್ಯವಂತನು ಇಹಪರಗಳನ್ನು ಕೂಡಿಯೇ ಸಾಧಿಸುವನು. ಕಬೀರ ಭಕ್ತನು ಅಂಥ ಪುಣ್ಯಶಾಲಿಗಳಲ್ಲಿ ಒಬ್ಬನಾಗಿರುವನು. ಗೃಹಸ್ಥರು ಸಾಧಿಸಿದ ಮಟ್ಟಿಗಾದರೂ ಆ ಭಗವದ್ಭಕ್ತನ ಕುಟುಂಬದ ಅನುಕರಣ ಮಾಡಲೆಂದು ಆತನ ಚರಿತ್ರವನ್ನು ಕೆಳಗೆ ಕೊಟ್ಟಿರುತ್ತದೆ.

ಹಿಂದೆ ನಾಮದೇವನ ಚರಿತ್ರದಲ್ಲಿ, ಕ್ಷೀರಸಾಗರವಾಸಿಯಾದ ಶ್ರೀ ನಾರಾಯಣನು ಉದ್ಧವನಿಗೆ ಲೋಕೋದ್ಧಾರಾರ್ಥವಾಗಿ ಅಯೋನಿಜನಾಗಿ ಅವತಾರ ತಾಳೆಂದು ಆಜ್ಞಾಪಿಸಿ, ಕಪ್ಪೆಯ ಚಿಪ್ಪಿನಲ್ಲಿ ಆತನನ್ನು ಶಿಶುರೂಪದಿಂದ ಸೇರಿಸಿ, ಭೀಮಾನದಿಯಲ್ಲಿ ಬೀಳುವಹಾಗೆ ಮಾಡಿದನೆಂದು ಹೇಳಿರುತ್ತದೆ. ಅದರಂತೆ ಭಗವಂತನು ಶುಕಾಚಾರ್ಯರನ್ನು ಕಪ್ಪೆಯ ಚಿಪ್ಪಿನಲ್ಲಿ ಶಿಶುರೂಪದಿಂದ ಇರಿಸಿ, ಭಾಗೀರಥಿಯಲ್ಲಿ ಬೀಳುವಂತೆ ಮಾಡಿದನು. ಆ ಚಿಪ್ಪು ರಾಮನಾಮವನ್ನು ಉಚ್ಚರಿಸುತ್ತ ಮಣಿಕರ್ಣಿಕೆಯ ದಂಡೆಗೆ ತೇಲುತ್ತ ಬಂತು. ಆಗ ಮುಸಲ್ಮಾನ ಜಾತಿಯ ತಮಾಲಮೋಮಿನನೆಂಬ ನೇಕಾರನು ನೂಲು ತೊಳೆಯುವದಕ್ಕಾಗಿ ಅಲ್ಲಿಗೆ ಅಕಸ್ಮಾತ್ತಾಗಿ ಬಂದನು. ಆತನು ಕೆಳಗೆ ನೋಡಲು, ಸಿಂಪು ಕಣ್ಣಿಗೆ ಬಿತ್ತು. ಆತನು ನೀರಲ್ಲಿ ಹೋಗಿ ಸಿಂಪು ಕೈಯಲ್ಲಿ ತಕ್ಕೊಂಡು ತೆರೆದು ನೋಡಿದನು. ಅದರಲ್ಲಿ ಒಂದು ಕೂಸು ಇತ್ತು. ಅದನ್ನು ನೋಡಿ ತಮಾಲಮೋ

ಮೊನನಿಗೆ ಬಹಳ ಸಂತೋಷವಾಯಿತು. ಏನೂ ಪ್ರಯತ್ನಮಾಡದೆ ನಿಧಿಯು ದೊರೆತಂತೆಯೂ, ಇರಲಿಕ್ಕೆ ಗುಡಿಸಲು ಹುಡುಕುವವನಿಗೆ ಬಂಗಾರದ ಮನೆಯು ಸಿಕ್ಕಂತೆಯೂ, ನೂಲು ತೊಳೆಯಹೋದ ತಮಾಲಮೋಮೊನನಿಗೆ ವಿಶ್ವೋದ್ಧಾರಕನಾದ ಬಾಲಕನು ಸಿಕ್ಕನು.

ತಮಾಲಮೋಮೊನನು ಆ ಕೂಸನ್ನು ದೋತರದ ಸೆರಗಿನಲ್ಲಿ ತಕ್ಕೊಂಡು ಮನೆಗೆ ಹೋಗಿ ಸಂತೋಷವು ಹಿಡಿಸಲಾರದೆ ಹೆಂಡತಿಯನ್ನು ಕುರಿತು— ಪ್ರಿಯೇ, ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಸುಂದರನಾದ ಈ ಬಾಲಕನು ಗಂಗೆಯಲ್ಲಿ ದೊರೆತನು. ಈತನನ್ನು ನೀನು ರಕ್ಷಿಸಬೇಕು, ಎಂದು ಹೇಳಿದನು. ಕೂಡಲೆ ಆಕೆಯ ಮೊಲೆಯಲ್ಲಿ ಹಾಲು ತುಂಬಿದವು. ಆ ಯವನ ಪತ್ನಿಯು ಶಿಶುವನ್ನು ಬಹು ಪ್ರೀತಿಯಿಂದ ಜೋಕೆಮಾಡಹತ್ತಿದಳು. ಮುಸಲ್ಮಾನವಂಶದಲ್ಲಿ ಹುಟ್ಟಿದ ಈ ಮಹಾ ವೈಷ್ಣವನಿಗೆ ಕಬೀರನೆಂದು ಹೆಸರಿಟ್ಟನು. ಕೂಸಿನ ಮೇಲೆ ತಾಯಿ-ತಂದೆಗಳು ಬಹಳ ಪ್ರೇಮಮಾಡುತ್ತಿದ್ದರು. ಬಾಲಕನು ರಾಮನಾಮಸ್ಮರಣ ಮಾಡುವದನ್ನು ನೋಡಿ ಜನರು ಬಹಳ ಆಶ್ಚರ್ಯಪಡುವರು. ತಮಾಲಮೋಮೊನನು ಬಹು ಪುಣ್ಯಶಾಲಿಯಾದ್ದರಿಂದ ವಿಷ್ಣುಭಕ್ತನು ಅವನ ಹೊಟ್ಟೆಯಲ್ಲಿ ಹುಟ್ಟಿದನೆಂದು ಜನರು ನೆನಿಸುವರು. ದೈವಾನುಕೂಲವಿದ್ದವನಿಗೆ ವಿದ್ಯಾಬಲವು ಬೇಡೆಂತಲೂ, ನೀಚಯೋನಿಯಲ್ಲಿ ಹುಟ್ಟಿದ ದುಷ್ಟನನ್ನು ಪ್ರಾರಬ್ಧ ಬಲದಿಂದ ಎಲ್ಲರೂ ನಮಿಸುವರೆಂತಲೂ ಭಾವಿಸಿ, ಈ ಮುಸಲ್ಮಾನನ ಭಾಗ್ಯವು ಹೆಚ್ಚಿನದಾದ್ದರಿಂದ ವಿಷ್ಣುಭಕ್ತನು ಇವನ ಹೊಟ್ಟೆಯಲ್ಲಿ ಹುಟ್ಟಿಬಂದನೆಂದು ಕ್ಷೇತ್ರವಾಸಿಗಳಾದ ಜನರು ತಮ್ಮ ತಮ್ಮೊಳಗೆ ಮಾತಾಡುತ್ತಿದ್ದರು.

ಈ ಮೇರೆಗೆ ಜನ್ಮಾಂತರದ ಪುಣ್ಯದಿಂದ ಕಬೀರನು ತಮಾಲಮೋಮಿಾನನ ಹೊಟ್ಟೆಯಲ್ಲಿ ಹುಟ್ಟಿ ದಿನದಿನಕ್ಕೆ ಬೆಳೆಯಹತ್ತಿದನು. ತಾಯಿ-ತಂದೆಗಳು ಆತನ ಲಗ್ನ ಮಾಡಿ, ಪ್ರಪಂಚವ್ಯವಹಾರವನ್ನು ಕಲಿಸತೊಡಗಿದರು. ಆದರೆ, ಪ್ರಪಂಚವೃತ್ತಿಯು ಕಬೀರನ ಮನಸ್ಸಿನಲ್ಲಿ ಬಿಂಬಿಸಲಿಲ್ಲ. ಇದು ನನ್ನದು, ಇದು ಎರಡನೆಯವರದು, ಎಂಬ ಭೇದಬುದ್ಧಿಯು ಆತನಲ್ಲಿ ಹುಟ್ಟಲಿಲ್ಲ. ಹೆಚ್ಚು-ಕಡಿಮೆ ಎಂಬದು ಆತನಿಗೆ ಗೊತ್ತಿದ್ದಿಲ್ಲ. ಬಡವನಿಂದ ಅರಸನನ್ನು ಹಿಡುಕೊಂಡು, ಪರಬ್ರಹ್ಮದ ವರೆಗೆ ಆತನು ಎಲ್ಲವುಗಳಲ್ಲಿ ಸಮಭಾವವನ್ನು ತಾಳಿದ್ದನು. ಮುಂದೆ ದ್ರವ್ಯದ ರಾಶಿಯನ್ನು ಹಾಕಿದರೂ ತಕ್ಕೊಳ್ಳಬೇಕೆಂಬ ಇಚ್ಛೆಯು ಆತನಲ್ಲಿ ಹುಟ್ಟುತ್ತಿದ್ದಿಲ್ಲ. ತನ್ನ ದ್ರವ್ಯವನ್ನು ಕಳ್ಳರು ಒಯ್ಯುವಾಗ ಕಾಯ್ದು

ಕೊಳ್ಳಲು ಆತನು ಹೆಣಗುತ್ತಿದ್ದಿಲ್ಲ. ಹೀಗೆ ಕಬೀರನು ಯಾತರ ಪರಿವೆಯೂ ಇಲ್ಲದೆ ಈಶ್ವರಭಜನೆಯನ್ನು ಮಾಡುತ್ತಿರಲು, ಸಂಸಾರದಲ್ಲಿ ತೊಂದರೆಗಳು ಬರ ತೊಡಗಿದವು. ಇಲ್ಲದ ಕೊರತೆಗಳು ಉಂಟಾದವು. ಕಬೀರನ ಈ ನಡತೆಯ ನ್ನು ನೋಡಿ, ದುರಾಚಾರಿಗಳೂ ದುರ್ಜನರೂ ನಗತೊಡಗಿದರು. ವೇಶ್ಯೆಗೂ ಪತಿವ್ರತೆಗೂ, ಕೃಪಣನಿಗೂ, ಉದಾರನಿಗೂ, ನಿಂದಕನಿಗೂ ಬುದ್ಧಿವಂತನಿಗೂ ಕೂಡಿ ನಡೆಯದಂತೆ, ವಿಷಯಾಸಕ್ತರಿಗೂ ಕಬೀರನಿಗೂ ಕೂಡಿ ನಡೆಯದ ಹಾಗಾಯಿತು.

ಕಬೀರನು ಯಾವಾಗಲೂ ರಾಮನನ್ನು ಹೃದಯದಲ್ಲಿ ಧರಿಸಿ, ತನ್ನ ದೇಹದ ಪರಿವೆಯಿಲ್ಲದೆ ಇರುತ್ತಿರಲು, ಆತನ ತಾಯಿಯು—ಅಪ್ಪಾ ಕಬೀರಾ, ಹೀಗೆ ಕಣ್ಣು ಮುಚ್ಚಿಕೊಂಡು ಕುಳಿತರೆ, ಸಂಸಾರವು ಹ್ಯಾಗೆ ಸಾಗಬೇಕಪ್ಪಾ? ಜನರು ನಮ್ಮನ್ನು ನೋಡಿ ನಗುವರು. ಸಂಸಾರಿಕರು ಏನಾದರೂ ಉದ್ಯೋಗ ಮಾಡ ತಕ್ಕದ್ದು, ಎಂದು ಹೇಳಿ, ಆತನನ್ನು ಮಗ್ಗದಮುಂದೆ ಕೂಡ್ರಿಸಿ ಶಾಲನ್ನು ನೆಯ್ಯ ಹೇಳಿದಳು. ಆದರೂ ಕಬೀರನು ದೇಹದ ಪರಿವೆಯಿಲ್ಲದೆ ಕಣ್ಣು ಮುಚ್ಚಿಕೊಂಡು ರಾಮಧ್ಯಾನ ಮಾಡತೊಡಗಿದನು. ಆಗ ಆತನ ತಾಯಿಯು ಅಲ್ಲಿಗೆ ಬಂದು ಮಗನನ್ನು ಎಚ್ಚರಗೊಳಿಸಿ—ಕಬೀರಾ, ನಿನಗೆ ಏನಾಯಿತೆಂಬದು ನನಗೆ ತಿಳಿ ಯಲೊಲ್ಲದು. ಹೀಗೆ ಯಾಕೆ ಸುಮ್ಮನೆ ಕೂಡ್ರುವಿ? ಎನ್ನಲು, ಕಬೀರನು ತಾಯಿ ಬಡಿದಾಳೆಂಬ ಭಯದಿಂದ ಆಕೆಯ ಎದುರಿಗೆ ಒಂದು ಮೊಳ ಶಾಲನ್ನು ನೆಯ್ದನು. ತಾಯಿಯು ಅತ್ತ ಹೋಗಲು ಇತ್ತ ಕಬೀರನ ಹೃದಯದಲ್ಲಿ ರಾಮ ಮೂರ್ತಿಯು ಸ್ಥಿರವಾಗಿ, ಆತನು ಮತ್ತೆ ಕಣ್ಣುಮುಚ್ಚಿಕೊಂಡು ರಾಮ ಧ್ಯಾನ ಮಾಡುತ್ತ ಕುಳಿತು ಬಿಟ್ಟನು. ಇದನ್ನು ನೋಡಿ ಅಯೋಧ್ಯಾಪತಿ ಯಾದ ಶ್ರೀ ರಾಮಚಂದ್ರನು—ಈ ಕಬೀರನು ನನ್ನ ಧ್ಯಾನ ಮಾಡುತ್ತ ಕುಳಿತು ಬಿಟ್ಟನು. ಇದಕ್ಕಾಗಿ ಈತನ ತಾಯಿಯು ಇವನಿಗೆ ಬಡಿದಾಳು, ಎಂದು ಯೋಚಿಸಿ, ತಾನು ಶಾಲನ್ನು ನೆಯ್ಯುತ್ತ ಕುಳಿತುಕೊಂಡನು. ಕ್ಷೀರಸಾಗರ ವಿಲಾಸಿಯೂ, ಬ್ರಹ್ಮಾಂಡನಾಯಕನೂ, ವೈಕುಂಠವಾಸಿಯೂ ಆದ ಶ್ರೀ ರಾಮ ಚಂದ್ರನು ಭಕ್ತನ ಸಲುವಾಗಿ ಶಾಲನ್ನು ನೆಯ್ಯತೊಡಗಿದನು. ಯೋಗಿಗಳು ವಜ್ರಾಸನದಲ್ಲಿ ಕುಳಿತು ಧ್ಯಾನಮಾಡಿದರೂ ಪ್ರಸನ್ನನಾಗದ ಶ್ರೀಹರಿಯು ಕಬೀ ರನ ಭಕ್ತಿಗೆ ವಶನಾಗಿ ಶಾಲನ್ನು ನೆಯ್ಯುತ್ತ ಕುಳಿತುಕೊಂಡನು. ಅಷ್ಟರಲ್ಲಿ ಕಬೀರನು ಎಚ್ಚತ್ತು ಮನಸ್ಸಿನಲ್ಲಿ ವಿಚಾರ ಮಾಡಿ, ಶಾಲು ನೆಯ್ಯತೊಡಗುವನು.

ಆಗ ರಾಮಚಂದ್ರನು ಕೌತುಕದಿಂದ ಒತ್ತಟ್ಟಿಗೆ ನೋಡುತ್ತ ನಿಂತುಕೊಳ್ಳುವನು. ಹೀಗೆ ಎಚ್ಚತ್ತಾಗ ಕಬೀರನೂ, ಧ್ಯಾನಸ್ಥನಾಗಿ ಕುಳಿತಾಗ ಶ್ರೀ ರಾಮಚಂದ್ರನೂ ನೆಯ್ಯುತ್ತ ಶಾಲನ್ನು ಮುಗಿಸಿದರು.

ಹೀಗೆ ದೇವನೂ, ಭಕ್ತನೂ ಕೂಡಿ ಮುಗಿಸಿದ ಶಾಲು ಗಂಗಾ ಜಲದಲ್ಲಿ ಸರಸ್ವತಿಯ ಜಲವು ಕೂಡಿದಂತೆ ಅಭೇದವಾಗಿತ್ತು. ಕಬೀರನು ಅದನ್ನು ಗಳಿಗೆ ಮಾಡಿ ತಾಯಿಯ ಕೈಯಲ್ಲಿ ಕೊಟ್ಟನು. ಆಗ ಆಕೆಯು— ಕಬೀರಾ, ಪೇಟೆಗೆ ಹೋಗಿ ಇದನ್ನು ಮಾರಿ, ಹಣವನ್ನು ತೆಗೆದುಕೊಂಡುಬಾ, ಎಂದು ಹೇಳಲು, ಅದಕ್ಕೆ ಕಬೀರನು ಯಾಕಾಗಲೊಲ್ಲದೆಂದು ಹೇಳಿ ಶಾಲನ್ನು ಪೇಟೆಗೆ ಒಯ್ದು, ಇಟ್ಟುಕೊಂಡು ಕುಳಿತನು. ಗಿರಾಕಿಗಳ ಕಡೆಗೆ ಆತನು ಎಷ್ಟು ಮಾತ್ರವೂ ಲಕ್ಷ ಕೊಡಲಿಲ್ಲ. ಹೃದಯದಲ್ಲಿ ಶ್ರೀ ರಾಮಮೂರ್ತಿಯನ್ನು ಚಿಂತಿಸುತ್ತ, ಮುಖದಲ್ಲಿ ರಾಮನಾಮಗಾನಮಾಡುತ್ತ ಕುಳಿತುಬಿಟ್ಟನು. ತಾನು ಶಾಲನ್ನು ತಂದಿದ್ದೇನೆಂಬದರ ಅರಿವು ಆತನಿಗೆ ಉಳಿಯಲಿಲ್ಲ. ವ್ಯಾಪಾರಸ್ಥರು, ಕಬೀರನು ಕುಳಿತಲ್ಲಿಗೆ ಬರುತ್ತಿದ್ದರೂ ಆತನ ಶಾಲನ್ನು ಯಾರೂ ಕೇಳಲಿಲ್ಲ. ದೇವಾಧಿದೇವನಾದ ವೈಕುಂಠನಾಥನು ಕೈಮುಟ್ಟಿ ನೆಯ್ದ ಶಾಲು, ಕೊಳ್ಳಬೇಕೆನ್ನುವವರಿಗೆ ದೂರದಿಂದ ನೋಡುವಾಗ ಅಮೂಲ್ಯವಾಗಿ ತೋರಹತ್ತಿತು. ಐದು ರೂಪಾಯಿಗಳಿಗೆ ಕೊಳ್ಳಬೇಕೆನ್ನುವವರಿಗೆ ಹತ್ತುರೂಪಾಯಿಗಳ ಮಾಲಾಗಿಯೂ, ಹತ್ತುರೂಪಾಯಿಗಳಿಗೆ ಕೊಳ್ಳಬೇಕೆನ್ನುವವರಿಗೆ ಇಪ್ಪತ್ತು ರೂಪಾಯಿಗಳ ಮಾಲಾಗಿಯೂ, ಐವತ್ತಕ್ಕೆ ಕೊಳ್ಳಬೇಕೆನ್ನುವವರಿಗೆ ನೂರರ ಮಾಲಾಗಿಯೂ, ನೂರಕ್ಕೆ ಕೊಳ್ಳಬೇಕೆನ್ನುವವರಿಗೆ ಸಾವಿರದ ಮಾಲಾಗಿಯೂ ಕಾಣಹತ್ತಿತು. ಕೊಳ್ಳುವವರು ಈ ಶಾಲು ಅಮೂಲ್ಯವಾದದ್ದೆಂದು ನುಡಿಯುತ್ತ, ಒಬ್ಬರ ಮುಖವನ್ನೊಬ್ಬರು ನೋಡುತ್ತ, ಸುಮ್ಮನೆ ದೂರದಿಂದ ನೋಡುತ್ತ ಹೋಗುತ್ತಿದ್ದರು. ಕೆಲವರು ಶಾಲಿನ ಬೆಲೆಯನ್ನು ಕೇಳಬೇಕೆಂದು ಹವಣಿಸಿದರೂ, ತಮ್ಮಲ್ಲಿ ದ್ರವ್ಯವಿಲ್ಲದ್ದನ್ನು ನೋಡಿ ಕಬೀರನನ್ನು ಮಾತಾಡಿಸದೆ ತಮ್ಮತಮ್ಮೊಳಗೆ— ಈ ಕಬೀರಭಕ್ತನು ಅಮೂಲ್ಯವಾದ ಶಾಲುನೇಯುತ್ತಾನಲ್ಲಾ! ನಾವು ದುಡ್ಡಿಲ್ಲದೆ ಸುಮ್ಮನೆ ಪೇಟೆಗೆ ಬಂದೆವು, ಎಂದು ನುಡಿಯುತ್ತ ಶಾಲು ನೋಡುತ್ತ ಮುಂದಕ್ಕೆ ಸಾಗುವರು.

ಈ ಮೇರೆಗೆ ಕಬೀರನ ವಸ್ತ್ರವು ನೋಡುವವರ ಯೋಗ್ಯತೆಯಂತೆ ಬೇರೆ ಬೇರೆ ಯೋಗ್ಯತೆಯದಾಗಿ ತೋರಹತ್ತಿತು. ಸಾಸಿವೆ, ಉರಳೆಗಡ್ಡಿ, ಕಬ್ಬು ಇವು

ಗಳ ಬೀಜವನ್ನು ಬಿತ್ತಿ, ನೀರು ಹಾಯಿಸಿದರೆ, ಆಯಾ ಪದಾರ್ಥಗಳ ಗುಣದಂತೆ ನೀರಿನ ಗುಣವಾಗುವ ಚಂದದಿಂದ ನೋಡುವವರ ಅಧಿಕಾರದಂತೆ, ಕಬೀರನ ಶಾಲು ಹೆಚ್ಚು ಕಡಿಮೆ ಯೋಗ್ಯತೆಯದಾಗಿ ಕಾಣುತ್ತಿತ್ತು. ಒಂದೇ ಬಂಗಾರವು ಅಲಂಕಾರ ಭೇದದಿಂದ ನೋಡುವವರ ಕಣ್ಣಿಗೆ ಬೇರೆ ಬೇರೆ ವಿಧವಾಗಿ ತೋರು ವಂತೆಯೂ, ಉರವಲು ಹಾಕಿದಷ್ಟು ಅಗ್ನಿಯು ಪ್ರಜ್ವಲಿಸುವಂತೆಯೂ ನೋಡು ವವರಿಗೆ ಕಬೀರನ ಶಾಲು ಬೇರೆ ಬೇರೆ ವಿಧವಾಗಿ ತೋರಿತು. ಒಟ್ಟಿಗೆ ಜನರು ಈ ಶಾಲು ಕೊಳ್ಳುವ ಯೋಗ್ಯತೆಯು ತಮ್ಮದಲ್ಲೆಂತಲೂ ತಮ್ಮ ತಮ್ಮೊಳಗೆ ಮಾತಾಡಿಕೊಳ್ಳುತ್ತ ಮುಂದಕ್ಕೆ ಸಾಗುತ್ತಿದ್ದರು.

ಇತ್ತ ಕಬೀರಭಕ್ತನು ಪ್ರೀತಿಯಿಂದ ರಾಮನಾಮ ಗಾಯನ ಮಾಡುತ್ತ ಕುಳಿತಿದ್ದನು. ಹೊತ್ತು ಮುಣುಗಿತು. ಪೇಟೆಯಲ್ಲಿ ಗದ್ದಲವು ಕಡಿಮೆಯಾಗ ಹತ್ತಿತು. ಅಗ ಕಬೀರನು ಕಣ್ಣುತೆರೆದು ಸುತ್ತುಮುತ್ತು ನೋಡಿ—ಓಹೋ! ಹೊತ್ತು ಮುಣುಗಿತು. ಜನರೆಲ್ಲ ಮನೆಗೆ ಹೋದರು. ಶಾಲಿಗೆ ಒಂದಾದರೂ ಗಿರಾಕಿ ಒರಲಿಲ್ಲವಲ್ಲ! ಇನ್ನು ಶಾಲು ಮಾರದೆ ಹಾಗೇ ಮನೆಗೆ ಹೋದರೆ, ತಾಯಿಯು ಬಡಿಯುವಳು, ಎಂದು ನುಡಿದು ಆ ವಿಷ್ಣುಭಕ್ತನು ಸುಮ್ಮನೆ ಕುಳಿತುಕೊಂಡನು. ಅಷ್ಟರಲ್ಲಿ ಒಂದು ಹಾಳು ಮನೆಯು ಅಕಸ್ಮಾತ್ತಾಗಿ ಆತನ ಕಣ್ಣಿಗೆ ಬಿತ್ತು. ಕೂಡಲೆ ಆತನು ಲಗುಬಗೆಯಿಂದ ಎದ್ದು ಹೋಗಿ ಆ ಏಕಾಂತ ಸ್ಥಳದಲ್ಲಿ ಕುಳಿತುಕೊಂಡು, ಪ್ರೀತಿಯಿಂದ ರಾಮಭಜನೆಯನ್ನು ಮಾಡತೊಡಗಿ ದನು. ಅತ್ತೆಯು ಕಿಟಿಕಿಟಿ ಮಾಡುವಳೆಂದು ಸೊಸೆಯು ಅಡಗಿಕೊಂಡು ಕೂಡ್ರುವಂತೆ, ತಾಯಿಯ ಭಯದಿಂದ ಕಬೀರನು ಏಕಾಂತದಲ್ಲಿ ಅಡಗಿಕೊಂಡು ಕುಳಿತನು. ತಾಯಿಯು ಒದ್ದದ್ದರಿಂದ ಧ್ರುವನು ಸಿಟ್ಟಾಗಿ ಅರಣ್ಯಕ್ಕೆ ಹೋದಂತೆ ಕಬೀರಭಕ್ತನು ಉದಾಸೀನನಾಗಿ ಹಾಳುಮನೆಯಲ್ಲಿ ಕುಳಿತುಕೊಂಡನು. ಮನು ಷ್ಯನು ಸರ್ವ ಕರ್ಮಗಳನ್ನು ತ್ಯಜಿಸಿ ಪರಮಹಂಸ ಸಂನ್ಯಾಸಿಯಾಗುವಂತೆ, ಕಬೀರನು ಸಂಸಾರದಲ್ಲಿ ಉದಾಸೀನನಾಗಿ ಹಾಳುಮನೆಯಲ್ಲಿ ಅಡಗಿಕೊಂಡು ಕುಳಿತನು.

ಈ ಮೇರೆಗೆ ವಿಷ್ಣುಭಕ್ತನು ಹಾಳುಮನೆಯನ್ನು ಪ್ರವೇಶಿಸಿ ಕುಳಿತು ಕೊಂಡಿರಲು, ಆತನ ನಿಷ್ಠೆಯನ್ನು ನೋಡಿ ಜಗನ್ನಿವಾಸನಾದ ಶ್ರೀರಾಮಚಂದ್ರ- ನು ಸ್ವತ್ವಪರೀಕ್ಷೆಗಾಗಿ ವೃದ್ಧಬ್ರಾಹ್ಮಣನ ರೂಪದಿಂದ ಕಬೀರನ ಒಳಿಗೆ ಬಂದನು. ಕಬೀರನ ಔದಾರ್ಯವನ್ನು ನೋಡುವದಕ್ಕಾಗಿ ಬ್ರಾಹ್ಮಣನು

ಹರಕ ಬಟ್ಟೆಯನ್ನು ಉಟ್ಟಿದ್ದನು. ಚಳಿಗಾಲದ ಚಳಿಗೆ ನಡುಗುವವರಂತೆ ನಡು ಗುತ್ತಿದ್ದನು. ಛಲಿಸುವದಕ್ಕಾಗಿ ವಿಶ್ವಾಮಿತ್ರನು ಹರಿಶ್ಚಂದ್ರರಾಜನ ಬಳಿಗೆ ಬಂದಂ ತೆಯೂ, ಸತ್ವಪರೀಕ್ಷೆಗಾಗಿ ಪರಮೇಶ್ವರನು ಅತಿಥಿಯಾಗಿ ಶ್ರೀಯಾಳನ ಬಳಿಗೆ ಬಂದಂತೆಯೂ ಬ್ರಾಹ್ಮಣರೂಪಿಯಾದ ಜಗಜ್ಜೀವನನು ಕಬೀರನು ಕುಳಿತಲ್ಲಿಗೆ ಬಂದನು. ಆ ವೃದ್ಧಬ್ರಾಹ್ಮಣನು ಕಬೀರನನ್ನು ಕುರಿತು—ಮಹಾರಾಯಾ, ನಾನು ಮುದುಕನು, ಹೊದ್ದುಕೊಳ್ಳಲಿಕ್ಕೆ ಬಟ್ಟೆಯಿಲ್ಲ, ಚಳಿಯಿಂದ ನಡುಗು ತ್ತೀನೆ, ನೀನು ಉದಾರನಾದ ವಿಷ್ಣುಭಕ್ತನಿರುತ್ತೀ, ಚಳಿಯು ಬಹಳ ಬಿದ್ದಿರು ತ್ತದೆ, ಹೊದ್ದುಕೊಳ್ಳಲಿಕ್ಕೆ ಏನಾದರೂ ಇದ್ದರೆ ಬೇಗನೆ ಕೊಡಬಾರದೇ? ಎಂದು ಕೇಳಿದನು. ಅದನ್ನು ಕೇಳಿ ಕಬೀರನು ಮನಸ್ಸಿನಲ್ಲಿ—ಈಗ ನಾನು ಬ್ರಾಹ್ಮಣನಿಗೆ ವಸ್ತ್ರವಿಲ್ಲವೆಂದು ಹೇಳಿದರೆ, ಸತ್ವಹಾನಿಯಾಗುವದು, ಎಂದು ವಿಚಾರಮಾಡಿ ಅರ್ಧ ಶಾಲನ್ನು ಹರಿದು ಬ್ರಾಹ್ಮಣನಿಗೆ ಕೊಟ್ಟು ಪ್ರೀತಿಯಿಂದ ರಾಮಭಜನೆಯನ್ನು ಮಾಡತೊಡಗಿದನು.

ಇತ್ತ ಚಕ್ರಪಾಣಿಯು ವಸ್ತ್ರವನ್ನು ಹೊದ್ದುಕೊಂಡು ಹೊರಗೆ ಬಂದು ಮನಸ್ಸಿನಲ್ಲಿ—ಇನ್ನೊಮ್ಮೆ ಹೋಗಿ ಕಬೀರನ ಸತ್ವವನ್ನು ಪರೀಕ್ಷಿಸಬೇಕೆಂದು ಯೋಚಿಸಿ, ಫಕೀರನ ವೇಷದಿಂದ ಕಬೀರನ ಬಳಿಗೆ ಹೋದನು. ಆ ಫಕೀರನ ತಲೆಯಲ್ಲಿ ಜಟಾಭಾರವು ಒಪ್ಪುತ್ತಿತ್ತು. ಆತನು ಕಾಲಲ್ಲಿ ಶಿಲೆಯ ಮಣಿಗಳನ್ನು ಹಾಕಿ, ಕೈಯಲ್ಲಿ ಜಪಮಾಲೆಯನ್ನು ಧರಿಸಿದ್ದನು. ಆತನ ವಿಶಾಲವಾದ ಕಣ್ಣು ಗಳು ಕೆಂಪಾಗಿದ್ದವು. ಕಣ್ಣಿಗೆ ಮಲಿನವಾಗಿ ತೋರುವ ಬಂಗಾರವನ್ನು ಪರೀ ಕ್ಷಿಸುವದಕ್ಕಾಗಿ ಚಿನಿವಾಲನು ಒರೆಗಲ್ಲನ್ನು ತಕ್ಕೊಳ್ಳುವಂತೆ, ಕಬೀರನ ಮನ ಸ್ಸನ್ನು ನೋಡುವದಕ್ಕಾಗಿ ಭಗವಂತನು ಫಕೀರನ ವೇಷವನ್ನು ಧರಿಸಿದನು. ಆ ವೇಷಧಾರಿಯಾದ ಶ್ರೀ ಹರಿಯು ಕಬೀರನ ಎದುರಿಗೆ ಅಟ್ಟಹಾಸದಿಂದ ನಿಂತು ಕೊಂಡು ಒದರಿ—ಕಬೀರನೇ, ಬೇಗನೆ ನನಗೊಂದು ವಸ್ತ್ರವನ್ನು ಕೊಡು. ಖುದಾನು ನಿರಾಕಾರನೂ, ನಿರ್ಗುಣನೂ ಇರುತ್ತಾನೆ. ಆತನ ಸ್ಮರಣವು ನಿನಗಿ ರುವದಿಲ್ಲ. ಆತನನ್ನು ಬಿಟ್ಟು ರಾಮನನ್ನು ಸ್ಮರಿಸುತ್ತ ಇಲ್ಲಿ ಯಾಕೆ ಕುಳಿತಿರುವೆ? ಎಂದು ನುಡಿಯಲು, ಕಬೀರನು ಮಂಜುಲವಾದ ಮಾತಿನಿಂದ—ಅಯ್ಯಾ, ನಿರಾ ಕಾರವೂ ಸಾಕಾರವೂ ಅಭಿನ್ನವಾಗಿ ಇರುತ್ತವಲ್ಲವೇ? ತುಪ್ಪವು ಹೆತ್ತರೇನು, ಕರಗಿದರೇನು? ಅದು ಘೃತತ್ವವನ್ನು ಕಳೆದುಕೊಳ್ಳುವದಿಲ್ಲ. ಸುವರ್ಣದಿಂದ ಅಲಂಕಾರಗಳನ್ನು ಮಾಡಿದರೂ ಸುವರ್ಣತ್ವವು ನಷ್ಟವಾಗುವದಿಲ್ಲ. ಅದರಂತೆ

ಅವಿನಾಶವಾದ ಅವ್ಯಕ್ತವೇ ಸಾಕಾರವಾಯಿತು. ಭಕ್ತರ ಕಾರ್ಯಕ್ಕಾಗಿ ಜಗನ್ನಾಥನು ಸಗುಣರೂಪವನ್ನು ಧರಿಸುವನು, ಎಂದು ಹೇಳಿದನು.

ಕಬೀರನ ಈ ಮಾತುಗಳನ್ನು ಕೇಳಿ ಫಕೀರನು—ಇರಲಿ, ಯಾವದಾದರೊಂದು ವಸ್ತ್ರವಿದ್ದರೆ, ನನಗೆ ಬೇಗನೆ ಕೊಡಬಾರದೆ, ಎಂದು ಮತ್ತೆ ಕೇಳಿದನು. ಆಗ ಕಬೀರನು ಉಳಿದ ಅರ್ಧ ಶಾಲನ್ನು ಕೊಟ್ಟು ಉಪಾಧಿರಹಿತನಾಗಿ ಭಜನ ಮಾಡುತ್ತ ಕುಳಿತುಕೊಂಡನು. ಫಕೀರನು ಶಾಲುಹೊತ್ತುಕೊಂಡು ಭರದಿಂದ ತೆರಳಿದನು. ಮಳೆಗಾಲವು ಮುಗಿದ ಬಳಿಕ ಆಕಾಶವು ಸ್ವಚ್ಛವಾಗುವಂತೆಯೂ ಸಮುದ್ರದಿಂದ ಮಂದರಾಚಲವನ್ನು ತೆಗೆದ ಬಳಿಕ ಸಮುದ್ರದ ಘೋಷವು ಅಡಗುವಂತೆಯೂ, ಟಂಕವನ್ನು ತೆಗೆದ ಬಳಿಕ ಬಂಗಾರವು ಸ್ವಚ್ಛವಾಗುವಂತೆಯೂ ಗಿರಾಕಿಗಳಿಲ್ಲೆಂಬ ಚಿಂತೆಯು ಅಳಿದು ಹೋಗಲು, ಕಬೀರನು ಮನಸ್ಸಿನಲ್ಲಿ ಉಲ್ಲಾಸಪಟ್ಟನು. ಈ ಮೇರೆಗೆ ಕಬೀರ ಭಕ್ತನು ಶಾಲುಕೊಟ್ಟದ್ದಕ್ಕಾಗಿ ಸಮಾಧಾನಪಟ್ಟು ರಾಮಭಜನೆ ಮಾಡುತ್ತ ಕುಳಿತುಕೊಂಡನು.

ಇತ್ತ ಶ್ರೀಪತಿಯು ಬ್ರಾಹ್ಮಣವೇಷದಿಂದ ಕಬೀರನ ಶಾಲಿನ ಅರ್ಧಭಾಗವನ್ನೂ, ಫಕ್ಕೀರನ ವೇಷದಿಂದ ಉಳಿದ ಅರ್ಧಭಾಗವನ್ನೂ ಹರಣಮಾಡಿದನಂತರ ಮತ್ತೆ ಬ್ರಾಹ್ಮಣನ ವೇಷವನ್ನು ತಾಳಿ ಕಬೀರನ ತಾಯಿಯ ಬಳಿಗೆ ಹೋದನು. ಆತನು ಕಬೀರನ ತಾಯಿಯನ್ನು ಕರೆದು—ಅವ್ವಾ, ನಿನ್ನ ಕಬೀರನ ಆಟವನ್ನು ಏನು ಹೇಳಲಿ! ಈ ದಿನ ಆತನು ಪೇಟೆಯಲ್ಲಿ ಶಾಲನ್ನು ಇಟ್ಟುಕೊಂಡು ಕುಳಿತಿದ್ದನು. ಗಿರಾಕಿಗಳು ಎಷ್ಟು ಬಂದರೂ ಅವರ ಸಂಗಡ ಮಾತನ್ನೇ ಆಡಲಿಲ್ಲ. ಸುಮ್ಮನೆ ಕುಳಿತಿದ್ದನು. ಲೆಕ್ಕವಿಲ್ಲದಷ್ಟು ಜನರು ಶಾಲು ಕೇಳಲಿಕ್ಕೆ ಬಂದರೂ ಅವರಿಗೆ ಉತ್ತರವನ್ನು ಕೊಡದೆ, ಮನಸ್ಸಿನಲ್ಲಿ ರಾಮಮೂರ್ತಿಯನ್ನು ಇರಿಸಿ, ಧ್ಯಾನಮಾಡುತ್ತ ಕುಳಿತುಬಿಟ್ಟನು. ಹೊತ್ತು ಮುಣುಗಿ ಪೇಟೆಯಲ್ಲಿ ಗದ್ದಲವು ಕಡಿಮೆಯಾದ ಕೂಡಲೆ, ನಿನ್ನ ಮಗನು ಒಬ್ಬ ಬ್ರಾಹ್ಮಣನನ್ನು ಕರೆದು ಆತನಿಗೆ ಅರ್ಧಶಾಲನ್ನೂ. ಒಬ್ಬ ಫಕ್ಕೀರನನ್ನು ಕರೆದು ಆತನಿಗೆ ಉಳಿದ ಅರ್ಧಶಾಲನ್ನೂ ಕೊಟ್ಟು, ಒಂದು ಹಾಳು ಮನೆಯಲ್ಲಿ ಕುಳಿತು ರಾಮಭಜನೆಯನ್ನು ಮಾಡುತ್ತಿರುವನು. ತಾಯೀ. ಕಬೀರನ ಈ ಹುಚ್ಚುತನವನ್ನು ನೋಡಿ ನಿನಗೆ ಹೇಳಲಿಕ್ಕೆ ಬಂದಿದ್ದೇನೆ. ನಿಮ್ಮ ಕಲ್ಯಾಣವಾಗಬೇಕೆಂದು ನನ್ನ ಮನಸ್ಸಿನಲ್ಲಿ ಪೂರ್ಣವಿರುತ್ತದೆ. ಆದರೆ ತಾಯೀ, ಏನು ಮಾಡಬೇಕು? ಕಬೀರನು ಸಂಸಾರದ ಕಡೆಗೆ ಲಕ್ಷ್ಯವನ್ನೇ ಪೂರಯಿಸುವದಿಲ್ಲ! ಎಂದು ಹೇಳಿದನು.

ಭಗವಂತನ ಈ ಕಪಟದ ಮಾತುಗಳನ್ನು ತಿಳಿಯದೆ, ಆ ಶುದ್ಧಭಾವದ ಮುದುಕೆಯು ಸಿಟ್ಟಿನಿಂದ—ಹೀಗೋ! ಶಾಲನ್ನು ಮಂದಿಯ ಪಾಲುಮಾಡಿದನೇ? ಈಗ ಮನೆಗೆ ಬರಲಿ, ಒಳಿತಾಗಿ ತಳಿಸುವೆನು, ಅನ್ನಲು ಆ ವೇಷಧಾರಿಯಾದ ಬ್ರಾಹ್ಮಣನು—ಅವ್ವಾ, ಆತನು ಬೇಗನೆ ಮನೆಗೆ ಬರುವದಿಲ್ಲ. ಕಚ್ಚಿದ ಹೇಳು ಸಿಕ್ಕೇನೆಂಬ ಅಂಜಿಕೆಯಿಂದ ಸಂದುಸೋಡಿ ಅಡಗಿಕೊಂಡು ಕೊಡ್ರುವಂತೆ ಕಬೀರನು ಹಾಳುಮನೆಯನ್ನು ಹಿಡಿದು ಕುಳಿತುಕೊಂಡಿರುವನು. ನಡಿ, ನಿನಗೆ ಆತನನ್ನು ತೋರಿಸುತ್ತೇನೆ, ಎಂದು ಹೇಳಿ ಆ ಮುದುಕೆಯ ಕೈಯನ್ನು ಹಿಡಕೊಂಡು ಒತ್ತರದಿಂದ ಸಾಗಿದನು. ಅವರಿಬ್ಬರು ಬೇಗಬೇಗನೆ ನಡೆದು, ಕಬೀರನು ಧ್ಯಾನ ಮಾಡುತ್ತ ಕುಳಿತಿದ್ದ ಮನೆಗೆ ಬರಲು, ಬ್ರಾಹ್ಮಣನು ದೂರದಿಂದ ಕಬೀರನನ್ನು ಆತನ ತಾಯಿಗೆ ತೋರಿಸಿದನು. ಅಲ್ಲಿ ರಾಮನಾಮದ ಧ್ವನಿಯು ಉಂಟಾಗಿತ್ತು; ನಾರದರಿಂದ ಅನುಷ್ಠಾನದಲ್ಲಿ ತೊಡಗಿಸಲ್ಪಟ್ಟ ವಾಲ್ಮೀಕಿಯು ರಾಮನಾಮವನ್ನು ಉಚ್ಚರಿಸುವಂತೆಯೂ ಅಶೋಕವನದಲ್ಲಿದ್ದ ಸೀತೆಯು ವಿಯೋಗದುಃಖದಿಂದ ರಾಮನನ್ನು ಸ್ಮರಿಸುವಂತೆಯೂ, ರಾವಣನಿಂದ ಹೊಡೆಯಲ್ಪಟ್ಟ ಜಟಾಯುವು ರಾಮನಾಮವನ್ನು ಉಚ್ಚರಿಸುವಂತೆಯೂ ಕಬೀರನು ರಾಮನನ್ನು ಧ್ಯಾನಿಸುತ್ತ, ಮುಖದಲ್ಲಿ ರಾಮನಾಮ ಗಾಯನ ಮಾಡುತ್ತ ಕುಳಿತಿದ್ದನು. ಭಗವದ್ಭಕ್ತನಾದ ಕಬೀರನು ಹೀಗೆ ವಿದೇಹಸ್ಥಿತಿಯನ್ನು ಹೊಂದಿ, ಮಾನಾಪಮಾನವನ್ನೂ, ಲೌಕಿಕದ ಅಭಿಮಾನವನ್ನೂ, ಇಂದ್ರಿಯಗಳ ವಿಷಯಧ್ಯಾನವನ್ನೂ ಬಿಟ್ಟು, ಮುಖದಿಂದ ಕೀರ್ತನ ಮಾಡುತ್ತ ಕುಳಿತದ್ದನ್ನು ಆ ಶುದ್ಧಭಾವದ ಕಬೀರಮಾತೆಗೆ ಭಗವಂತನು ತೋರಿಸಿ, ತಾನು ಕೌತುಕದಿಂದ ನೋಡುತ್ತ ಹೊರಗೆ ನಿಂತುಕೊಂಡನು. ಆಗ ಕಬೀರಮಾತೆಯು ಮಗನನ್ನು ಕುರಿತು—ಕಬೀರಾ, ಶಾಲು ಎಲ್ಲಿರುವದು ತೋರಿಸು, ಇಲ್ಲದಿದ್ದರೆ ಬಡಿಸಿಕೊಂಡೀ, ಎಂದು ನುಡಿಯಲು, ರಾಮಭಜನೆಯಲ್ಲಿ ಮನಸ್ಸು ಸ್ಥಿರವಾಗಿ ಹೋಗಿದ್ದ ಕಬೀರನು ಪ್ರತ್ಯುತ್ತರವನ್ನೇ ಕೊಡಲಿಲ್ಲ. ತಾಯಿಯೂ, ಬ್ರಾಹ್ಮಣೋತ್ತಮನೂ ಬಂದ ಸುದ್ದಿಯೇ ಆತನಿಗೆ ಗೊತ್ತಿದ್ದಿಲ್ಲ. ಶ್ರೀ ರಾಮನ ನಾಮದಲ್ಲಿಯೂ, ರೂಪದಲ್ಲಿಯೂ ಮನಸ್ಸು ನಟ್ಟು ಹೋದ್ದರಿಂದ ಆತನು ದೇಹಾತೀತನಾಗಿದ್ದನು. ಇದನ್ನು ನೋಡಿ ಕಬೀರಮಾತೆಗೆ ಸಿಟ್ಟು ಬಂತು. ಆಕೆಯು ಮತ್ತೆ ಮಗನಿಗೆ—ಎಲಾ, ನೀನು ಹೀಗೆ ಠಕ್ಕತನದ ಪ್ರೇಮದಿಂದ ಭಜನೆ ಮಾಡುತ್ತ ಕುಳಿತುಕೊಂಡರೆ ಕೇಳುವೆನೇ, ಅನ್ನಲು ಬ್ರಾಹ್ಮಣರೂಪಿ

ಯಾದ ಭಗವಂತನು ಆಕೆಗೆ—ಅಮ್ಮಾ, ನೀನು ಮಗನಿಗೆ ಬಾಯಿಂದ ಕೆಟ್ಟ ಮಾತುಗಳನ್ನು ಆಡಿದರೂ, ನಿನ್ನ ಅಂತಃಕರಣವು ಕಡಿಮೆಯಾಗುವದಿಲ್ಲ. ಇದು ಸರಿಯಲ್ಲ. ಇದರಿಂದ ಕಬೀರನು ಹಾದಿಗೆ ಬರಲಾರನು. ಕಯ್ಯಲ್ಲಿ ಬೆತ್ತವನ್ನು ತೆಗೆದುಕೊಂಡು ಮಗನನ್ನು ಒಳಿತಾಗಿ ಥಳಿಸು, ಅಂದರೆ ಆತನಿಗೆ ಎಚ್ಚರವಾಗುವದು, ಎಂದು ಹೇಳಿದನು.

ಬ್ರಾಹ್ಮಣನ ಈ ಮಾತುಗಳನ್ನು ಕೇಳಿ, ಕಬೀರಮಾತೆಯು—ಬ್ರಾಹ್ಮಣನೇ, ನನ್ನ ಒಳಿಯಲ್ಲಿ ಬೆತ್ತವಿಲ್ಲ, ಎನ್ನಲು, ಭಗವಂತನು ಒಂದು ಬೆತ್ತವನ್ನು ಆಕೆಯ ಕೈಯಲ್ಲಿ ಕೊಟ್ಟನು. ಆಗ ಆ ಮುದುಕೆಯು ಸಿಟ್ಟಿನಿಂದ ಮಗನನ್ನು ಹೊಡೆಯ ಹತ್ತಿದಳು; ಆದರೆ ರಾಮಭಜನೆಯಲ್ಲಿ ಮಗ್ನನಾಗಿದ್ದ ಕಬೀರಭಕ್ತನ ಮೈಮೇಲೆ ಎಚ್ಚರವಾಗಲೇ ಇಲ್ಲ. ಆಗ ಒಂದು ಕೌತುಕದ ಸಂಗತಿಯು ಒದಗಿತು. ಒಳಗೆ ಕಬೀರಮಾತೆಯು ಮಗನ ಬೆನ್ನಮೇಲೆ ಹೊಡೆಯ ಹತ್ತಲು, ಹೊರಗೆ ಬ್ರಾಹ್ಮಣವೇಷಧಾರಿಯಾದ ಭಗವಂತನು ನಡುಗಹತ್ತಿದನು. ಆತನ ಬೆನ್ನ ಮೇಲೆ ಬಾಸಾಳಗಳು ಮೂಡಹತ್ತಿದವು. ಆತನು ಮುದುಕೆಗೆ—ಅಮ್ಮಾ, ನೀನು ನಿನ್ನ ಮಗನ ಬೆನ್ನ ಮೇಲೆ ಹೊಡೆಯ ಹತ್ತುತ್ತಲೆ ನನ್ನ ಬೆನ್ನಮೇಲೆ ಬಾಸಾಳಗಳು ಮೂಡಹತ್ತಿದವು. ಇನ್ನು ಸಾಕುಮಾಡಮ್ಮಾ, ಎಂದನು. ಬೇರಿಗೆ ಕೊಡಲಿಯ ಧಾರೆಯು ತಗಲುತ್ತಲೇ ಗಿಡವು ನಡಗುಂತೆಯೂ, ದುರ್ಜನರು ಮಗನನ್ನು ಪೀಡಿಸುತ್ತಲೆ ತಾಯಿಯು ದುಃಖದಿಂದ ನಡಗುವಂತೆಯೂ, ಸೈನ್ಯವೆಲ್ಲ ನಾಶವಾಗುತ್ತಲೆ ಅರಸನು ಚಿಂತೆಯಿಂದ ನಡಗುವಂತೆಯೂ, ಚಿಗರಿಯ ಮರಿಯು ಬಲೆಯಲ್ಲಿ ಬಿದ್ದದ್ದನ್ನು ನೋಡಿ ಅದರ ತಾಯಿಯು ವ್ಯಥೆಪಟ್ಟು ನಡಗುವಂತೆ-ಯೂ, ಅಗಸ್ತ್ಯನನ್ನು ನೋಡಿ ಸಮುದ್ರನು ಭಯದಿಂದ ನಡಗುವಂತೆಯೂ, ಕಬೀರಭಕ್ತನನ್ನು ಆತನ ತಾಯಿಯು ಹೊಡೆಯ ಹತ್ತಿದ ಕೂಡಲೆ ಭಗವಂತನು ವ್ಯಥೆಪಟ್ಟು ನಡಗಹತ್ತಿದನು. ಆತನು ಕಬೀರಮಾತೆಗೆ—ಅಮ್ಮಾ, ಇನ್ನು ಕೈಬಿಗಿದು ಹಿಡಿ. ಹೊಡೆಯುವದು ಸಾಕು. ನಾನು ಹಿಂದಕ್ಕೆ ಬಲಿಯನ್ನು ಛಲಿಸುವದಕ್ಕಾಗಿ ಹೋಗಿ ಆತನ ದ್ವಾರಪಾಲಕನಾದೆನು. ನನ್ನ ಕಪಟಾಚರಣೆಯೇ ನನ್ನನ್ನು ತಿನ್ನುತ್ತದೆ. ಈ ದಿನ ಬ್ರಾಹ್ಮಣವೇಷದಿಂದ ಕಬೀರಭಕ್ತನನ್ನು ಛಲಿಸ ಹೋಗಿ, ಪೆಟ್ಟುಗಳನ್ನು ತಿಂದೆನು. ಬಹುಜನ ಭಕ್ತರಿದ್ದರೂ ನನಗೆ ಲತ್ತೆಹಾಕಿದವರು ಯಾರೂ ಇದ್ದಿಲ್ಲ. ನನಗಿಂತಲೂ ಕಬೀರಭಕ್ತನು ಶ್ರೇಷ್ಠನಿರುತ್ತಾನೆಂಬದು ಈಗ ನನಗೆ ಗೊತ್ತಾಯಿತು, ಎಂದು ನುಡಿದು, ಬ್ರಾಹ್ಮಣವೇಷ

ವನ್ನು ಬಿಟ್ಟು, ಧನುಷ್ಪಾಣಿಯಾಗಿ ರಾಮರೂಪದಿಂದ ಸೀತೆಯೊಡನೆ ಕಬೀರನ ಎದುರಿಗೆ ನಿಂತುಕೊಂಡನು. ಆತನ ಮಸ್ತಕದಲ್ಲಿ ದೈದೀಪ್ಯಮಾನವಾದ ಕಿರೀಟವು ಒಪ್ಪುತ್ತಿತ್ತು. ಕಿವಿಗಳಲ್ಲಿ ಪ್ರಕಾಶಮಾನಗಳಾದ ಕುಂಡಲಗಳಿದ್ದವು. ಆತನ ವಿಶಾಲವಾದ ಕಣ್ಣುಗಳೂ ವಿಸ್ತಾರವಾದ, ಎದೆಯೂ, ಶೋಭಿಸುತ್ತಿದ್ದವು. ಕೊರಳಲ್ಲಿ ನಿರ್ಮಲವಾದ ಕೌಸ್ತುಭರತ್ನವು ಪ್ರಕಾಶಿಸುತ್ತಿತ್ತು. ವೈಜಯಂತೀಮಾಲೆಯು ಚಿತ್ತವನ್ನು ಆಕರ್ಷಿಸುತ್ತಿತ್ತು ಆತನು ಪೀತಾಂಬರವನ್ನು ಉಟ್ಟಿದ್ದನು. ಕಾಲಲ್ಲಿ ನೂಪುರಗಳನ್ನು ಇಟ್ಟಿದ್ದನು. ಇಂಥ ಮನೋಹರಸ್ವರೂಪದಿಂದ ಸೀತಾಮಾತೆಯೊಡನೆ ಒಪ್ಪುವ ಶ್ರೀರಾಮಮೂರ್ತಿಯನ್ನು ಕಬೀರಭಕ್ತನು ಕಣ್ದೆರೆದು ನೋಡಿ ಗಟ್ಟಿಯಾಗಿ ಆತನ ಕಾಲುಗಳನ್ನು ಹಿಡಕೊಂಡನು. ಆಗ ಭಗವಂತನು ಕಬೀರನಿಗೆ—ಎಲೈ ಭಕ್ತಶ್ರೇಷ್ಠನೇ, ಇನ್ನು ನನ್ನ ಹೃದಯದಲ್ಲಿ ನೀನು ಸ್ಥಿರವಾದೆ. ಇನ್ನು ನಿನ್ನನ್ನು ಮರೆಯುವದಿಲ್ಲ. ಮಗನನ್ನು ತಾಯಿಯು ಕರಕೊಳ್ಳುವಂತೆಯೂ, ಪರೀಕ್ಷಿಸಿದ ನಾಣ್ಯವನ್ನು ತಿಳಿದವರು ಸಂಗ್ರಹಿಸುವಂತೆಯೂ, ಒರೆಗೆ ಹಚ್ಚಿ ಪರೀಕ್ಷಿಸಿದ ನಿನ್ನನ್ನು ನಾನು ಹೃದಯಸಂಪುಟದಲ್ಲಿ ಇಟ್ಟುಕೊಳ್ಳುವೆನು. ಯಾವಾಗಲೂ ನಿನ್ನನ್ನು ಕೃಪಾದೃಷ್ಟಿಯಿಂದ ನೋಡುವೆನು, ಎಂದು ನುಡಿದು, ಕಬೀರಮಾತೆಯನ್ನು ಪ್ರೀತಿಯಿಂದ ಆಲಿಂಗಿಸಿ-- ತಾಯೆ, ನಿನ್ನ ಭಾಗ್ಯವನ್ನು ವರ್ಣಿಸುವದು ನನ್ನಿಂದಾಗದು, ಎಂದನು. ಭಗವಂತನ ಈ ಮಾತುಗಳನ್ನು ಕೇಳಿ ಕಬೀರಮಾತೆಯು ಹೊಟ್ಟೆಯಲ್ಲಿ ಆನಂದವು ಹಿಡಿಸದಾಯಿತು. ಆಕೆಯು ಮಗನನ್ನು ಅಪ್ಪಿಕೊಂಡು ಆಶೀರ್ವದಿಸಿ—ಅಪ್ಪಾ, ನಿನ್ನ ಯೋಗದಿಂದ ನನಗೆ ಶ್ರೀರಾಮನ ದರ್ಶನವಾಯಿತು, ಎಂದು ನುಡಿದು ಕೈಯನ್ನು ಹಿಡಕೊಂಡು ಮಗನನ್ನು ಮನೆಗೆ ಕರೆದೊಯ್ದಳು. ಇತ್ತ ಭಗವಂತನು, ಹೃದಯದಲ್ಲಿ ಯಾವಾಗಲೂ ತನ್ನ ಚಿಂತನವನ್ನು ಮಾಡುತ್ತಲಿರಬೇಕೆಂದು ಅವರಿಗೆ ಹೇಳಿ ಅದೃಶ್ಯನಾದನು.

ಶ್ರೀ ರಾಮನ ಕೃಪೆಯಿಂದ ಕಬೀರಮಾತೆಯ ಮನಸ್ಸು ತಿರುಗಿತು. ಆಕೆಯು ಮೊದಲು ಅಜ್ಞಾನದಿಂದ ಮಗನನ್ನು ಪರಿಪರಿಯಿಂದ ಕಾಡುತ್ತಿದ್ದಳು. ಆ ಕಾಟವು ಶ್ರೀ ರಾಮನ ದರ್ಶನದಿಂದ ದೂರವಾಯಿತು. ಶ್ರೀ ಗುರುಕೃಪೆಯು ಆದಕೂಡಲೆ ಜನ್ಮ-ಮರಣೋಪಾಧಿಯು ತಪ್ಪುವಂತೆಯೂ, ಸುಧಾರಸವು ಪ್ರಾಪ್ತವಾದವನಿಗೆ ರೋಗಬಾಧೆಯು ತಪ್ಪುವಂತೆಯೂ, ಅತ್ತೆಯ ಪ್ರೀತಿಯುಳ್ಳ ಸೊಸೆಗೆ ಉಳಿದ ಜನರ ಕಾಟವು ತಪ್ಪುವಂತೆಯೂ, ಶ್ರೀ ರಾಮಚಂದ್ರನ ಕೃಪೆಯಿಂದ

ಆ ತಾಯಿ-ಮಕ್ಕಳ ಅರಿಷ್ಟಗಳು ತಪ್ಪಿದವು. ಕಬೀರಮಾತೆಯ ಚಿತ್ತವು ಸಮಾಧಾನವನ್ನು ಹೊಂದಿತು. ಆಕೆಯು ಉದಾಸೀನಳಾಗಿ ಲೋಕಾಚಾರಕ್ಕಾಗಿ ಸಂಸಾರವನ್ನು ಮಾಡತೊಡಗಿದಳು. ಮನೆಯಲ್ಲಿ ಅನ್ನ-ವಸ್ತ್ರಗಳ ಕೊರತೆಯಾದರೂ ಆಕೆಯ ಮನಸ್ಸು ಕಳವಳಿಸದಾಯಿತು. ಆಕೆಯು ಯಾವಾಗಲೂ ಪ್ರೀತಿಯಿಂದ ನಾಮಸ್ಮರಣ ಮಾಡುತ್ತಿದ್ದಳು.

ಕಬೀರನ ಹೆಂಡತಿಯು ಅನಸೂಯೆಯಂತೆ ಮಹಾ ಪತಿವ್ರತೆಯಾಗಿದ್ದಳು. ದೀಪವೂ ದೀಪದ ಪ್ರಕಾಶವೂ, ಅಕ್ಷರಗಳೂ ಅರ್ಥವೂ, ಸಕ್ಕರೆಯೂ ಸವಿಯೂ ಕೂಡಿ ಇರುವಂತೆ ಕಬೀರನೂ ಕಬೀರನ ಹೆಂಡತಿಯೂ ಒಂದೇ ಮನಸ್ಸಿನವರಾಗಿದ್ದರು. ಚಂದ್ರನು ಕ್ಷೀಣನಾದಂತೆ ಪ್ರಕಾಶವು ಕ್ಷೀಣವಾಗುವದೂ, ಚಂದ್ರನು ಅಭಿವೃದ್ಧಿಯನ್ನು ಹೊಂದಿದಂತೆ ಪ್ರಕಾಶವು ಅಭಿವೃದ್ಧಿಯನ್ನು ಹೊಂದುವದೂ ಸ್ವಾಭಾವಿಕವಷ್ಟೇ? ಅದರಂತೆ ಕಬೀರನು ಸಂಸಾರದಲ್ಲಿ ಸುಖದುಃಖಗಳನ್ನು ಸಮಾನವಾಗಿ ತಿಳಿದಂತೆ ಅವನ ಹೆಂಡತಿಯೂ ತನ್ನ ಮನಸ್ಸನ್ನು ಬಿಗಿಹಿಡಿದು, ನಿರ್ಧಾರದಿಂದ ಸುಖದುಃಖಗಳನ್ನು ಸಮಾನವಾಗಿ ತಿಳಿದು ನಡೆಯುತ್ತಿದ್ದಳು. ಆದರಿಂದ ಆಕೆಯಲ್ಲಿ ಭಕ್ತಿಜ್ಞಾನ ವೈರಾಗ್ಯಗಳು ನೆಲೆಗೊಂಡವು. ಇಂಥ ಮಹಾ ಸತಿಯು ತನ್ನ ಪುಣ್ಯಫಲದಿಂದ ಗರ್ಭವತಿಯಾದಳು. ಒಂಬತ್ತು ತಿಂಗಳು ತುಂಬುತ್ತಲೆ ಆಕೆಯ ಪುಣ್ಯೋದರದಿಂದ ಪುತ್ರರತ್ನವು ಜನಿಸಿತು.

ಬೀಜದಂತೆ ಅಂಕುರವಿರುವದು ಸ್ವಾಭಾವಿಕವು. ಈಶ್ವರಭಕ್ತರೂ ವೈರಾಗ್ಯಶೀಲರೂ ಆದ ಈ ದಂಪತಿಗಳ ಹೊಟ್ಟೆಯಲ್ಲಿ ತಂದೆತಾಯಿಗಳ ಗುಣವನ್ನು ಹೋಲುವ ಮಗನು ಹುಟ್ಟಿದ್ದು ಆಶ್ಚರ್ಯವಲ್ಲ. ಕಬೀರಪುತ್ರನು ವೈರಾಗ್ಯಶಾಲಿಯೂ, ಪವಿತ್ರನೂ, ನಿಶ್ಚಯಜ್ಞಾನವುಳ್ಳನೂ, ಶಾಂತನೂ ಆದನು. ಕೂಸಿಗೆ ಹನ್ನೆರಡು ದಿವಸಗಳಾದ ಕೂಡಲೆ ಅದಕ್ಕೆ ಕಮಾಲನೆಂದು ಹೆಸರಿಟ್ಟರು. ಕಮಾಲನು ತಂದೆಯ ಕೀರ್ತನವನ್ನು ಕೇಳಿ ತಾನೂ ಕೀರ್ತನ ಮಾಡಹತ್ತಿದನು. ಏಳು ವರ್ಷದವನಾಗಲು, ಆತನು ತಂದೆಯನ್ನು ಕುರಿತು ವಿನಯದಿಂದ— ಅಪ್ಪಾ, ನನಗೆ ದ್ವಾರಕೆಗೆ ಹೋಗುವ ಇಚ್ಛೆಯಾಗಿದೆ, ಅಪ್ಪಣೆ ಕೊಡಬೇಕು. ಎಂದು ಕೇಳಿಕೊಂಡನು. ಆದನ್ನು ಕೇಳಿ ಕಬೀರನು ತುಂಬಾ ಸಂತೋಷಬಟ್ಟು ವಾತ್ಸಲ್ಯದಿಂದ—ಬಾಳಾ, ಅವಶ್ಯವಾಗಿ ನಿನ್ನ ಇಚ್ಛೆಯನ್ನು ಪೂರ್ಣಮಾಡಿಕೊಂಡು ಬೇಗನೆ ಬಾ,. ಎಂದು ಹೇಳಿದನು. ಬಾಲ್ಯದಲ್ಲಿ ಮಗನು

ತೀರ್ಥಯಾತ್ರೆ ಮಾಡಲು ಇಚ್ಛಿಸಿದ್ದನ್ನು ನೋಡಿ ಕಬೀರನಿಗೆ ಬಹು ಸಮಾಧಾನ ವಾಯಿತು. ರಾಜಪುತ್ರನು ಭೂಮಂಡಲವನ್ನು ಜಯಿಸಲಿಚ್ಛಿಸುವದನ್ನು ನೋಡಿ ರಾಜನಿಗೂ, ಕಲಾಪೂರ್ಣನಾದ ಚಂದ್ರನು ಉದಯವಾಗುವದನ್ನು ನೋಡಿ ಸಮುದ್ರನಿಗೂ, ಗಣಪತಿಯು ಕುಣಿಯುವದನ್ನು ನೋಡಿ ಪರಮೇಶ್ವರನಿಗೂ ಸಂತೋಷವಾಗುವಂತೆ ವೈರಾಗ್ಯಭರಿತನಾದ ಮಗನು ಯಾತ್ರೆಗೆ ಹೊರಡುವ ದನ್ನು ನೋಡಿ ಆತನ ತಂದೆತಾಯಿಗಳಿಗೆ ಸಂತೋಷವಾಯಿತು.

ಕಮಾಲನು ಭಕ್ತಿಯಿಂದ ತಾಯಿ ತಂದೆಗಳನ್ನು ನಮಸ್ಕರಿಸಿ ಯಾತ್ರೆಗೆ ಹೊರಟನು. ಹಾದಿಯನ್ನು ನಡೆಯುವಾಗ ಒಂದೇಸವನೆ ನಾಮಗಾಯನ ಮಾಡುತ್ತಿದ್ದನು. ಲಜ್ಜೆಯೂ, ಮಾನಮರ್ಯಾದೆಗಳೂ, ಲೌಕಿಕಸ್ಥಿತಿಯೂ ಆತನ ಮನಸ್ಸನ್ನು ಸೋಂಕಿದ್ದಿಲ್ಲ. ರಾಮಭಜನೆಯ ಹೊರತು ಆತನಿಗೆ ವಸ್ತ್ರ ಭೂಷಣಗಳು ಸೇರುತ್ತಿದ್ದಿಲ್ಲ. ಆತನ ನಾಲಿಗೆಯು ಸವಿಯುಣಿಸುಗಳನ್ನು ಬಯ ಸುತ್ತಿದ್ದಿಲ್ಲ; ಡಾಂಭಿಕವಾದ ರಾಜದರ್ಶನದ ಗೊಡವೆಗೆ ಆತನು ಹೋಗುತ್ತಿ ದ್ದಿಲ್ಲ. ಜನರು ಕಬೀರಭಕ್ತನ ಮಗನಾದ ಕಮಾಲಭಕ್ತನು ಬಂದಿರುವನೆಂಬ ವರ್ತಮಾನವನ್ನು ಕೇಳಿ, ಭಕ್ತಿಯಿಂದ ಆತನನ್ನು ಎದರುಗೊಂಡು ಕರಕೊಂಡು ಹೋಗುತ್ತಿದ್ದರು. ಬ್ರಹ್ಮಪುತ್ರನಾದ ನಾರದಋಷಿಯಂತೆ ಕಮಾಲಭಕ್ತನು ಹಗಲು-ರಾತ್ರಿ ಹರಿನಾಮಕೀರ್ತನದಲ್ಲಿ ಮಗ್ನನಾಗಿರುತ್ತಿದ್ದನು. ಆತನು ಒಂದು ಊರಲ್ಲಿ ಒಂದು ರಾತ್ರಿ ಇದ್ದು ಅಲ್ಲಿ ಹರಿಕೀರ್ತನ ಮಾಡುತ್ತಿದ್ದನು.

ಈ ಮೇರೆಗೆ ಆ ಕಮಾಲಭಕ್ತನು ಮಾರ್ಗಕ್ರಮಣ ಮಾಡುತ್ತ ದ್ವಾರ ಕೆಗೆ ಹೋದನು. ಅಲ್ಲಿ ಗೋಮತೀ ತೀರ್ಥವನ್ನು ನೋಡಿ ಆತನ ಮನಸ್ಸಿಗೆ ಅನುತಾಪವು ಉತ್ಪನ್ನವಾಯಿತು. ಅನುತಾಪವಿಲ್ಲದವರ ತೀರ್ಥಯಾತ್ರೆಗಳು ವ್ಯರ್ಥವಾದವುಗಳೇ ಸರಿ. ಅವರು ಸುಮ್ಮನೆ ಎಡತಾಕಿದ ದಾವತಿಗೆ ಮಾತ್ರ ಗುರಿಯಾದಂತಾಗುವದು. ಹೊಟ್ಟೆಯಲ್ಲಿ ಪುತ್ರಸಂತಾನವಿಲ್ಲದವನು ಸ್ವಾಸ್ಥ್ಯ ವನ್ನು ಸಂಪಾದಿಸುವದೂ, ದುಡ್ಡಿಲ್ಲದವನು ಪೇಟೆಗೆ ಹೋಗುವದೂ, ಮನಸ್ಸಿ ನಲ್ಲಿ ಪ್ರೇಮವಿಲ್ಲದವನು ಕೀರ್ತನಮಾಡುವದೂ ನಿರರ್ಥಕವಾಗುವಂತೆ ಅನು ತಾಪವಿಲ್ಲದವನು ತೀರ್ಥಯಾತ್ರೆಗಳನ್ನು ಮಾಡುವದು ನಿರರ್ಥಕವೆಂದು ತಿಳಿಯ ತಕ್ಕದ್ದು. ಉಪ್ಪಿಲ್ಲದ ಅನ್ನಕ್ಕೆ ರುಚಿಯು ಹೇಗೆ ಬರಬೇಕು? ಕೃಪಣನ ಮಿತ್ರ ತ್ವದಿಂದ ಸೌಖ್ಯವು ಹ್ಯಾಗಾಗಬೇಕು? ಗಾಯತ್ರಿಯ ಮಂತ್ರವಿಲ್ಲದವನಿಗೆ ಬ್ರಾಹ್ಮಣನೆಂದು ಹ್ಯಾಗೆ ಅನ್ನಬೇಕು? ಭೂತದಯವಿಲ್ಲದವರ ಜ್ಞಾನವು ಸಾರ್ಥ

ಕವಾದದ್ದೆಂದು ಹ್ಯಾಗೆ ತಿಳಿಯಬೇಕು? ಆದರಂತೆ ಅನುತಾಪವು ಹುಟ್ಟದವನ ತೀರ್ಥಯಾತ್ರೆಯಿಂದ ಫಲವು ಏನಾಗಬೇಕು? ಅಂಥವರು ತೀರ್ಥದಲ್ಲಿ ಸ್ನಾನ ಮಾಡುವದರಿಂದ ದೋಷಗಳು ಹೋಗಲಾರವು,

ಕಬೀರಪುತ್ರನು ಗೋಮತಿಯ ತೀರದಲ್ಲಿ ನಿಂತು ಸಾಷ್ಟಾಂಗ ನಮಸ್ಕಾರಮಾಡಿ ಭಕ್ತಿಯಿಂದ ವಂದಿಸಿದನು. ಆ ಮೇಲೆ ಆತನು ನೀರಲ್ಲಿ ಹೊಕ್ಕು ಸಚೇಲಸ್ನಾನಮಾಡಿ ತೀರ್ಥವನ್ನು ಕುರಿತು—ಗಂಗೆಯೇ, ನನ್ನ ದೋಷಗಳನ್ನು ಕಳೆದು ಜನ್ಮ-ಮರಣಗಳನ್ನು ಖಂಡಿಸೆಂದು ಪ್ರಾರ್ಥಿಸಿದನು. ಸ್ನಾನವಾದಮೇಲೆ ಆತನು ಗೋಪೀಚಂದನದಿಂದ ದ್ವಾದಶನಾಮುಗಳನ್ನು ಹಚ್ಚಿಕೊಂಡನು. ಕೊರಳಲ್ಲಿ ತುಲಸೀಮಾಲೆಯನ್ನು ಹಾಕಿಕೊಂಡನು. ಮನಸ್ಸಿನಲ್ಲಿ ಶ್ರೀ ರಾಮಮೂರ್ತಿಯನ್ನು ಧರಿಸಿ, ಬೇಗನೆ ಮಾನಸಪೂಜೆಯನ್ನು ಮಾಡಿದನು. ಇಷ್ಟಾದಬಳಿಕ ಆ ಕಮಾಲಭಕ್ತನು ದೇವದರ್ಶನಕ್ಕಾಗಿ ಪ್ರೀತಿಯಿಂದ ಹೋದನು. ಮಹಾದ್ವಾರಕ್ಕೆ ಬಂದಕೂಡಲೆ ಆತನು ಬೇಗನೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ, ಗರ್ಭಗುಡಿಯನ್ನು ಹೊಕ್ಕು, ಶ್ರೀ ಕೃಷ್ಣನ ಚರಣಕ್ಕೆ ವಂದಿಸಿದನು. ತರುವಾಯ ಕಣ್ದೆರೆದು ಪ್ರೀತಿಯಿಂದ ಮೂರ್ತಿಯನ್ನು ನೋಡಿ, ಅದನ್ನು ಮನಸ್ಸಿನಲ್ಲಿ ಸ್ಥಿರಗೊಳಿಸಿ, ನಾಮಗಾಯನ ಮಾಡುತ್ತ ಮಂಗಲಾರತಿಯನ್ನು ಮಾಡಿದನು. ಈ ಮೇರೆಗೆ ಕಮಾಲಭಕ್ತನು ನಾಲ್ಕು ತಿಂಗಳು ದ್ವಾರಕೆಯಲ್ಲಿದ್ದು, ನಿತ್ಯದಲ್ಲಿ ಪ್ರೀತಿಯಿಂದ ಕವಿತ್ವಗಳನ್ನು ರಚಿಸಿ ಶ್ರೀ ಹರಿಯ ಗುಣಗಳನ್ನು ವರ್ಣಿಸುತ್ತಿದ್ದನು; ತ್ರಿಕಾಲದಲ್ಲಿ ದೇವರ ದರ್ಶನ ತಕ್ಕೊಳ್ಳುತ್ತಿದ್ದನು. ಸತ್ಸಮಾಗಮದಿಂದ ಜ್ಞಾನದ ವಿಷಯವಾಗಿ ಚರ್ಚಿಸುತ್ತಿದ್ದನು.

ನಾಲ್ಕು ತಿಂಗಳು ಪೂರ್ಣವಾದ ಮೇಲೆ ಕಮಾಲಭಕ್ತನು, ಶ್ರೀಕೃಷ್ಣನ ಸನ್ನಿಧಿಗೆ ಹೋಗಿ, ಆತನ ಚರಣಕ್ಕೆರಗಿ—ಭಗವಂತನೇ, ಪುನಃ ನನಗೆ ದರ್ಶನವನ್ನು ಕೊಡು, ಎಂದು ಪ್ರಾರ್ಥಿಸಿ ದ್ವಾರಕೆಯಿಂದ ಹೊರಟನು. ಮಾರ್ಗವನ್ನು ಕ್ರಮಿಸುತ್ತಿರುವಾಗ ಆತನಿಗೆ ಚಿತ್ರಕೂಟವೆಂಬ ನಗರವು ಹತ್ತಿತು. ಅಲ್ಲಿ ವಿಷ್ಣುದಾಸನೆಂಬ ಸಾವುಕಾರನು ಇರುತ್ತಿದ್ದನು. ಆತನು ಬಳ್ಳೇ ಉದಾರನು; ಮೇ-ಲಾಗಿ ಭಾವಿಕನು. ಆ ಸಾವುಕಾರನು ಕಮಾಲಭಕ್ತನ ಬಳಿಗೆ ಬಂದು ಪ್ರೀತಿಯಿಂದ ನಮಸ್ಕಾರ ಮಾಡಿದನು. ಆ ಸಜ್ಜನನಲ್ಲಿ ಆರ್ತಭಾವವು ಉತ್ಪನ್ನವಾಯಿತು. ಆತನು ಕಮಾಲಭಕ್ತನನ್ನು ಆದರದಿಂದ ಮನೆಗೆ ಕರಕೊಂಡು ಹೋಗಿ ಪಾದಪ್ರಕ್ಷಾಲನ ಮಾಡಿ ಪ್ರೇಮದಿಂದ ಭೋಜನ ಮಾಡಿಸಿದನು. ರಾತ್ರಿ ಕೀರ್ತ

ನವು ಆರಂಭವಾಯಿತು. ಊರ ಜನರು ಬಂದು ಪ್ರೇಮದಿಂದ ಕೀರ್ತನವನ್ನು ಕೇಳಿದರು. ಜನರ ಚಿತ್ತವೃತ್ತಿಗಳು ತಟಸ್ಥವಾದವು. ಆಗ ಸಾವುಕಾರನು ಮನಸ್ಸಿನಲ್ಲಿ—ಈ ಭಗವದ್ಭಕ್ತನಿಗೆ ಏನು ಕೊಡಬೇಕು? ದ್ರವ್ಯರಾಶಿಯನ್ನು ಮುಂದೆ ಸುರವಿದರೂ ಈತನು ಕಣ್ಣೆತ್ತಿ ನೋಡನು, ಎಂದು ಯೋಚಿಸಿ, ತನ್ನ ಸಂಗ್ರಹದಲ್ಲಿರುವ ಒಂದು ಉತ್ತಮವಾದ ರತ್ನವನ್ನು ಕಮಾಲಭಕ್ತನಿಗೆ ಕೊಡುವದನ್ನು ನಿಶ್ಚಯಿಸಿದನು. ಅದರಂತೆ ಆ ಸಜ್ಜನನು ರತ್ನವನ್ನು ತಂದು ಕಮಾಲಭಕ್ತನ ಚರಣಕ್ಕೆ ಅರ್ಪಿಸಿ—ಮಹಾತ್ಮನೇ, ಈ ರತ್ನವನ್ನು ಸ್ವೀಕರಿಸಿ ನನ್ನನ್ನು ಅನುಗ್ರಹಿಸಬೇಕು. ಇದು ಬಹು ಪ್ರಕಾಶಮಾನವಾದದ್ದು. ತನ್ನ ಜ್ಯೋತಿಯಿಂದ ದೀಪಜ್ಯೋತಿಯನ್ನು ಅಡಗಿಸಿ ಬಿಡುವದು. ಇದನ್ನು ಒಯ್ದು ಮನೆಯಲ್ಲಿಡಬೇಕು. ರಾತ್ರಿಯಲ್ಲಿ ದೀಪದ ಅವಶ್ಯವೇ ಬೀಳಲಿಕ್ಕಿಲ್ಲ. ಈ ರತ್ನದಿಂದಲೇ ಕತ್ತಲೆಯು ನಾಶವಾಗುವದು, ಎಂದು ಹೇಳಿದನು.

ವಿಷ್ಣುದಾಸನ ಪ್ರಾರ್ಥನೆಯನ್ನು ಕೇಳಿ ಕಮಾಲಭಕ್ತನು—ಪುಣ್ಯವಂತನೇ, ನಾನು ಈ ರತ್ನವನ್ನು ಒಯ್ದರೆ ನಮ್ಮ ತಂದೆಯು ಅನುತಾಪದಿಂದ ಸಿಟ್ಟು ಮಾಡಿಯಾನು. ರತ್ನವೂ, ಕಲ್ಲೂ ನಮ್ಮ ದೃಷ್ಟಿಗೆ ಸರಿಯಾಗಿ ತೋರುವವೆಂಬದನ್ನು ತಿಳಿ. ನೀನು ಆಗ್ರಹದಿಂದ ನನಗೆ ಈ ರತ್ನವನ್ನು ಕೊಡುವ ಕಾರಣವೇನು? ದ್ರವ್ಯವನ್ನು ಬ್ರಾಹ್ಮಣರಿಗೆ ಅರ್ಪಿಸಬೇಕು; ರತ್ನಗಳನ್ನು ಅರಸರಿಗೆ ಅರ್ಪಿಸಬೇಕು; ಅನ್ನವನ್ನು ಭೂತಮಾತ್ರಗಳಿಗೆ ಅರ್ಪಿಸಬೇಕು; ಡೊಂಬರು, ಜಾತಗರು, ನಟರು ಮೊದಲಾದವರಿಗೆ ಮೈಮೇಲಿನ ವಸ್ತ್ರಗಳನ್ನು ಕೊಡಬೇಕು; ಅನುಷ್ಠಾನಮಾಡುವ ಪವಿತ್ರ ಜನರಿಗೆ ಭೋಜನಸಾಮುಗ್ರಿಯನ್ನು ಕೊಡಬೇಕು; ಯತಿಗಳಿಗೆ ಮಿಷ್ಟಾನ್ನ ಭೋಜನವನ್ನೂ, ಕಾಷಾಯವಸ್ತ್ರ-ಕೌಪೀನಗಳನ್ನೂ ಅರ್ಪಿಸಬೇಕು. ಇದನ್ನು ನೀನು ತಿಳಿದವನು. ಆಗ್ರಹಮಾಡಬೇಡ. ನಾವು ಉದಾಸೀನರಾದ ವೈಷ್ಣವಜನರು, ಸದಾ ಸಂತುಷ್ಟರು. ನಮಗೆ ಯಾವ ಇಚ್ಛೆಯೂ ಇಲ್ಲದಿರಲು, ಒತ್ತಾಯದಿಂದ ರತ್ನವನ್ನು ಯಾಕೆ ಅರ್ಪಿಸುವೆ? "ಹೊಟ್ಟೆ ತುಂಬಿದವನಿಗೆ ಹುಗ್ಗಿ ಮುಳ್ಳುಮುಳ್ಳೆ"ಂಬ ಗಾದೆಯಂತೆ ನಮಗೆ ರತ್ನವನ್ನು ಕೊಡುವದು ವ್ಯರ್ಥವು. ಮೇಘವು ಸಮುದ್ರದಮೇಲೆ ನೀರನ್ನು ಸುರುವಿದರೆ ಆಗುವ ಪ್ರಯೋಜನವೇನು? ಸಮುದ್ರಕ್ಕೇನು ನೀರು ಬೇಕಾಗಿರುವದೇ? ವ್ಯರ್ಥವಾಗಿ ನನ್ನಂಥ ಉದಾಸೀನನಿಗೆ ರತ್ನವನ್ನು ಅರ್ಪಿಸಬೇಡ, ಎಂದು ಹೇಳಿದನು.

ಕಮಾಲಭಕ್ತನ ಈ ಮಾತುಗಳನ್ನು ಕೇಳಿ ಸಾವುಕಾರನು ಸಾಂಷ್ಟಾಂಗ ನಮಸ್ಕಾರ ಮಾಡಿ ಆತನಿಗೆ ತಿಳಿಯದಂತೆ ಆತನ ಲಂಗೋಟಿಯ ತುದಿಯಲ್ಲಿ ಆ ರತ್ನವನ್ನು ಕಟ್ಟಿದನು. ಕಮಾಲನು ಅಲ್ಲಿಂದ ಹೊರಟು ಕಾಶಿಗೆ ಬಂದು, ತಂದೆಯ ಚರಣಕ್ಕೆರಗಿ, ದೈದೀಪ್ಯಮಾನವಾದ ಆ ಕೆಂಪುರತ್ನವನ್ನು ಮುಂದೆ ಇಟ್ಟು, ನಡೆದ ವೃತ್ತಾಂತವನ್ನೆಲ್ಲ ಹೇಳಿದನು. ಅದನ್ನು ಕೇಳಿ ಕಬೀರಭಕ್ತನಿಗೆ ಬಹಳ ವ್ಯಸನವಾಯಿತು. ಕೂಡಲೆ ಆತನು ಮೂರ್ಛಿತನಾಗಿ ನೆಲಕ್ಕೆ ಬಿದ್ದನು. ಮನಸ್ಸಿನಲ್ಲಿ ಪೂರ್ಣ ಪಶ್ಚಾತ್ತಾಪವಾಯಿತು. ಆತನು ದೊಡ್ಡ ದನಿಯಿಂದ ಅಳತೊಡಗಿದನು. ಅದನ್ನು ಕೇಳಿ ಕಬೀರನ ಹೆಂಡತಿಯು ಹೊರಗೆ ಬಂದು ಪತಿಯ ಚರಣಕ್ಕೆರಗಿ ವಿನಯದಿಂದ—ಸ್ವಾಮಿ, ಹೀಗೆ ರೋದನ ಮಾಡುವ ಕಾರಣವೇನು? ಇಷ್ಟು ಕಷ್ಟವು ನಿಮಗೆ ಯಾತರಿಂದುಂಟಾಯಿತು? ವಿಪರೀತವಾದದ್ದನ್ನೇನು ನೋಡಿದಿರಿ? ಮನಸ್ಸಿಗೆ ಇಷ್ಟು ಪಶ್ಚಾತ್ತಾಪವೇಕೆ, ಎಂದು ಕೇಳಿದಳು. ಆಗ ಕಬೀರಭಕ್ತನು ಮಗನ ಕಡೆಗೆ ಬೆನ್ನಮಾಡಿ ಕೂತು, ಹೆಂಡತಿಯನ್ನು ಕುರಿತು—ಪ್ರಿಯೇ, ಈ ದಿನ ನಮ್ಮ ವಂಶವು ಮುಣುಗಿತೆಂಬಂತೆ ಕಾಣುತ್ತದೆ. ನಮ್ಮ ಮಗನಾದ ಕಮಾಲನು ರಾಮನಾಮವನ್ನು ಮಾರಿ ರತ್ನವನ್ನು ತಂದನು! ಇದನ್ನು ನೋಡಿ ನಾನು ದುಃಖಸಾಗರದಲ್ಲಿ ಮುಣುಗಿದೆನು. ಪಾತ್ರೆಯಲ್ಲಿಯ ಗಂಗಾಜಲವನ್ನು ಚೆಲ್ಲಿಕೊಟ್ಟು ಅಗಸರ ಬಾನೆಯೊಳಗಿನ ನೀರು ತುಂಬಕೊಳ್ಳುವಂತೆಯೂ, ಮನೆಯೊಳಗಿನ ತೀರ್ಥವಾಸಿಗಳನ್ನು ಹೊರಗೆ ದೂಡಿ, ಕಳ್ಳರನ್ನು ಸೇರಿಸಿಕೊಂಡಂತೆಯೂ, ನೆರೆಯಲ್ಲಿದ್ದ ತಪೋಧನರನ್ನು ಓಡಿಸಿ, ನೀಚರನ್ನು ಇರಿಸಿಕೊಂಡಂತೆಯೂ ನಿನ್ನ ಮಗನು ವಿಪರೀತ ಕರ್ಮವನ್ನು ಮಾಡಿದನು. ರಾಮನಾಮವನ್ನು ಮಾರಿ ರತ್ನವನ್ನು ತರುವದುಂಟೇ? ಈ ವಿಪರೀತ ಕರ್ಮಕ್ಕಾಗಿ ನನಗೆ ಪಶ್ಚಾತ್ತಾಪವಾಗಿ ನಾನು ದುಃಖಿಸುವೆನು, ಎಂದುಹೇಳಿದನು.

ತಂದೆಯ ಈ ಮಾತುಗಳನ್ನು ಕೇಳಿ ಕಮಾಲಭಕ್ತನು ಕೂಡಲೆ ಅಲ್ಲಿಂದ ಹೊರಟು, ವಿಷ್ಣುದಾಸನ ಬಳಿಗೆ ಹೋಗಿ, ಆತನಿಗೆ ರತ್ನವನ್ನು ಒಪ್ಪಿಸಿ, ಮರಳಿ ತಂದೆಯ ಬಳಿಗೆ ಬಂದು ನಮಸ್ಕರಿಸಿದನು. ಆಗ ಕಬೀರಭಕ್ತನಿಗಾದ ಆನಂದವನ್ನು ವರ್ಣಿಸಲಸಾಧ್ಯವು. ಶಿಷ್ಯನು ವಿರಕ್ತನಾದದ್ದನ್ನು ನೋಡಿ ಸದ್ಗುರುವು ಸಂತೋಷಪಡುವಂತೆಯೂ, ಮಗನು ಬೇನೆಯಿಂದ ಎದ್ದದ್ದನ್ನು ನೋಡಿ ತಾಯಿಯು ಸಂತೋಷಬಡುವಂತೆಯೂ, ಉಪಾಧಿರಹಿತನಾದ ಕಮಾಲನನ್ನು

ಕಬೀರನು ನೋಡಿ, ಸಂತೋಷಪಟ್ಟು ಕೂಡಲೆ ಮಗನನ್ನು ಆಲಿಂಗಿಸಿದನು. ಆಗ ಕಮಾಲನಿಗೂ ಪರಮಾವಧಿ ಸಂತೋಷವಾಯಿತು. ಆತನು ತಂದೆಯ ಚರಣಕ್ಕೆರಗಿ ಶ್ರೀರಾಮಭಜನೆಯಲ್ಲಿ ಮಗ್ನನಾದನು,

ಒಂದಾನೊಂದು ದಿನ, ಬಹುಜನ ಸಾಧುಸಂತರು ತೀರ್ಥಯಾತ್ರೆಗಳನ್ನು ಮಾಡುತ್ತ ಮಾಡುತ್ತ ಕಬೀರನ ಮನೆಗೆ ಬಂದರು. ಆಗ ಮೂರುತಾಸು ರಾತ್ರಿಯಾಗಿತ್ತು. ಗಂಡಹೆಂಡರಿಬ್ಬರೂ ಅವರನ್ನು ಎದುರುಗೊಂಡು ಸಾಷ್ಟಾಂಗವಾಗಿ ವಂದಿಸಿ, ಕೂಡುವದಕ್ಕಾಗಿ ದಾಬಳಿಯನ್ನು ಹಾಸಿದರು. ಕಮಾಲನು ವಿಶ್ರಮಿಸುವದಕ್ಕಾಗಿ ಸಂತರನ್ನು ವಿನಯದಿಂದ ಪ್ರಾರ್ಥಿಸಿದನು. ಸಂತರನ್ನು ನೋಡಿ ಈ ಮೂವರಿಗೂ ಬಹು ಸಮಾಧಾನವಾಯಿತು. ಸನಕಾದಿಕರನ್ನು ನೋಡಿ ಶಚೀರಮಣನೂ, ಬಹುದಿವಸ ಹೋಗಿದ್ದ ಮಳೆಯು ಭೋರೆಂದು ಸುರಿಯುವದನ್ನು ನೋಡಿ ಜನರೂ ಆನಂದಪಡುವಂತೆ ಕಬೀರನು ಸಂತರನ್ನು ನೋಡಿ ಆನಂದಪಟ್ಟನು. ರೋಗಿಗೆ ಅಮೃತವನ್ನು ಕುಡಿಸಿದಂತೆಯೂ, ದೀಪಕ್ಕೆ ಎಣ್ಣೆಬತ್ತಿಗಳನ್ನು ಹಾಕಿದಂತೆಯೂ ಆಗಿ ಕಬೀರಭಕ್ತನು ತನ್ನ ತೇಜಸ್ಸಿನಿಂದ ಪ್ರಕಾಶಮಾನನಾದನು. ಕೀರ್ತನವನ್ನು ಕೇಳಿ ಭಗವದ್ಭಕ್ತರು ಸ್ವಾನಂದಭರಿತರಾಗಿ ತಲೆದೂಗುವಂತೆಯೂ, ಅಶೋಕವನದಲ್ಲಿ ಹನುಮಂತನನ್ನು ನೋಡಿ ಜನಕಾತ್ಮಜೆಯು ಅನಂದಪರವಶಳಾದಂತೆಯೂ, ಕಬೀರಭಕ್ತನು ಸಂತರನ್ನು ನೋಡಿ ಹರ್ಷಭರಿತನಾದನು.

ಈ ಮೇರೆಗೆ ಸಂತರು ಮನೆಗೆ ಬಂದದ್ದಕ್ಕಾಗಿ ಹುಚ್ಚೆದ್ದು ಕುಣಿಯುತ್ತಿದ್ದ ಕಬೀರನು ಒಳಗೆ ಹೋಗಿ ಹೆಂಡತಿಯನ್ನು ಕುರಿತು—ವೈಷ್ಣವರಾದ ಭಕ್ತಶ್ರೇಷ್ಠರು ಮನೆಗೆ ಬಂದಿರುವರು. ಅವರಿಗೆ ಭೋಜನ ಮಾಡಿಸಲಿಕ್ಕೆ ಬೇಕು. ಅವರು ಉಪವಾಸ ಮಲಗಿಕೊಂಡರೆ, ಸತ್ವಕ್ಕೆ ಹಾನಿಬರುವದು, ಎಂದು ಹೇಳಿದನು. ಮನೆಯಲ್ಲಿ ಎಳ್ಳಷ್ಟಾದರೂ ಸಾಮುಗ್ರಿ ಇಲ್ಲದ್ದರಿಂದ ಕಬೀರಪತ್ನಿಯು ಅಸಮಾಧಾನಪಟ್ಟಳು. ಆಕೆಯು ಪತಿಯನ್ನು ಕುರಿತು—ಪ್ರಾಣನಾಥನೇ, ಈಗ ಯಾವ ಉಪಾಯವೂ ತೋಚಲೊಲ್ಲದು. ನೆರೆಹೊರೆಯವರಲ್ಲಿ ಕೈಗಡ ಕೇಳ ಹೋದರೆ, ಅವರು ಎಷ್ಟು ಮಾತ್ರವೂ ಕೊಡುವದಿಲ್ಲ. ಪೇಟೆಯಲ್ಲಿ ಪದಾರ್ಥಗಳನ್ನು ಕೊಂಡು ತರಬೇಕೆಂದರೆ, ಕೈಯಲ್ಲಿ ದುಡ್ಡು ಇಲ್ಲ. ಇನ್ನು ಎರಡನೆಯ ಉಪಾಯವೇನೂ ತೋರುವದಿಲ್ಲ. ನೀವು ಮಗನನ್ನು ಕರಕೊಂಡು ಕಳವಿಗೆ ಹೋಗಬೇಕು. ಅನ್ನಸಾಮುಗ್ರಿಯು ಸಂಪೂರ್ಣವಾಗಿರುವ ಅಂಗಡಿ

ಕಾರನ ಅಂಗಡಿಗೆ ಕನ್ನಹಾಕಬೇಕು. ಸಂತರ ಭೋಜನಕ್ಕೆ ಬೇಕಾಗುವಷ್ಟು ಪದಾರ್ಥಗಳನ್ನು ಕದ್ದು ತಂದು, ಸಂತರನ್ನು ತೃಪ್ತಿಗೊಳಿಸಬೇಕು, ಎಂದು ಹೇಳಿದಳು.

ಹೆಂಡತಿಯ ಮಾತುಗಳನ್ನು ಕೇಳಿ ಕಬೀರಭಕ್ತನು ಯಾಕಾಗಲೊಲ್ಲದೆಂದು ಹೇಳಿ, ಕನ್ನಗತ್ತರಿಯನ್ನು ತಕ್ಕೊಂಡು ಹೊರಟನು. ಕಮಾಲನು ಒಂದು ಹಾರಿಯಕೋಲನ್ನು ತಕ್ಕೊಂಡು ತಂದೆಯನ್ನು ಹಿಂಬಾಲಿಸಿದನು. ತಂದೆ-ಮಕ್ಕಳಿಬ್ಬರು ಲಗಬಗೆಯಿಂದ ಪೇಟೆಗೆ ಹೋಗಿ, ಒಬ್ಬ ಅಂಗಡಿಕಾರನ ಅಂಗಡಿಗೆ ಕನ್ನಕೊರೆದರು. ಆಗ ಆರು ತಾಸುರಾತ್ರಿಯಾಗಿತ್ತು. ಅಂಗಡಿಕಾರನು ನಿದ್ದೆಹತ್ತಿ ಮಲಗಿದ್ದನು. ಕಬೀರಭಕ್ತನು ಮಗನನ್ನು ಅಂಗಡಿಯೊಳಗೆ ಕಳಿಸಿ, ತಾನು ಕನ್ನದಹತ್ತರ ಹೊರಗೆ ನಿಂತುಕೊಂಡು ಮಗನಿಗೆ—ತಮ್ಮಾ, ಹೊತ್ತಾಗುತ್ತದೆ, ಬೇಗನೆ ಕೆಲಸತೀರಿಸಿಕೊಂಡು ಬಾರೆಂದು ಹೇಳಿದನು. ಕಮಾಲಭಕ್ತನು ಅಂಗಡಿಯಲ್ಲಿ ನಾಲ್ಕೂ ಕಡೆಗೆ ನೋಡಿದನು. ಒತ್ತಟ್ಟಿಗೆ ದ್ರವ್ಯರಾಸಿಯು ಕಣ್ಣಿಗೆ ಬಿತ್ತು; ಮತ್ತೊತ್ತಟ್ಟಿಗೆ ಬೆಲೆಯುಳ್ಳ ವಸ್ತ್ರಗಳನ್ನು ಇಟ್ಟಿದ್ದರು. ಅವನ್ನು ನೋಡಿ, ಕಮಾಲಭಕ್ತನ ಮನಸ್ಸು ಬೇಸರಗೊಂಡಿತು. ಮುಂದೆ ಅನ್ನಸಾಮಗ್ರಿಯನ್ನು ಆತನು ನೋಡಿದನು. ಆಗ ಆ ಭಕ್ತಶ್ರೇಷ್ಠನ ಮನಸ್ಸು ಆನಂದಭರಿತವಾಯಿತು. ಆತನು ಅಕ್ಕಿ, ಬೇಳೆ, ಕಣಕ, ಬೆಲ್ಲ, ಸಕ್ಕರೆ ಮೊದಲಾದ ಸಾಹಿತ್ಯಗಳನ್ನು ತಕ್ಕೊಂಡು, ಗಂಟುಕಟ್ಟಿ ತಂದೆಯ ಕೈಯಲ್ಲಿ ಕೊಟ್ಟನು. ಇಂಗು, ಜೀರಿಗೆ, ಮೆಣಸು ಮುಂತಾದ ಮಸಾಲೆಯ ಸಾಮಾನುಗಳನ್ನು ತಂದೆಗೆ ಒಪ್ಪಿಸಿದನು. ಒಟ್ಟಿಗೆ ಸಂತರ ಭೋಜನಕ್ಕೆ ಬೇಕಾಗುವಷ್ಟೇ ಸಾಹಿತ್ಯವನ್ನು ಕಮಾಲಭಕ್ತನು ತಂದೆಗೆ ಮುಟ್ಟಿಸಿದನು. ನೀರಡಿಸಿದವನು ಭಾಗೀರಥಿಯ ಅಪಾರವಾದ ನೀರನ್ನು ನೋಡಿ ತನಗೆ ಬೇಕಾಗುವಷ್ಟು ನೀರುಕುಡಿದು ಹೊರಟು ಹೋಗುವಂತೆಯೂ, ಪಾತ್ರೆಯಲ್ಲಿ ಹೆಚ್ಚಾಗಿ ಬಡಿಸಿದ ಅನ್ನದಲ್ಲಿ ಹಸಿದವನು ಬೇಕಾದಷ್ಟು ಉಂಡು ಏಳುವಂತೆಯೂ, ವೈಷ್ಣವಭಕ್ತರು ಹರಿಕೀರ್ತನದೊಳಗಿನ ದೋಷಗಳನ್ನು ಬಿಟ್ಟುಕೊಟ್ಟು. ಗುಣಗಳನ್ನಷ್ಟು ಗ್ರಹಿಸುವಂತೆಯೂ ಕಮಾಲಭಕ್ತನು ಅಂಗಡಿಯೊಳಗಿನ ಅಪಾರವಾದ ಪದಾರ್ಥಸಂಗ್ರಹವನ್ನೂ, ಧನರಾಶಿಯನ್ನೂ ಕಣ್ಣೆತ್ತಿ ನೋಡದೆ, ಸಂತರ ಊಟಕ್ಕೆ ಬೇಕಾಗುವಷ್ಟು ಪದಾರ್ಥಗಳನ್ನು ತಂದೆಯ ಕೈಯಲ್ಲಿ ಕೊಟ್ಟು, ಹೊರಬೀಳಲಿಕ್ಕೆ ಸಿದ್ಧನಾದನು.

ಹೀಗೆ ಓಡಿಹೋಗಲು ಯತ್ನಿಸುವ ಕಮಾಲನ ಮನಸ್ಸಿನಲ್ಲಿ ಒಂದು ವಿಚಾ

ರವು ಉತ್ಪನ್ನವಾಯಿತು. ಈ ಅಂಗಡಿಕಾರನು ನಿಶ್ಚಿಂತೆಯಿಂದ ನಿದ್ದೆಹತ್ತಿ ಮಲಗಿರುವನು. ಈತನನ್ನು ಎಬ್ಬಿಸಿ ಹೋಗತಕ್ಕದ್ದು, ಎಂದು ಆತನು ನಿಶ್ಚಯಿಸಿದನು. ಮಲಗಿದ ವೈರಿಯನ್ನು ಕೊಲ್ಲುವವನೂ, ಮೋರೆಯ ಹಿಂದೆ ಸಿಕ್ಕಹಾಗೆ ನಿಂದಿಸುವವನೂ, ಯುದ್ಧದಲ್ಲಿ ಓಡುವವನ ಬೆನ್ನಟ್ಟಿ ಕೊಲ್ಲುವವನೂ, ನಿಶ್ಚಿಂತೆಯಿಂದ ಕಳವುಮಾಡುವವನೂ, ತುಂಬಿದ ಮನೆಗೆ ಬೆಂಕೆಹಚ್ಚುವವನೂ ನರಕಕ್ಕೆ ಗುರಿಯಾಗುವನು. ನಾನು ತಿಳವಳಿಕೆಯುಳ್ಳ ವಿಷ್ಣುಭಕ್ತನಿರುತ್ತೇನೆ. ಪಾಪ-ಪುಣ್ಯದ ವಿಚಾರವು ನನಗಿರುತ್ತದೆ. ಆದ್ದರಿಂದ ಈ ಅಂಗಡಿಕಾರನನ್ನು ಈಗ ಎಬ್ಬಿಸಿ ಓಡಿಹೋಗತಕ್ಕದ್ದು, ಎಂದು ಯೋಚಿಸಿ, ಕಮಾಲಭಕ್ತನು ಧೈರ್ಯದಿಂದ ಅಂಗಡಿಕಾರನ ಹತ್ತರ ಬಂದು—ಎಲೈ ಅಂಗಡಿಕಾರನೇ, ಏಳು, ಎಚ್ಚರಾಗು. ನಾವಿಬ್ಬರು ಕಳ್ಳರು ಹಿಂದಿನ ಮಗ್ಗಲು ನಿನ್ನ ಅಂಗಡಿಯನ್ನು ಒಡೆದು ಸಾಹಿತ್ಯಗಳನ್ನು ತಕ್ಕೊಂಡು ಹೋಗುತ್ತೇವೆ. ನಿನಗೆ ಗೊತ್ತಿರಲಿ, ಎಂದು ಒದರಿದನು. ಕೂಡಲೆ ಅಂಗಡಿಕಾರನು ಎದ್ದು ಕುಳಿತನು. ಕಮಾಲಭಕ್ತನು ಅವಸರದಿಂದ ಓಡಿ ಕನ್ನವನ್ನು ಹೊಕ್ಕನು. ಅಷ್ಟರಲ್ಲಿ ಅಂಗಡಿಕಾರನು ಓಡಿಹೋಗಿ, ಕಮಾಲನ ಎರಡೂ ಕಾಲುಗಳನ್ನು ಗಟ್ಟಿಯಾಗಿ ಹಿಡಕೊಂಡನು. ಚಿಗರಿಯು ಹಾರಿ ಬೇಟೆಗಾರನ ಬಲೆಯಲ್ಲಿ ಬೀಳುವಂತೆಯೂ, ನಲಿಕಾಯಂತ್ರದಲ್ಲಿ ಗಿಳಿಯು ಭ್ರಾಂತಿಯಿಂದ ಸಿಕ್ಕಿಕೊಳ್ಳುವಂತೆಯೂ, ಕಮಾಲಭಕ್ತನು ಅಂಗಡಿಕಾರನ ಕೈಯಲ್ಲಿ ಸಿಕ್ಕನು. ಆಗ ಕಮಾಲನು ತಂದೆಯನ್ನು ಕುರಿತು—ಅಪ್ಪಾ, ರಾಮಕಾರ್ಯಕ್ಕಾಗಿ ದ್ರೋಣಗಿರಿಯನ್ನು ಎತ್ತಿಕೊಂಡು ಬರುತ್ತಿರುವ ಹನುಮಂತನನ್ನು ಭರತನು ಕೆಡವಿದಂತೆ ನನ್ನ ಗತಿಯಾಯಿತು. ಈಗ ಅಂಗಡಿಕಾರನು ಪೇಟಿಯಲ್ಲಿ ನಿಂತು ಗದ್ದಲಮಾಡಿದನೆಂದರೆ ನೋಡುವದಕ್ಕಾಗಿ ಊರಜನವೆಲ್ಲ ಓಡಿ ಬಂದೀತು. ನಾವು ಇದೇ ಊರ ಕಳ್ಳರಾದ್ದರಿಂದ, ಊರೊಳಗಿನ ಹೆಣ್ಣು ಗಂಡು ನಮ್ಮ ಗುರುತು ಹಿಡಿಯುವದು; ಆದ್ದರಿಂದ ಬೇಗನೆ ನನ್ನ ಕುತ್ತಿಗೆಯನ್ನು ಕೊಯ್ದುಕೊಂಡು ಮನೆಗೆ ಹೋಗು. ಈಗ ಮಾಯಾಮಮತೆಗಳಿಗೆ ಒಳಗಾದರೆ, ಸತ್ವಹಾನಿಯಾದೀತು. ಕಳವಿನ ಸುದ್ದಿಯು ತಿಳಿದರೆ, ಸಂತರು ಮನೆಯಲ್ಲಿ ಕೂಡ್ರಲಿಕ್ಕಿಲ್ಲ. ಹಾದರಗಿತ್ತಿಯ ಮಾತು ಕಿವಿಗೆ ಬೀಳುತ್ತಲೆ, ಗರತಿಯು ಎದ್ದು ಹೋಗುವಂತೆಯೂ, ಮನೆಯಲ್ಲಿ ಮಾದಿಗರು ಬಂದದ್ದನ್ನು ನೋಡಿ ಶಾಸ್ತ್ರಬಲ್ಲ ಪಂಡಿತರು ಹೊರಟು ಹೋಗುವಂತೆಯೂ, ಗುರುವಿನ ನಿಂದೆಯನ್ನು ಕೇಳಿ ತಿಳಿದವರು ಎದ್ದು ಹೋಗುವಂತೆಯೂ, ನಮ್ಮ

ಕಳವಿನ ಸುದ್ದಿಯನ್ನು ಕೇಳಿ ಸಾಧುಸಂತರು ಎದ್ದು ಹೋಗುವರು; ಆದ್ದರಿಂದ ಎಲೈ ಶಾಂತಿಸಾಗರನೇ, ಸದ್ಗುಣಭರಿತನೇ, ವಿಷ್ಣುಭಕ್ತನೇ, ಮಾಯಾಮಮತೆಗಳನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟು, ನನ್ನ ಶಿರಸ್ಸನ್ನು ತುಂಡರಿಸು, ಎಂದು ಹೇಳಿದನು.

ಮಗನ ಮಾತುಗಳನ್ನು ಕೇಳಿ ಕಬೀರಭಕ್ತನು ಮನಸ್ಸಿನಲ್ಲಿ ಸಂತೋಷಪಟ್ಟು, ಕನ್ನಗತ್ತಿಯಿಂದ ಮಗನ ಕುತ್ತಿಗೆಯನ್ನು ಕೊಯ್ದುಕೊಂಡನು. ಕಬೀರಭಕ್ತನ ಧೈರ್ಯವನ್ನು ನೋಡಿದರೆ, ಮನಸ್ಸು ಕುಂಠಿತವಾಗುತ್ತದೆ. ಶ್ರೀಶಂಕರನು ಸಿರಿಯಾಳರಾಜನ ಮನೆಗೆ ಅತಿಥಿಯಾಗಿ ಬಂದು, ನರಮಾಂಸವನ್ನು ಬೇಡಿದಾಗ, ರಾಜನು ಮಗನ ಮಾಂಸವನ್ನು ಕೊಟ್ಟಂತೆ, ಕಬೀರಭಕ್ತನು ಸಂತರ ಭೋಜನಕ್ಕಾಗಿ ಮಗನ ಆಹುತಿ ಕೊಟ್ಟನು. ಕಬೀರಭಕ್ತನಿಗೆ ಈ ಸಿರಿಯಾಳರಾಜನ ಸಾಮ್ಯವೂ ಒಪ್ಪುವದಿಲ್ಲ; ಯಾಕಂದರೆ ಸಿರಿಯಾಳರಾಜನು ತನ್ನನ್ನು ಭೋಜನಕ್ಕಾಗಿ ಶಂಕರನು ಪೀಡಿಸಿದ್ದರಿಂದ ಮಗನ ಜೀವವನ್ನು ಕೊಟ್ಟನು. ಆದರೆ ಕಬೀರಭಕ್ತನ ಮಾತು ಹಾಗಲ್ಲ; ಸಂತರು ಊಟಕ್ಕೆ ಹಾಕೆಂದು ಕೇಳದಿದ್ದರೂ, ಆತನು ಅವರ ಭೋಜನಕ್ಕಾಗಿ ಮಗನ ಜೀವವನ್ನು ಕೊಟ್ಟನು. ಅಂದಬಳಿಕ ಕಬೀರಭಕ್ತನಿಗೆ ಯಾರನ್ನು ಹೋಲಿಸಬೇಕು? ಕಬೀರಭಕ್ತನನ್ನು ಹೋಲುವ ಭಕ್ತನು ಕಬೀರನೇ ಎಂದು ಹೇಳತಕ್ಕದ್ದು. ಮೂರು ಲೋಕಗಳಲ್ಲಿ ಹುಡುಕಿದರೂ ಅಂಥ ಭಕ್ತನು ದೊರೆಯಲಾರನು.

ಕಬೀರಭಕ್ತನು ಅನ್ನಸಾಮಗ್ರಿಗಳನ್ನು ತಕ್ಕೊಂಡು ಹೋಗಿ, ಮಗನ ತಲೆಯನ್ನು ಹೆಂಡತಿಯ ಕೈಯಲ್ಲಿ ಕೊಟ್ಟು, ನಡೆದ ವರ್ತಮಾನವನ್ನು ಹೇಳಿದನು. ಆಗ ಕಮಾಲನ ತಾಯಿಯು ಮೋಹದಿಂದ ಕಣ್ಣೀರು ಸುರಿಸುತ್ತ—ಕಂದಾ, ನೀನು ಸಂತರ ಸಲುವಾಗಿ ದೇಹವನ್ನು ಅರ್ಪಿಸಿದೆಯಾ? ಸಂಸಾರ ತೊರೆದು ಶ್ರೀರಾಮನನ್ನು ಹೊಂದಿ, ವಂಶವನ್ನು ಉದ್ಧರಿಸಿದೆಯಾ? ಧನ್ಯನು, ಎಂದು ನುಡಿದು ಧೈರ್ಯದಿಂದ ಮನಸ್ಸನ್ನು ಬಿಗಿಹಿಡಿದು, ಸಾಹಿತ್ಯಗಳನ್ನು ತಕ್ಕೊಂಡು ಹೋಗಿ, ಬಗೆಬಗೆಯ ಪಕ್ವಾನ್ನಗಳನ್ನು ಮಾಡಿ, ಸಂತರ ಭೋಜನ ಮಾಡಿಸಿದಳು. ಆ ಆ ಸಾಧ್ವಿಯು ಸಂತರ ಚರಣದರ್ಶನದಿಂದ ಅಂದಿನ ದಿನವನ್ನು ಸುದಿನವೆಂದು ಭಾವಿಸಿದಳು. ಕಬೀರನು ಬೇಗನೆ ಹುಲ್ಲಿನ ಹಾಸಿಗೆಯನ್ನು ಹಾಸಿ, ಸಂತರನ್ನು ಸೇವಿಸಿದನು. ಬೆಳಗಾಗುತ್ತಲೆ ಸಂತರು ಎದ್ದು, ಪ್ರಾತಃಸ್ಮರಣವನ್ನು ಮಾಡಿ, ಸ್ನಾನಕ್ಕಾಗಿ ಭಾಗೀರಥಿಗೆ ತೆರಳಿದರು.

ಇತ್ತ ಅಂಗಡಿಕಾರನು ಪೇಟಿಯಲ್ಲಿ ನಿಂತು ಶಂಖಧ್ವನಿಯನ್ನು ಮಾಡಿದನು. ಅದನ್ನು ಕೇಳಿ ಜನರು ನೆರೆದು, ಕಳ್ಳನ ಹತ್ತಿರ ಹೋಗಿ ನೋಡಿದರು. ಅವನ ತಲೆಯನ್ನು ಕೊಯ್ದುಕೊಂಡದ್ದರಿಂದ ಯಾರಿಗೂ ಅವನ ಗುರುತು ಸಿಗದಾಯಿತು. ಆಗ ಕೆಲವರು ಅಂಗಡಿಕಾರನಿಗೆ—ನಿನ್ನ ದೈವವು ನೆಟ್ಟಗಿತ್ತು. ಕಳ್ಳನು ಕಳ್ಳನ ಶಿರಸ್ಸನ್ನು ಕೊಯ್ದುಕೊಂಡು ಹೋದನು. ದೇವರು ನಿನ್ನನ್ನು ಕಾದನು. ನೀನು ದೊಡ್ಡ ಗಂಡಾಂತರದಿಂದ ಪಾರಾದೆ. ಹತ್ತಿರ ದುಡ್ಡು ಇದ್ದಾಗ ಒಬ್ಬನೇ ನಿದ್ದೆ ಹತ್ತಿ ಮಲಗಿಕೊಳ್ಳಬಾರದು. ದ್ರವ್ಯವಿದ್ದಲ್ಲಿ ಯಾವಾಗಲೂ ದೊಡ್ಡ ಅಂಜಿಕೆಯು ಇರುವದು. ದುಡ್ಡಿನ ಆಶೆಯಿಂದ ಒಡಹುಟ್ಟಿದ ಅಣ್ಣ-ತಮ್ಮಂದಿರೂ ವೈರಿಗಳಾಗುವರು. ದುಡ್ಡಿನಿಂದ ರಕ್ಷಣವೂ ಆಗುವದು, ಮರಣವೂ ಒದಗುವದು. ದ್ರವ್ಯದಿಂದ ಕಾರಾಗ್ರಹವಾಸವು ತಪ್ಪುವದು. ಆ ದ್ರವ್ಯದಿಂದಲೇ ಈಗ ಕಳ್ಳನಿಗೆ ಮರಣವು ಒದಗಿತು. ನೀನು ಸುದೈವದಿಂದ ಪಾರಾದೆ, ಎಂದರು. ಬೇರೆ ಕೆಲವರು, ಇವರು ಕಳ್ಳರಂತೆ ತೋರುವದಿಲ್ಲ, ಸಜ್ಜನರಿರುವರು. ಕಳ್ಳರಾಗಿದ್ದರೆ, ದ್ರವ್ಯವನ್ನೂ, ಬೆಲೆಯುಳ್ಳವಸ್ತ್ರಗಳನ್ನೂ ಬಿಟ್ಟು, ಅಲ್ಪ ಸ್ವಲ್ಪ ಊಟದ ಪದಾರ್ಥಗಳನ್ನಷ್ಟು ತಕ್ಕೊಂಡು ಹೋಗುವದುಂಟೇ? ಇದು ಆಶ್ಚರ್ಯಕಾರಕವಾಗಿ ತೋರುತ್ತದೆ, ಎಂದು ನುಡಿದರು. ಈ ಮೇರೆಗೆ ತ್ರಿವಿಧಜನರು ತಮ್ಮ ಮನಸಿಗೆ ಬಂದಂತೆ ಮಾತಾಡಿಕೊಳ್ಳುತ್ತಿರಲು, ಅಂಗಡಿಕಾರನು ತನ್ನ ಅಂಗಡಿಯಲ್ಲಿ ಕಳವಾದದ್ದಕ್ಕಾಗಿ ಅರಸನ ಬಳಿಯಲ್ಲಿ ಫಿರ್ಯಾದಿಯನ್ನು ಕೊಟ್ಟನು. ತನ್ನ ಅಂಗಡಿಯನ್ನು ಇಬ್ಬರು ಕಳ್ಳರು ಒಡೆದು, ಊಟದ ಪದಾರ್ಥಗಳನ್ನು ಸ್ವಲ್ಪಮಟ್ಟಿಗೆ ಒಯ್ದರೆಂತಲೂ, ತಾನು ಕನ್ನದೊಳಗಿಂದ ಓಡಿ ಹೋಗುವ ಒಬ್ಬ ಕಳ್ಳನ ಕಾಲುಗಳನ್ನು ಹಿಡಕೊಳ್ಳಲು, ಇನ್ನೊಬ್ಬ ಕಳ್ಳನು ಅವನ ತಲೆಯನ್ನು ಕೊಯ್ದುಕೊಂಡು ಹೋದನೆಂತಲೂ ದೂರಿಕೊಂಡನು. ಇದನ್ನು ಕೇಳಿ ಜನರು ನಕ್ಕರು. ಅರಸನು ಸಿಟ್ಟಿಗೆದ್ದು, ತಲೆಯಿಲ್ಲದ ದಿಂಡವನ್ನೇ ಶೂಲಕ್ಕೇರಿಸಬೇಕೆಂದು ದೂತರಿಗೆ ಅಪ್ಪಣೆಮಾಡಿದನು. ಅದರಂತೆ ಸೇವಕರು ಕಮಾಲನ ದಡವನ್ನು ಶೂಲಕ್ಕೇರಿಸಿದರು. ಹೆಣವನ್ನು ಶೂಲಕ್ಕೇರಿಸುವದೂ, ತಿಳಿಗೇಡಿಯ ಸಂಗಡ ವಾದಿಸುವದೂ, ಪರದೇಶದಲ್ಲಿ ಜಗಳವಾಡುವದೂ ದುರ್ಲಕ್ಷಣವೆಂದು ತಿಳಿಯಬೇಕು.

ಇತ್ತ ಭಾಗೀರಥಿಗೆ ಸ್ನಾನಕ್ಕಾಗಿ ಹೋದ ಸಂತರು, ಸ್ನಾನವನ್ನು ತೀರಿಸಿಕೊಂಡು, ದೇವರ ಪೂಜೆಯನ್ನು ಮಾಡಿ ಕಬೀರನ ಆಶ್ರಮಕ್ಕೆ ಬಂದರು. ಆ

ತೀರ್ಥವಾಸಿಗಳು ಕಬೀರನ ಅನುಮತಿಯನ್ನು ಪಡೆದು ಮುಂದಕ್ಕೆ ಸಾಗಿದರು. ಕಬೀರನು ಅವರಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಅವರನ್ನು ಕಳಿಸುತ್ತ ಸಾಗಿದನು. ಆಗ ಕಬೀರನ ಹೆಂಡತಿಯು ಸಂತರಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಕಣ್ಣೀರು ಸುರಿಸುತ್ತ. "ಸ್ವಾಮಿಯವರ ಚರಣಗಳು ಎಂದು ಕಣ್ಣಿಗೆ ಬೀಳುವವೋ" ಎಂದು ವಿನಯದಿಂದ ಮಾತಾಡುತ್ತ ಸಂತರನ್ನು ಕಳಿಸುತ್ತ ಸಾಗಿದಳು. ಹೀಗೆ ಗಂಡ-ಹೆಂಡಿರು ಸಂತರನ್ನು ಕಳಿಸುತ್ತ ಊರ ಹೊರಗೆ ಬರಲು, ಒಂದು ಚಮತ್ಕಾರದ ಸಂಗತಿಯು ಒದಗಿತು. ತ್ವರೆಯಿಂದ ಸಾಗಿದ್ದ ಸಂತರು, ತಲೆಯಿಲ್ಲದ ಶರೀರವನ್ನು ಶೂಲಕ್ಕೇರಿಸಿದ್ದನ್ನು ಕ್ಷಣಹೊತ್ತು ನೋಡುತ್ತ ನಿಂತುಕೊಂಡರು. ಆಗ ಕಮಾಲನು ಎರಡೂ ಕೈಗಳನ್ನು ಜೋಡಿಸಿ, ಸಂತರನ್ನು ನಮಸ್ಕರಿಸಿದನು. ಈ ವಿಪರೀತವನ್ನು ನೋಡಿ ಹೆಂಗಸರೂ, ಗಂಡಸರೂ ಬಹಳ ಆಶ್ಚರ್ಯಪಟ್ಟರು. ಸಂತರು ಕಬೀರನನ್ನು ಕುರಿತು—ಈ ಶವವು ನಮ್ಮನ್ನು ನಮಸ್ಕರಿಸುತ್ತದಲ್ಲ! ತಲೆಯಿಲ್ಲದೆ ದೇಹದಲ್ಲಿ ಪ್ರಾಣವು ಹ್ಯಾಗೆ ನಿಂತಿತು? ಗಿಡವನ್ನು ಕಡಿದ ಬಳಿಕ ಟೊಂಗೆಗಳು ಬಾಡದಿರುವದೂ, ರೆಕ್ಕೆ ಕಿತ್ತಿದ ಹಕ್ಕಿಗಳು ಆಕಾಶದಲ್ಲಿ ಹಾರುವದೂ, ತಂತಿಯು ಹರಿದುಹೋಗಿದ್ದ ವೀಣೆಯು ಬಾರಿಸುವದೂ ಸಂಭವವಿರುವದೇ? ಎಂದು ಕೇಳಲು, ಕಬೀರಭಕ್ತನು ಕೈಜೋಡಿಸಿ ಸಂತರನ್ನು ಕುರಿತು—ಸ್ವಾಮಿ, ಭೀಷ್ಮರು ಶರಪಂಜರದಲ್ಲಿ ಮಲಗಿದರೂ ಪ್ರಾಣವನ್ನು ರಕ್ಷಿಸಿಕೊಳ್ಳಲಿಲ್ಲವೇ? ಯುದ್ಧದಲ್ಲಿ ಬಿದ್ದಿದ್ದ ಅಭಿಮನ್ಯುವು ಅರ್ಜುನನಿಗೆ ತನ್ನ ದುಃಖವನ್ನು ಹೇಳಿಕೊಳ್ಳುವದಕ್ಕಾಗಿ ಧೈರ್ಯದಿಂದ ದೇಹದಲ್ಲಿ ಪ್ರಾಣವನ್ನು ರಕ್ಷಿಸಿಕೊಳ್ಳಲಿಲ್ಲವೇ? ರಾವಣನ ಪೆಟ್ಟಿನಿಂದ ದುಃಖಪಟ್ಟಿದ್ದ ಜಟಾಯು ಪಕ್ಷಿಯು, ರಾಮ ದರ್ಶನದ ಆಶೆಯಿಂದ ಜೀವವನ್ನು ರಕ್ಷಿಸಿಕೊಳ್ಳಲಿಲ್ಲವೇ? ಅದರಂತೆ ಈ ವೈಷ್ಣವ ಕಳ್ಳನು, ಸಂತರಾದ ತಮ್ಮ ಚರಣಕ್ಕೆ ವಂದಿಸಬೇಕೆಂಬ ಆಶೆಯನ್ನು ಹಿಡಿದು ಜೀವವನ್ನು ಬಿಡದೆ ಇರುವನು. ಈಗ ನಿಮ್ಮ ಚರಣ ದರ್ಶನವಾದ್ದರಿಂದ ಮನೋರಥವು ಪೂರ್ಣವಾಗಲು, ಆ ಭಗವದ್ಭಕ್ತನು ತನ್ನ ನಶ್ವರ ದೇಹವನ್ನು ಬಿಟ್ಟು, ಅಕ್ಷಯವಾದ ಪದವಿಯನ್ನು ಹೊಂದುವನು.

ಕಬೀರನ ಈ ಮಾತುಗಳನ್ನು ಕೇಳಿ ಸಂತರು—ಕಬೀರಾ, ಆ ಕಳ್ಳನು ಯಾವನಿದ್ದಾನು? ಎಂದು ಕೇಳಲು, ಕಬೀರನು ಎಲ್ಲ ವರ್ತಮಾನವನ್ನು ಸಂತರಿಗೆ ಹೇಳಿದನು. ಅದನ್ನು ಕೇಳಿ ಸಂತರು—ನಾವು ಊಟಕ್ಕೆ ಹಾಕಿರೆಂದು ಹೇಳದಿದ್ದರೂ, ನೀವು ಈ ಸುಕುಮಾರನನ್ನು ಹ್ಯಾಗೆ ಕೊಂದಿರಿ? ಎಂದು ಕೇಳ

ಲಾಗಿ ಕಬೀರನು—ಸಾಧುವರ್ಯರೇ, ಈ ಸಂಸಾರವು ನಾಶವನ್ನು ಹೊಂದ ತಕ್ಕಂಥಾದ್ದು. ಕಣ್ಣಿಗೆ ಕಾಣುವದೆಲ್ಲ ನಾಶವಾಗತಕ್ಕದ್ದೇ. ಇಂದು ಕಮಾಲ ನನ್ನು ಕೊಲ್ಲದಿದ್ದರೆ, ಅವನು ಅಮರನಾಗುತ್ತಿದ್ದನೇ? ಎಂದು ಕೇಳಿದನು. ಕಬೀ ರನ ಈ ಮಾತುಗಳನ್ನು ಕೇಳಿ, ಸಂತರಿಗೆ ದಯವು ಉತ್ಪನ್ನವಾಯಿತು. ಅವರು ಕಬೀರನ ಹೆಂಡತಿಗೆ ಆ ತಲೆಯೆಲ್ಲಿದೆ? ತಂದು ತೋರಿಸೆಂದರು. ಸಂತರ ಈ ಮಾತುಗಳನ್ನು ಕೇಳಿದ ಕೂಡಲೆ ಕಬೀರಪತ್ನಿಯು ಅವಸರದಿಂದ ಮನೆಗೆ ಹೋಗಿ ತಲೆಯನ್ನು ತಕ್ಕೊಂಡು, ಸಂತರ ಬಳಿಗೆ ಬಂದಳು. ಆ ತಲೆಯನ್ನು ನೋಡಿ ಸಂತರ ಕಂಠಗಳು ಸದ್ಗದಿತವಾದವು. ಆ ದಯಾಸಾಗರರು ಶೂಲದಿಂದ ದಡ ವನ್ನು ಇಳಿಸಿಕೊಂಡು, ಅದಕ್ಕೆ ಕುತ್ತಿಗೆಯನ್ನು ಜೋಡಿಸಿದರು. ನರ-ನಾರೀ ಜನರು ಕೌತುಕವನ್ನು ನೋಡುತ್ತಿರಲು, ಸಂತರು ವರದ ಹಸ್ತವನ್ನು ಕಮಾ ಲನ ತಲೆಯ ಮೇಲೆ ಇಟ್ಟರು. ಕೂಡಲೆ ಕಮಾಲಭಕ್ತನು ಎದ್ದು, ಸಂತರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಇದನ್ನು ನೋಡಿ. ಕಾಶಿಯ ಜನರು ಕಬೀರನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಜ್ಞಾನವಂತನಾದ ಈ ವೈಷ್ಣ ವನು ಜಡಜೀವರನ್ನು ಉದ್ಧರಿಸುವನೆಂದು ಸ್ತೋತ್ರ ಮಾಡಿದರು. ಇತ್ತ ಸಂತರು ವರಗಳನ್ನು ಕೊಟ್ಟು ತೀರ್ಥಯಾತ್ರೆಗೆ ತೆರಳಿದರು.

ಒಂದಾನೊಂದು ದಿನ ಕಬೀರದಾಸನು ರಾತ್ರಿಯಲ್ಲಿ ರಾಮಭಜನೆಯನ್ನು ಮಾಡುತ್ತ ಪೇಟೆಗೆ ಹೋದನು. ಕೈಯಲ್ಲಿ ವೀಣೆಯನ್ನು ತಕ್ಕೊಂಡು ಮನಸ್ಸಿ ನಲ್ಲಿ ಶ್ರೀ ರಾಮಮೂರ್ತಿಯನ್ನು ಧ್ಯಾನಿಸುತ್ತ, ಪ್ರೀತಿಯಿಂದ ಗಾಯನಮಾಡು ತ್ತಿದ್ದನು. ದುರಾಶೆಯನ್ನೂ, ಅಹಂಭಾವವನ್ನೂ, ಮಾನಾಪಮಾನಗಳನ್ನೂ, ಮಾಯಾ-ಮೋಹಗಳನ್ನೂ ತೊರೆದು ಆತನು ರಾಮನನ್ನು ಚಿಂತಿಸುತ್ತಿದ್ದನು. ಅಲ್ಲಿ ಒಬ್ಬ ವ್ಯಾಪಾರಸ್ಥನ ಹೆಂಡತಿಯು ಬೀಸುತ್ತ ಕುಳಿತಿದ್ದಳು. ಅದನ್ನು ನೋಡಿ ಕಬೀರಭಕ್ತನ ಮನಸ್ಸು ಕರಗಿತು. ಆತನು ದೊಡ್ಡ ದನಿಯಿಂದ ಅಳತೊಡಗಿ ದನು. ಅದನ್ನು ನೋಡಿ ಜನರಿಗೆ ಆಶ್ಚರ್ಯವಾಯಿತು. ಕಬೀರನಿಗೆ ಹುಚ್ಚು ಹಿಡಿಯಿತೆಂದು ಗಂಡು ಹೆಣ್ಣು ನಗತೊಡಗಿತು. ಅವರಲ್ಲಿ ಒಬ್ಬನು ಕಬೀರ ನನ್ನು ಕುರಿತು—ಏನಯ್ಯಾ ನೀನು ಯಾಕೆ ಅಳುತ್ತೀ? ನಿನ್ನನ್ನು ಯಾರು ಪೀಡಿ ಸಿದರು? ಆದದ್ದಾದರೂ ಏನು? ಎಂದು ಕೇಳಿದನು. ಅದಕ್ಕೆ ಕಬೀರನು ಉತ್ತರವನ್ನೇ ಕೊಡಲಿಲ್ಲ. ಇಂಥವರ ಮುಂದೆ ಹೇಳಿದರೆ, ತನ್ನ ದುಃಖದ ನಿವಾ ರಣವು ಆಗಲಾರದೆಂದು ಆತನು ತಿಳಿದನು. ದುಃಖದಲ್ಲಿ ಮುಣುಗಿದವರು ಮುಂದಿ

ಯ ದುಃಖವನ್ನು ದೂರಮಾಡುವ ಬಗೆಯೇನು? ಮಂದಿಯು ದುಃಖವನ್ನು ಕೇಳಿ ಅವರಿಗೆ ಮತ್ತಿಷ್ಟು ಸಂತಾಪವೇ ಆಗುವದು, ಎಂದು ಯೋಚಿಸಿ ಆ ಕಬೀರ ಭಕ್ತನು ಉತ್ತರಕೊಡದೆ ಸುಮ್ಮನೆ ಕುಳಿತುಕೊಂಡನು. ಮಾಯಾ ಲೋಭ ಗಳಿಗೆ ಒಳಗಾದ ಜನರು ತಮ್ಮ ಮನಸ್ಸಿಗೆ ಬಂದಂತೆ ಮಾತಾಡಿಕೊಳ್ಳತೊಡಗಿ ದರು. ಕಬೀರನಿಗೆ ಹುಚ್ಚು ಹಿಡಿದಿರುವದರಿಂದ ಆತನು ಪೇಟಿಯಲ್ಲಿ ನಿಂತು ಕೊಂಡು ಅಳುತ್ತಿರುವನೆಂದು ನುಡಿದರು.

ಅಷ್ಟರಲ್ಲಿ ನಿಪಟನಿರಂಜನನೆಂಬ ಸತ್ಪುರುಷನು ಆಕಸ್ಮಾತ್ತಾಗಿ ಅಲ್ಲಿಗೆ ಬಂದನು. ಆತನು ಕಬೀರನನ್ನು ಕುರಿತು—ಕಬೀರಾ, ಹೀಗೆ ಯಾಕೆ ಅಳುತ್ತೀ, ಎಂದು ಕೇಳಿದನು. ಆಗ ಕಬೀರನು ಕಣ್ದೆರೆದು ನೋಡಲು, ಜ್ಞಾನಸಾಗರನು ಎದುರಿಗೆ ನಿಂತುಕೊಂಡಿದ್ದನು. ಆಗ ಕಬೀರನಿಗೆ ಧೈರ್ಯವಾಯಿತು. ಈ ಸತ್ಪು ರುಷನ ಮುಂದೆ ಹೇಳಿದರೆ, ಏನಾದರೂ ತನ್ನ ದುಃಖನಿವಾರಣೆ ಮಾಡಿಯಾ ನೆಂದು ಆತನು ತಿಳಿದನು. ಒಳ್ಳೆಯ ವೈದ್ಯನ ಮುಂದೆ ತನ್ನ ರೋಗದ ವ್ಯಥೆ ಯನ್ನು ಹೇಳುವದಕ್ಕೆ ರೋಗಿಯು ಉಲ್ಲಾಸಪಡುವಂತೆಯೂ, ಅತ್ತೆಯುಮನೆಯ ದುಃಖವನ್ನು ತಾಯಿಯ ಮುಂದೆ ಹೇಳುವಾಗ ಮಗಳು ಸಂಶಯವನ್ನು ಬಿಡು ವಂತೆಯೂ, ಕಬೀರಭಕ್ತನು ಉಲ್ಲಾಸಬಟ್ಟು, ನಿಃಶಂಕೆಯಿಂದ, ಶಿಷ್ಯನು ಸದ್ಗು ರುವಿನ ಮುಂದೆ ಹೇಳುವಂತೆ ತನ್ನ ಸಂಶಯವನ್ನು ನಿಪಟನಿರಂಜನನ ಮುಂದೆ ಹೀಗೆ ಹೇಳಿದನು—ಎಲೈ ಸದ್ಗುರುನಾಥನೇ, ಈಗಿನ ಕಾಲದಲ್ಲಿ ನನಗೆ ಬಹಳ ಪಶ್ಚಾತ್ತಾಪವಾಗಿದೆ. ಕೃಪೆಮಾಡಿ ನನ್ನ ದುಃಖವನ್ನು ನೀನು ಕೇಳುತ್ತಿರುವದ ರಿಂದ ಹೇಳುವೆನು ಕೇಳು. ಈ ತಿರುಗುವ ಬೀಸುವ ಕಲ್ಲಿನಲ್ಲಿ ಸಿಕ್ಕಿಕೊಂಡಿದ್ದ ಕಾಳುಗಳು ಹಿಟ್ಟಾಗುವಂತೆ, ಭವಚಕ್ರದಲ್ಲಿ ಸಿಕ್ಕಿಕೊಂಡಿರುವ ನನ್ನ ಗತಿಯು ಆಗುವದೆಂದು ನಾನು ಬಹಳವಾಗಿ ಭಯಪಟ್ಟಿದ್ದೇನೆ. ಈ ಭಯಕ್ಕಾಗಿಯೇ ನಾನು ದೊಡ್ಡ ದನಿಯಿಂದ ಅಳುತ್ತಿದ್ದೆನು. ನಿನ್ನ ಹೊರತು ಈ ನನ್ನ ದುಃಖ ವನ್ನು ದೂರ ಮಾಡುವವರು ಯಾರೂ ಇಲ್ಲವು.

ಕಬೀರನ ಈ ಮಾತುಗಳನ್ನು ಕೇಳಿ ನಿಪಟನಿರಂಜನನು—ಎಲೈ ಕಬೀ ರನೇ, ವ್ಯರ್ಥವಾಗಿ ಶೋಕವನ್ನು ಯಾಕೆ ಮಾಡುತ್ತೀ? ಈ ತಿರುಗುತ್ತಿರುವ ಬೀಸುವಕಲ್ಲನ್ನು ನೋಡಿ ಪಶ್ಚಾತ್ತಾಪಪಟ್ಟ ನೀನು, ಅದೇ ಬೀಸುವಕಲ್ಲನ್ನೇ ಲಕ್ಷಗೊಟ್ಟು ನೋಡು. ಅಂದರೆ ನಿನಗೆ ಸಮಾಧಾನವಾಗುವದು. ಆಧಾರ ವನ್ನು ಬಿಟ್ಟು ಭ್ರಮಿಸುವ ಕಾಳುಗಳು ಬೀಸುವಕಲ್ಲಿನಲ್ಲಿ ಹಿಟ್ಟಾದರೂ, ಕಲ್ಲಿನ

ಮಧ್ಯದಲ್ಲಿರುವ ಗೂಟದ ಹತ್ತಿರ ಬಿದ್ದಿರುವ ಕಾಳುಗಳು ಹಿಟ್ಟಾಗದಿರುವದನ್ನು ಮನಸ್ಸಿನಲ್ಲಿ ತಂದುಕೋ. ಇದರಂತೆ ರಾಮನನ್ನು ನಂಬಿ ಭಜಿಸುವವರಿಗೆ ಭವ ಚಕ್ರದ ಬಾಧೆಯು ಇಲ್ಲವು. ನೀನಂತು ಸತ್ವಶಾಲಿಯೂ, ಧೀರನೂ, ವೈರಾಗ್ಯ ಶಾಲಿಯೂ, ಶಾಂತಿಕ್ಷಮೆಗಳ ಪರ್ವತವೂ ಆಗಿರುತ್ತೀ. ನಿನ್ನಂಥ ರಾಮಭಕ್ತ ನಿಗೆ ಭಯವೆಲ್ಲಿಯದು? ಸ್ವಪ್ನದಲ್ಲಿಯ ದುಃಖವನ್ನು ಸ್ಮರಿಸಿ ವ್ಯರ್ಥವಾಗಿ ಯಾಕೆ ಶೋಕಮಾಡುತ್ತೀ? ಎನ್ನಲು, ಈ ಮಾತುಗಳನ್ನು ಕೇಳಿ ಕಬೀರನಿಗೆ ಸಮಾ ಧಾನವಾಯಿತು. ಬಳಿಕ ಆಉಭಯ ವೈಷ್ಣವವೀರರು ಪ್ರೇಮದಿಂದ ಒಬ್ಬರ ನ್ನೊಬ್ಬರು ಆಲಿಂಗಿಸಿದರು. ಪ್ರೀತಿಯಿಂದ ಒಬ್ಬರಿಗೊಬ್ಬರು ನಮಸ್ಕಾರ ಮಾಡಿದರು. ಬಳಿಕ ಕಬೀರನು ಬೇಗನೆ ತನ್ನ ಆಶ್ರಮಕ್ಕೆ ಬಂದನು. ದಿನಾಲು ಆತನು ಹೊಸ ಹೊಸ ಪದ್ಯಗಳನ್ನು ರಚಿಸಿ, ಶ್ರೀಹರಿಯ ಗುಣಗಳನ್ನು ವರ್ಣಿಸು ತ್ತಿದ್ದನು; ಮತ್ತು ಆನಂದಭರಿತನಾಗಿ ದಿನಾಲು ಪ್ರೇಮದಿಂದ ಹರಿಕೀರ್ತನ ಮಾಡುತ್ತಿದ್ದನು.

ಹೀಗಿರಲು, ಒಂದಾನೊಂದು ದಿವಸ ಕಬೀರನು ತನ್ನೊಳಗೆ—ಈ ಸಂಸಾ ರದಲ್ಲಿ ಸದ್ಗುರುವನ್ನು ಸಂಪಾದಿಸದ ಮನುಷ್ಯನು ಹೆಣದಂತೆ ಇರುವನೆಂದು ಹೇಳತಕ್ಕದ್ದು, ಹೆಂಡತಿಯಿಲ್ಲದೆ ಪ್ರಪಂಚ ಮಾಡುವದೂ, ಕುಂಕುಮವಿಲ್ಲದೆ ಅಲಂಕಾರಗಳನ್ನು ಇಟ್ಟುಕೊಳ್ಳುವದೂ, ಉಪ್ಪು ಹಾಕದೆ ಅಡಿಗೆಯನ್ನು ಮಾಡು ವದೂ, ಪ್ರೇಮವಿಲ್ಲದೆ ಕೀರ್ತನ ಮಾಡುವದೂ, ಭೂತದಯೆಯಿಲ್ಲದೆ ಜ್ಞಾನ ವನ್ನು ಸಂಪಾದಿಸುವದೂ, ಪಶ್ಚಾತ್ತಾಪವಿಲ್ಲದೆ ಸಂನ್ಯಾಸವನ್ನು ಗ್ರಹಿಸುವದೂ, ಶಾಂತಿಯಿಲ್ಲದೆ ಮಹಾಪುರುಷನೆನಿಸಿಕೊಳ್ಳುವದೂ ವ್ಯರ್ಥವಾಗಿರುವಂತೆ, ಸದ್ಗು ರುವಿಲ್ಲದವನು ಮನುಷ್ಯನಾಗಿ ಹುಟ್ಟುವದು ವ್ಯರ್ಥವೇ ಸರಿ. ಅವನು ಪ್ರಯೋ ಜನವಿಲ್ಲದೆ ಎಡತಾಕಿದಂತೆ ಮಾತ್ರ ಆಗುವದು, ಎಂದು ವಿಚಾರಿಸಿ ನಾನು ರಾಮಾ ನಂದನೆಂಬ ಯತಿಗೆ ಸದ್ಭಾವದಿಂದ ಶರಣುಹೋಗತಕ್ಕದ್ದು, ಎಂದು ಮನಸ್ಸಿನಲ್ಲಿ ನಿಶ್ಚಯಿಸಿದನು. ಸ್ವಯಂವರದಲ್ಲಿ ಬಂದಿದ್ದ ಅನೇಕ ರಾಜರನ್ನು ನೋಡಿ, ವಿಚಾರ ಮಾಡುತ್ತಿದ್ದ ಜಾನಕಿಯು ರಾಮಚಂದ್ರನನ್ನು ನೋಡಿದ ಕೂಡಲೆ ಪ್ರೀತಿಯಿಂದ ಮಾಲೆ ಹಾಕಿದಂತೆ, ಉಪಾಸನೆಯಿಂದ ಪ್ರಬುದ್ಧನಾದ ಕಬೀರನು, ರಾಮಾ ನಂದನ ಚರಣಗಳನ್ನು ನೋಡಿ, ಚರಣಧೂಳಿಯಲ್ಲಿ ಆಶೆಯನ್ನು ಇಟ್ಟನು.

ಒಂದುದಿನ ಕಬೀರನು ಏಕಾಂತಸಮಯವನ್ನು ನೋಡಿ, ರಾಮಾನಂದನ ಆಶ್ರಮಕ್ಕೆ ಹೋದನು. ಆತನು ದೂರದಿಂದ ಶ್ರೀಗುರುಚರಣಕ್ಕೆ ಸಾಷ್ಟಾಂಗ

ನಮಸ್ಕಾರ ಮಾಡಿ, ದೂರಲ್ಲಿ ನಿಂತುಕೊಂಡು—ಸಮರ್ಥನೇ, ನನ್ನಮೇಲೆ ಕೃಪೆ ಮಾಡಬೇಕೆಂದು ಬೇಡಿಕೊಂಡನು. ಅದನ್ನು ಕೇಳಿ ರಾಮಾನಂದಸ್ವಾಮಿಗಳು, ಕಿವಿಯೊಳಗೆ ಬೊಟ್ಟು ಹಾಕಿಕೊಂಡು. ಆಶ್ರಮವನ್ನು ಹೊಕ್ಕು, ಏಕಾಂತದಲ್ಲಿರುವ ಆಸನದ ಮೇಲೆ ಕುಳಿತುಕೊಂಡರು. ಇತ್ತ ಕಬೀರನು ವಿನಯದಿಂದ—ಸ್ವಾಮಿಾ, ದೀನನಾದ ಅನಾಥನು ಹೊರಗೆ ನಿಂತುಕೊಂಡಿದ್ದೇನೆ, ಅಭಯವನ್ನು ಕೊಟ್ಟು ಸಂತೋಷಗೊಳಿಸಬೇಕು, ಎಂದು ಪ್ರಾರ್ಥಿಸಿದನು. ಅದಕ್ಕೆ ರಾಮಾನಂದಸ್ವಾಮಿಗಳು—ನೀನು ಮುಸಲ್ಮಾನನ ವಂಶದಲ್ಲಿ ಹುಟ್ಟಿರುತ್ತೀ. ನಿನಗೆ ಉಪದೇಶಕೊಡುವ ಅಧಿಕಾರವು ನಮಗೆ ಎಷ್ಟು ಮಾತ್ರವೂ ಇರುವದಿಲ್ಲ. ಭೂಮಿಯನ್ನು ಪರೀಕ್ಷಿಸಿ ಬೀಜಬಿತ್ತುವದೂ, ಸತ್ಪಾತ್ರವನ್ನು ನೋಡಿ ದಾನ ಮಾಡುವದೂ, ಉತ್ತಮ ವರನನ್ನು ನೋಡಿ ಕನ್ಯೆಯನ್ನು ಕೊಡುವದೂ ಎಲ್ಲರೂ ಬಲ್ಲರು, ಎನ್ನಲು ಕಬೀರನು—ಸ್ವಾಮಿಾ, ನನ್ನ ಮನಸ್ಸು ತಮ್ಮ ಚರಣದಲ್ಲಿ ನಟ್ಟಿರುವದು. ಶರೀರದಿಂದಲೂ, ಮಾತಿನಿಂದಲೂ, ಮನಸ್ಸಿನಿಂದಲೂ ತಮ್ಮ ಚರಣವನ್ನೇ ಹೊಂದಿರುವೆನು. ಈ ಮಾತಿನಲ್ಲಿ ಎಷ್ಟು ಮಾತ್ರವೂ ವಂಚನೆಯಿಲ್ಲವು, ಎಂದು ಹೇಳಿ ಪುನಃ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಮನಸ್ಸಿನಲ್ಲಿ ಅನನ್ಯವಾದ ಪ್ರೇಮವನ್ನು ತಾಳಿ ಆಶ್ರಮಕ್ಕೆ ತೆರಳಿದನು.

ಒಂದಾನೊಂದು ದಿನ ಕಬೀರನು ಏಕಾಂತದಲ್ಲಿ ಕುಳಿತು ಮನಸ್ಸಿನಲ್ಲಿ—ನಾನು ಯಾವದೊಂದು ಉಪಾಯದಿಂದ ಶ್ರೀ ಗುರುವಿನ ಪಾದಧೂಳಿಯು ಶರೀರಕ್ಕೆ ಸ್ಪರ್ಶವಾಗುವಂತೆಯೂ, ಶ್ರೀ ಗುರುಮುಖದಿಂದ ರಾಮನಾಮವು ಕಿವಿಗೆ ಬೀಳುವಂತೆಯೂ ಮಾಡಬೇಕೆಂದು ಯೋಚಿಸಿ, ಹಾದಿಯಲ್ಲಿ ಸ್ವಲ್ಪ ತಗ್ಗು ತೋಡಿ ಅದರಲ್ಲಿ ಮಲಗಿಕೊಂಡನು. ಹಸಿದ ಕೂಸು ತಾಯಿಯ ಹಾದಿಯನ್ನು ನೋಡುವಂತೆಯೂ, ಮಳೆಯು ಸೆಳೆದಾಗ ಜನರು ಮೋಡದ ಹಾದಿಯನ್ನು ನೋಡುವಂತೆಯೂ, ಕಬೀರನು ಗುರುವಾದ ರಾಮಾನಂದನ ಹಾದಿಯನ್ನು ನೋಡುತ್ತಿದ್ದನು. ಬೆಳಗಿನ ನಾಲ್ಕು ಗಳಿಗೆ ರಾತ್ರಿಯಿರುವಾಗ, ರಾಮಾನಂದರು ಗಂಗಾಸ್ನಾನಕ್ಕಾಗಿ ಹೊರಟರು. ಅವರು ವೇಗದಿಂದ ಹೋಗುವಾಗ ಹಾದಿಯಲ್ಲಿ ಮಲಗಿಕೊಂಡಿದ್ದ ಕಬೀರಭಕ್ತನಿಗೆ ಅವರ ಕಾಲು ತಾಕಿತು. ಕೂಡಲೆ ಅವರು "ರಾಮ ರಾಮ! ನನ್ನ ಕಾಲು ಯಾರಿಗೆ ತಾಕಿತು," ಎಂದು ನುಡಿದರು. ಶ್ರೀ ಗುರುವಿನ ಈ ವಚನವನ್ನು ಕೇಳಿದ ಕೂಡಲೆ ಕಬೀರಭಕ್ತನು ಎದ್ದು ನಿಂತು—ಸ್ವಾಮಿಾ [illegible] ನನ್ನ ಮೇಲೆ [illegible] ಕೃಪೆ ಮಾಡಿದಿರಿ. ಸ್ವಾಭಾವಿಕವಾಗಿ

ನನ್ನ ಹಣೆಗೆ ಚರಣಸ್ಪರ್ಶವಾಯಿತು! ರಾಮನಾಮ ಮಂತ್ರದ ಶ್ರವಣವಾಯಿತು!! ನನ್ನಂಥ ಭಾಗ್ಯವಂತನು ಮೂರು ಲೋಕಗಳಲ್ಲಿ ಯಾವನೂ ಇಲ್ಲ. ಅನಂತಜನ್ಮ ಗಳಲ್ಲಿ ಮಾಡಿದ ಪುಣ್ಯವು ಇಂದು ಫಲಿಸಿತು! ಸದ್ಗುರುಚರಣಸ್ಪರ್ಶವಾದದ್ದರಿಂದ ಇಂದಿಗೆ ನನ್ನ ಜನ್ಮಮರಣೋಪಾಧಿಯು ಕತ್ತರಿಸಿತು. ದೈವಸಹಾಯವಾಗು ತ್ತಲೆ ಉಸುಕು ದಿವ್ಯ ರತ್ನವಾಗುವಂತೆಯೂ, ಬಾವಿಯೊಳಗಿನ ಉಪ್ಪುನೀರು ಅಮೃತಸಮಾನವಾಗುವಂತೆಯೂ ಶ್ರೀ ಗುರುಚರಣಸ್ಪರ್ಶದಿಂದ ನಾನು ಧನ್ಯ ನಾದೆನು, ಎಂದು ನುಡಿದು, ಆ ಕಬೀರಭಕ್ತನು ರಾಮಾನಂದರ ಮುಂದೆ ಆನಂದದಿಂದ ಕುಣಿಯುತ್ತಿದ್ದನು. ಹಸಿದವನಿಗೆ ಮಿಷ್ಟಾನ್ನವು ದೊರೆತಂತೆಯೂ ಒಣಗುವ ಸಸಿಗಳಿಗೆ ಮಳೆಯಾದಂತೆಯೂ, ಸಾಧಕನಿಗೆ ಸತ್ಸಂಗವು ಪ್ರಾಪ್ತವಾ ದಂತೆಯೂ ಶ್ರೀ ಗುರುಚರಣಸ್ಪರ್ಶದಿಂದ ಕಬೀರನ ಮನಸ್ಸು ಸಮಾಧಾನವನ್ನು ಹೊಂದಿತು. ಕಬೀರನ ಈ ಸ್ಥಿತಿಯನ್ನು ನೋಡಿ ರಾಮಾನಂದಸ್ವಾಮಿಗಳು ನಕ್ಕರು. ಅವನ ನಿಶ್ಚಯಕ್ಕಾಗಿ ಸ್ವಾಮಿಗಳಿಗೆ ಆಶ್ಚರ್ಯವಾಯಿತು. ಅವರು ಯಾವ ಮಾತನ್ನೂ ಆಡದೆ ಸ್ನಾನಕ್ಕೆ ತೆರಳಿದರು. ಹೋಗುವಾಗ ಅವರು ಮನ ಸ್ಸಿನಲ್ಲಿ—ನಾನು ಇಲ್ಲಿಯ ವರೆಗೆ ಕಬೀರನಂಥ ನಿಶ್ಚಯದ ಮನಸ್ಸಿನವನನ್ನು ನೋಡಿದ್ದಿಲ್ಲ. ಆದರೂ ಕಬೀರನನ್ನು ಛಲಿಸಿ, ಅವನ ಮನಸ್ಸನ್ನು ಒರೆಗೆ ಹಚ್ಚಿ ನೋಡಬೇಕು, ಎಂದು ನಿಶ್ಚಯಿಸಿದರು. ಪರಿಪರಿಯಿಂದ ಛಲಿಸಿ ವಿಶ್ವಾಮಿ ತ್ರನು ಹರಿಶ್ಚಂದ್ರನ ಮನಸ್ಸನ್ನು ಪರೀಕ್ಷಿಸಿದಂತೆ ರಾಮಾನಂದರು ಕಬೀರಭಕ್ತನ ಮನಸ್ಸನ್ನು ಪರೀಕ್ಷಿಸಬೇಕೆಂದು ಗೊತ್ತು ಮಾಡಿಕೊಂಡರು.

ಒಂದುದಿನ ಕಬೀರಭಕ್ತನು ಶ್ರೀ ಗುರುಚರಣವನ್ನು ಮನಸ್ಸಿನಲ್ಲಿ ಧರಿಸಿ, ಪೇಟೆಯಲ್ಲಿ ಆನಂದದಿಂದ ಹಾಡುತ್ತ-ಕುಣಿಯುತ್ತ, ಆನಂದಾಶ್ರುಗಳು ಉದುರು ತ್ತಿರಲು, ತನ್ನ ಗುರುವು ರಾಮಾನಂದನೆಂದು ಹೇಳಿಕೊಳ್ಳುತ್ತಿದ್ದನು. ಅದನ್ನು ರಾಮಾನಂದಸ್ವಾಮಿಗಳು ದೂರದಿಂದ ಕೇಳಿ, ಕಾಲೊಳಗಿನ ಆವುಗೆಗಳನ್ನು ಕೈ ಯಲ್ಲಿ ತಕ್ಕೊಂಡು, ಸಿಟ್ಟಿನಿಂದ ಕಬೀರನನ್ನು ಕುರಿತು—ಎಲಾ, ನಾನು ಗುರು ವೆಂದು ಸುಮ್ಮನೆ ಹೇಳಿಕೊಳ್ಳುತ್ತೀಯಾ? ನಾನೆಂದು ನಿನಗೆ ಉಪದೇಶವನ್ನು ಮಾಡಿದ್ದೇನೆ? ಯಾರನ್ನು ಸಾಕ್ಷಿ ಇಟ್ಟಿರುತ್ತೀ, ಎಂದು ನುಡಿದು, ಪಾದುಕೆ ಗಳಿಂದ ಕಬೀರನ ತಲೆಗೆ ಹೊಡೆದರು. ತಾಯಿಯು ಹಿತಕ್ಕಾಗಿ ಹೊರಗೆ ಸಿಟ್ಟು ತೋರಿಸಿ, ಮಗನನ್ನು ಹೊಡೆಯುವಂತೆಯೂ, ವಿದ್ಯೆಯು ಬರಬೇಕೆಂದು ಕುಲಗುರುವು ಶಿಷ್ಯನನ್ನು ದಂಡಿಸುವಂತೆಯೂ ರಾಮಾನಂದಸ್ವಾಮಿಗಳು ಮನ ಸ್ಸನ್ನು ಪರೀಕ್ಷಿಸುವದಕ್ಕಾಗಿ ಕಬೀರನನ್ನು ಹೊಡೆದರು.

ಗುರುವಿನ ಹೊಡತದಿಂದ ರಕ್ತವು ತಲೆಯಿಂದ ಬಳಬಳ ಸೋರಹತ್ತಿತು. ಆದರೂ, ಕಬೀರನ ಗುರುಭಕ್ತಿಯು ಕುಂದಲಿಲ್ಲ. ಆತನು ಸಂತೋಷಭರಿತನಾಗಿ ಜನರನ್ನು ಕುರಿತು—ಎಲೈ ಜನರುಗಳಿರಾ, ನೀನೆಲ್ಲರು ದಯಮಾಡಿ ನನ್ನ ಮಾತನ್ನು ಚಿತ್ತಗೊಟ್ಟು ಕೇಳಬೇಕು. ತಾವು ಉಪದೇಶಕೊಟ್ಟಾಗ ಯಾರೂ ಸಾಕ್ಷಿಯಿದ್ದಿಲ್ಲವೆಂದು ಶ್ರೀಗುರುಗಳು ನನಗೆ ಸಿಟ್ಟುಮಾಡಿದರು. ಈಗ ನೀನೆಲ್ಲರು ನೋಡುತ್ತಿರಲು, ಅವರು ನನ್ನ ತಲೆಯ ಮೇಲೆ ಕಾಲನ್ನು ಇಟ್ಟರು. ಎಲ್ಲರಿಗೂ ಗೊತ್ತು ಇರಲಿ, ಎಂದು ನುಡಿದು, ರಾಮಾನಂದರನ್ನು ಕುರಿತು—ಸದ್ಗುರುನಾಥನೇ, ಪೃಥ್ವೀ-ತೇಜ,-ವಾಯ್ವಾಕಾಶಗಳನ್ನೂ ಶ್ರೀನಾರಾಯಣನನ್ನೂ ಸಾಕ್ಷಿಯಾಗಿಟ್ಟು, ನಿನ್ನ ಚರಣವನ್ನು ಸೇವಿಸಿದ್ದೇನೆ, ಗೊತ್ತು ಇರಲಿ, ಎಂದು ನುಡಿದನು.

ಕಬೀರನ ಈ ಮಾತುಗಳನ್ನು ಕೇಳಿ ರಾಮಾನಂದರು ಸಂತುಷ್ಟರಾದರು. ಅವರು ತೀವ್ರವಾಗಿ ಕಬೀರನ ಬಳಿಗೆ ಹೋಗಿ, ಅವನ ತಲೆಯ ಮೇಲೆ ಕೈಯನ್ನಿಟ್ಟು—ಕಬೀರಾ. ನಿನ್ನ ನಿಶ್ಚಯಕ್ಕಾಗಿ ನಾನು ಪ್ರಸನ್ನನಾಗಿದ್ದೇನೆ. ನಿನ್ನ ಮನಸ್ಸು ನನ್ನ ಒರೆಗೆ ಹತ್ತಿತು. ಇನ್ನು ರಾಮಕೃಷ್ಣ ಎಂಬ ಮಂತ್ರವನ್ನು ಜಪಿಸುತ್ತ ಹಗಲು ರಾತ್ರಿ ಭಜನೆ ಮಾಡು, ಎಂದು ಹೇಳಿದರು. ಕಬೀರನು ಪರಮಸಂತುಷ್ಟನಾಗಿ ಹಲವು ಪದ್ಯಗಳನ್ನು ರಚಿಸಿ, ಶ್ರೀರಾಮನ ಗುಣಗಳನ್ನು ವರ್ಣಿಸಿದನು. ದುರಾಶೆಗಳನ್ನೂ, ಲೌಕಿಕದ ಮಾನಾಭಿಲಾಷೆಯನ್ನೂ, ವಿಷಯಧ್ಯಾನವನ್ನೂ, ಜ್ಞಾನದ ಅಭಿಮಾನವನ್ನೂ ಬಿಟ್ಟು, ಹಗಲು ರಾತ್ರಿ ಕೀರ್ತನ ಮಾಡ ಹತ್ತಿದನು. ಕಾಶಿಯ ಜನರು, ಕಬೀರನನ್ನು ಧನ್ಯನೆಂದು ಹೊಗಳುತ್ತಿದ್ದರು.

ಹೀಗಿರಲು, ಕಬೀರನ ಪ್ರತಿಷ್ಠೆಯು ದುರ್ಜನರಿಗೆ ಸೇರಲಿಲ್ಲ. ಸೂರ್ಯನು ಉದಯವಾದದ್ದನ್ನು ನೋಡಿ ಗೂಗೆಯು ನಾಚುವಂತೆಯೂ, ಚಂದ್ರೋದಯವಾದದ್ದನ್ನು ನೋಡಿ ಕಳ್ಳರು ಕಷ್ಟಪಡುವಂತೆಯೂ, ಪತಿವ್ರತೆಯ ಕೀರ್ತಿಯನ್ನು ಕೇಳಿ ಜಾರಸ್ತ್ರೀಯು ಸಂತಾಪಗೊಳ್ಳುವಂತೆಯೂ, ದಾನಶೂರನ ಕೀರ್ತಿಯನ್ನು ಕೇಳಿ ಜೀನನ ಹೊಟ್ಟೆಯಲ್ಲಿ ಬೆಂಕಿಬೀಳುವಂತೆಯೂ ಕಬೀರನ ಕೀರ್ತಿಯನ್ನು ಕೇಳಿ ದುರ್ಜನರು ತಳಮಳಗೊಂಡರು. ಅದರಲ್ಲಿ ಕೆಲವರು ಒಟ್ಟಾಗಿ ಏಕಾಂತದಲ್ಲಿ ಕುಳಿತು ಮನಸ್ಸಿನಲ್ಲಿ—ಕಬೀರನು ಅದ್ಭುತವಾಗಿ ಸಂತಸೇವೆಯನ್ನು ಮಾಡಿದ್ದರಿಂದ ಇಷ್ಟು ಹೆಚ್ಚಳವನ್ನು ಪಡೆದನು, ಆತನು ಸಂತಸೇವೆ

ಗಾಗಿ ತನ್ನ ಮಗನನ್ನು ಕೊಲ್ಲಲು, ಸಂತರು ಅವನ ಸತ್ತ ಮಗನನ್ನು ಬದುಕಿಸಿದರು. ಅಂದಿನಿಂದ ಎಲ್ಲ ಜನರು ಕಬೀರನನ್ನು ಬಹಳವಾಗಿ ಮನ್ನಿಸ ಹತ್ತಿದ್ದಾರೆ. ನಾವು ಏನಾದರೂ ಮಾಡಿ ಕಬೀರನ ಮಾನಹಾನಿಯನ್ನು ಮಾಡಬೇಕು. ಕಬೀರನ ಹೆಸರಿನಿಂದ ನಾಲ್ಕೂಕಡೆಗೆ ಸಾಧುಗಳಿಗೂ, ಸಂತರಿಗೂ, ವೈಷ್ಣವರಿಗೂ ಪತ್ರಬರೆದು, ಒಂದೇ ದಿವಸ ಅವರೆಲ್ಲರೂ ಒಟ್ಟುಗೂಡುವಂತೆ ಮಾಡಬೇಕು. ಬಹುಜನ ಸಂತರು ಒಮ್ಮೆಲೆ ಒಟ್ಟುಗೂಡಿದ್ದನ್ನು ನೋಡಿ ಕಬೀರನು ಓಡಿ ಹೋಗುವನು. ಪತ್ರಬರೆದು ಕರೆಸಿ ಸತ್ಕಾರ ಮಾಡದ್ದರಿಂದ ಸಂತರು ಅವನನ್ನು ಶಪಿಸುವರು. ನಮಗೆ ಯಾವ ಸಂಬಂಧವೂ ಉಳಿಯುವದಿಲ್ಲ. ನಮಗೆ ಯಾರೂ ಏನೂ ಅನ್ನುವ ಹಾಗಿಲ್ಲ. ದೇವತೆಗಳಿಗೂ, ದೈತ್ಯರಿಗೂ ಜಗಳ ಹಚ್ಚಿ ಕೌತುಕದಿಂದ ನೋಡುವ ನಾರದನಂತೆ ನಾವು ಈಗ ಸಂತರನ್ನು ಕರೆಸಿ ಕಬೀರನ ಅಪಮಾನವನ್ನು ಮಾಡಬೇಕು.

ಈ ಮೇರೆಗೆ ದುರ್ಜನರು ಯೋಚಿಸಿ, ಹರಿದ್ವಾರ, ಮಥುರಾ, ಗೋಕುಲ ವೃಂದಾವನ, ದ್ವಾರಕಾಪಟ್ಟಣ ಮೊದಲಾದ ಕ್ಷೇತ್ರಗಳಿಗೆ ಕಬೀರನ ಹೆಸರಿನಿಂದ ಪತ್ರಗಳನ್ನು ಬರೆದು, ಒಂದೇದಿವಸದಲ್ಲಿ ಸಾಧುಗಳು ಒಟ್ಟುಗೂಡುವಂತೆ ಮಾಡಿದರು. ಬೈರಾಗಿಗಳಿಗೂ ಪತ್ರಗಳನ್ನು ಬರೆದರು. ಆ ದುರ್ಜನರು ತಮ್ಮತಮ್ಮೊಳಗೆ ಮಾತಾಡಿಕೊಂಡು, ಕಬೀರನಿಗೆ ಈ ಸುದ್ದಿಯು ತಿಳಿಯದಂತೆ ಮಾಡಿದರು. ಒಂದೇದಿವಸ ಅಕಸ್ಮಾತ್ತಾಗಿ ಲಕ್ಷಾವಧಿ ಸಂತರು ಕೂಡಿದರೆ, ಕಬೀರನ ಗತಿಯು ನೆಟ್ಟಗಾಗುವದಿಲ್ಲೆಂತಲೂ, ಅಷ್ಟುಜನ ಸಂತರಿಗೆ ಅನ್ನದಾನಮಾಡುವದು ಯಾರಿಂದಲೂ ಆಗದೆಂತಲೂ ಅವರು ತಿಳಿದರು. ಕೈಯಿಂದ ದುಡ್ಡು ವೆಚ್ಚ ಮಾಡಿ ಅವರು ಕಬೀರನಿಗೆ ಕೇಡನ್ನು ಬಗೆದರು. ಪಾಂಡವರ ಸತ್ವವನ್ನು ಪರೀಕ್ಷಿಸುವದಕ್ಕಾಗಿ ದುರ್ಬುದ್ಧಿಯಿಂದ ದುರ್ಯೋಧನನು ದೂರ್ವಾಸರನ್ನು ಕಳಿಸಿದಂತೆ, ದುರ್ಜನರು ದುರ್ಬುದ್ಧಿಯುಳ್ಳವರಾಗಿ ಲೆಕ್ಕವಿಲ್ಲದಷ್ಟು ಸಂತರನ್ನು ಕಬೀರನಲ್ಲಿಗೆ ಕರೆಸಿದರು.

ಇತ್ತ ಸಂತರು ಕಬೀರನ ಪತ್ರವನ್ನು ಓದಿ ಅದನ್ನು ತಲೆಯ ಮೇಲೆ ಇಟ್ಟುಕೊಂಡು ವಂದಿಸಿ, ಪತ್ರದಲ್ಲಿ ನಿಯಮಿಸಿದ ದಿವಸಕ್ಕೆ ಕಾಶಿಗೆ ಬರುವದಕ್ಕಾಗಿ ಹೊರಟರು. ಪೂರ್ವ-ಪಶ್ಚಿಮ-ದಕ್ಷಿಣ ದಿಕ್ಕುಗಳಿಂದ ಸಾಧು-ಸಂತರ ಸಮೂಹವು ಬರುತ್ತಿತ್ತು. ಅಗಣಿತವಾದ ಸಂತಜನವು ಕಬೀರನ ಪತ್ರದಲ್ಲಿ ಬರೆದ ದಿವಸವೇ ಕಬೀರನ ಮನೆಗೆ ಬಂದಿತು. ಅವರನ್ನು ನೋಡಿ ಕಬೀರನು

ನಮಸ್ಕರಿಸಿ, ಅವರನ್ನು ಪ್ರೀತಿಯಿಂದ ಅಪ್ಪಿಕೊಂಡನು. ಅಸಂಖ್ಯವಾದ ವೈಷ್ಣವ ಸಮೂಹವನ್ನು ಕಂಡು ಆ ಭಗವದ್ಭಕ್ತನು ಸಂತುಷ್ಟನಾದನು. ಈ ದಿನವು ಸುದಿನವಾದ್ದರಿಂದಲೇ ಇಷ್ಟು ಜನ ಸಂತರನ್ನು ನೋಡಿದೆನೆಂದು ಆತನು ಆನಂದಬಟ್ಟನು. ಇದನ್ನೆಲ್ಲ ನೋಡಿ ಕುಟಿಲಜನರು, ತಲೆಯಲ್ಲಾಡಿಸುತ್ತ, ಇನ್ನು ಕಬೀರನ ಗತಿಯು ಏನಾಗುತ್ತದೆ ನೋಡಿರಿ, ಎಂದು ಮಾತನಾಡಿಕೊಳ್ಳುತ್ತ ಒಬ್ಬರನ್ನೊಬ್ಬರು ನೋಡಿ, ನಗತೊಡಗಿದರು; ಮತ್ತು ತಮ್ಮ ತಮ್ಮೊಳಗೆ ನಗೆಯಾಡಿ ಚಪ್ಪಾಳೆ ಬಾರಿಸುತ್ತಿದರು.

ಕಬೀರನಿಗೆ ಇಂಥ ಸಂಕಟವು ಬಂದದ್ದನ್ನು ನೋಡಿ, ಅಯೋಧ್ಯಾವಾಸಿಯಾದ ಜಾನಕೀರಮಣನು ಮನಸ್ಸಿನಲ್ಲಿ—ನನ್ನ ಭಕ್ತನಿಗೆ ಪ್ರಾಪ್ತವಾಗಿದ್ದ ತೊಂದರೆಯು ನಿವಾರಣವು ನನ್ನಿಂದಲೇ ಆಗತಕ್ಕದ್ದು. ಕಬೀರನು ನಿಸ್ಸಂಗನು, ನಿರ್ಲಿಪ್ತನು; ಸಂತಸಮೂಹವಂತು ಅಗಣಿತವಾಗಿ ಕೂಡಿತು. ಇಂಥ ಪ್ರಸಂಗದಲ್ಲಿ ನಾನೇ ಆತನಿಗೆ ಸಹಾಯ ಮಾಡಿ, ರಕ್ಷಿಸಲಿಕ್ಕೆ ಬೇಕು. ಕ್ಷೇತ್ರವಾಸಿಗಳಾದ ವೈಷ್ಣವಜನರು ಗಂಗಾತೀರದಲ್ಲಿ ಇಳಿದುಕೊಂಡಿರುವರು, ಎಂದು ಯೋಚಿಸಿ, ಭಕ್ತನ ಮಾನವನ್ನು ಕಾಯುವದಕ್ಕಾಗಿ ಭಕ್ತಾಭಿಮಾನಿಯಾದ ಶ್ರೀ ರಾಮಚಂದ್ರನು ಕಬೀರನ ಬಳಿಗೆ ಬಂದನು. ಸಂತರ ಸಂಖ್ಯೆಯಷ್ಟು ಕಬೀರನ ರೂಪಗಳನ್ನು ಭಗವಂತನು ಧಾರಣ ಮಾಡಿದನು. ಹೀಗೆ ಕಬೀರನ ರೂಪವನ್ನು ಧಾರಣಮಾಡಿ ಶ್ರೀ ಹರಿಯು ತನ್ನ ಭಕ್ತರ ಸೇವೆಯನ್ನು ಮಾಡತೊಡಗಿದನು. ಈ ಅದ್ಭುತವನ್ನು ನೋಡಿ ದುರಾಚಾರಿಗಳು ಕೌತುಕಪಡುತ್ತ, ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಗುಂಪುಗುಂಪಾಗಿ ಕಬೀರನ ಆ ಅನಂತ ರೂಪಗಳನ್ನು ಕಣ್ಣುಮುಟ್ಟ ನೋಡಿ ಆಶ್ಚರ್ಯಪಟ್ಟರು.

ತನ್ನ ಭಕ್ತರ ಸೇವೆಯನ್ನು ಮಾಡುವಾಗ ಭಗವಂತನಿಗೆ ಬಹಳ ಉಲ್ಲಾಸವು ಉತ್ಪನ್ನವಾಗಿತ್ತು. ಗಂಡು ಹೆಣ್ಣು ಕೌತುಕದಿಂದ ನೋಡುತ್ತಿರಲು, ಆ ಆನಂದಘನನು. ನೋಡಿದತ್ತೆಲ್ಲ ಕಬೀರರೂಪದಿಂದ ಭಕ್ತರ ಸೇವೆಯಲ್ಲಿ ತತ್ಪರನಾಗಿ ಅವರ ಸಮಾಚಾರವನ್ನು ತಕ್ಕೊಳ್ಳುತ್ತಿದ್ದನು. ಆತನು ಒಂದು ಕಡೆಯಲ್ಲಿ ಭಕ್ತರ ಚರಣಗಳನ್ನು ತೊಳೆಯುತ್ತಿದ್ದನು. ಮತ್ತೊಂದು ಕಡೆಯಲ್ಲಿ ಅವರಿಗೆ ಸ್ನಾನಮಾಡಿಸುತ್ತಿದ್ದನು. ಇನ್ನೊಂದು ಕಡೆಯಲ್ಲಿ ಸಂತರ ದೇವತಾರ್ಚನಕ್ಕಾಗಿ ಗಂಧವನ್ನು ತೇದುಕೊಡುತ್ತಿದ್ದನು. ಕಬೀರರೂಪಿಯಾದ ಪರಮೇಶ್ವರನು, ಭಕ್ತಾಧೀನನಾಗಿ ಕೆಲವುಕಡೆಯಲ್ಲಿ ಸಂತರ ಮುಂದೆ ಕೈಜೋಡಿಸಿ

ಕೊಂಡು ನಿಂತಿರುವದನ್ನೂ, ಕೆಲವುಕಡೆಯಲ್ಲಿ ಸಂತರ ಕಾಲು ಒತ್ತುವದನ್ನೂ, ಕೆಲವುಕಡೆಯಲ್ಲಿ ಸಂತರ ಪಾದುಕೆಗಳನ್ನು ಹಿಡಿದಿರುವದನ್ನೂ ಜನರು ನೋಡಿದರು. ಕೆಲವರ ಮುಂದೆ ಶ್ರೀಹರಿಯು ಗಾಯನ ಮಾಡುತ್ತಿದ್ದನು; ಕೆಲವರಿಗೆ ಊಟಕ್ಕೆ ಹಾಕುತ್ತಿದ್ದನು; ಕೆಲವರಿಗೆ ತಾಂಬೂಲವನ್ನು ಕೊಡುತ್ತಿದ್ದನು. ಆ ಮುರಾರಿಯು ಕೆಲವರನ್ನು ಮಂಚದಮೇಲೆ ಮಲಗಿಸಿ, ತಾನು ಅವರ ಮಗ್ಗುಲದಲ್ಲಿ ಕುಳಿತುಕೊಂಡಿದ್ದನು. ಕೆಲವರ ಸಂಗಡ ವಿನಯದಿಂದ ಮಾತಾಡುತ್ತ ಕುಳಿತಿದ್ದನು. ಕೆಲವರಿಗೆ ಭಂಗಿಯ ನೀರನ್ನು ಸಿದ್ಧಮಾಡಿ ಕುಡಿಸುತ್ತಿದ್ದನು; ಕೆಲವರಿಗೆ ಪ್ರೀತಿಯಿಂದ ಗುಡುಗಡಿಯನ್ನು ಸೇದಿಸುತ್ತಿದ್ದನು. ಮನೆಗೆ ದಯಮಾಡಬೇಕೆಂದು ಕೆಲವರನ್ನು ಪ್ರಾರ್ಥಿಸುತ್ತಿದ್ದನು. ನನ್ನ ಮೇಲೆ ಕೃಪೆ ಮಾಡಬೇಕೆಂದು ಕೆಲವರಿಗೆ ಹೇಳಿಕೊಳ್ಳುತ್ತಿದ್ದನು. ಕೆಲವರಿಗೆ ಗೋಪೀಚಂದನವನ್ನು ಹಚ್ಚಿ ಮುಂದೆ ಕನ್ನಡಿಯನ್ನು ಹಿಡಿಯುತ್ತಿದ್ದನು. ಕೆಲವರ ಕೊರಳಲ್ಲಿ ತುಲಸೀಮಾಲೆಗಳನ್ನು ಹಾಕುತ್ತಿದ್ದನು. ಕೆಲವರ ಮೈಗೆ ಗಂಧವನ್ನು ಹಚ್ಚುತ್ತಿದ್ದನು. ಕೆಲವರ ಹಣೆಗೆ ಸುಂದರವಾದ ಕಸ್ತೂರಿಯ ಬಟ್ಟನ್ನು ಇಡುತ್ತಿದ್ದನು. ಕೆಲವರಿಗೆ ವಸ್ತ್ರಭೂಷಣಗಳನ್ನು ಅರ್ಪಿಸುವನು. ಕೆಲವರನ್ನು ಏಕಾಂತದಲ್ಲಿ ಕರೆದೊಯ್ದು ಆತ್ಮಜ್ಞಾನಕ್ಕಾಗಿ ಪ್ರಶ್ನ ಮಾಡುತ್ತಿದ್ದನು. ಕೆಲವರ ಪಾದುಕೆಗಳನ್ನು ಭಕ್ತಿಯಿಂದ ತಲೆಯ ಮೇಲಿಟ್ಟುಕೊಳ್ಳುವನು. ಕೆಲವರ ಮುಂದೆ ಕುಳಿತು ಗಾಯನಮಾಡುವನು. ಕೆಲವರಿಗೆ ಹುಲ್ಲಿನ ಹಾಸಿಗೆಯನ್ನು ಮಾಡಿ ಮಲಗಿಸುತ್ತಿದ್ದನು. ಕೆಲವರಿಗೆ ತಲಬು ಆದದ್ದನ್ನು ನೋಡಿ, ಅಫುವನ್ನು ತಂದುಕೊಡುತ್ತಿದ್ದನು. ಲೆಕ್ಕವಿಲ್ಲದ ಸಂತರ ಪಂಗ್ತಿಗಳು ಉಣ್ಣುತ್ತಿರುವಾಗ ಜಗಜ್ಜೀವನನು ಬಡಿಸುತ್ತಿದ್ದನು. ನೀರಡಿಸಿದವರಿಗೆ ಪ್ರೀತಿಯಿಂದ ನೀರು ಕುಡಿಸುತ್ತಿದ್ದನು; ಬೀಸಣಿಕೆಯಿಂದ ಬೀಸಿ ಕೆಲವರ ಮನಸ್ಸನ್ನು ರಂಜಿಸುತ್ತಿದ್ದನು. ಕೆಲವು ಕಡೆಯಲ್ಲಿ ಸಂತರು ಪುಸ್ತಕ ಓದುತ್ತಿರುವದನ್ನು ಆತನು ಪ್ರೀತಿಯಿಂದ ಕೇಳುತ್ತಿದ್ದನು. ಕೆಲವರು ಸ್ನಾನಕ್ಕೆ ಹೊರಟಿರಲು, ಅವರ ಸಂಗಡ ತಾನೂ ಹೋಗುತ್ತಿದ್ದನು. ಕೆಲವರನ್ನು ನನಗೇನಾದರೂ ಸೇವೆಯನ್ನು ಹೇಳಬೇಕೆಂದು ಪ್ರಾರ್ಥಿಸುತ್ತಿದ್ದನು. ಕೆಲವರಿಗೆ ಉಪಹಾರವನ್ನು ಮಾಡಿಸುತ್ತಿದ್ದನು. ಒಬ್ಬನೇ ಸೂರ್ಯನು ಅನೇಕ ಕೊಡಗಳಲ್ಲಿ ಅಲಿಪ್ತನಾಗಿ ಪ್ರತಿಬಿಂಬಿಸುವಂತೆ, ವ್ಯಾಪಕನಾದ ಚಕ್ರಪಾಣಿಯು ಕಬೀರನರೂಪದಿಂದ ಒಪ್ಪಿದನು. ಹಿಂದಕ್ಕೆ ಶ್ರೀಕೃಷ್ಣನು ಬಾಲಕನಾಗಿರುವಾಗ ಆತನು ಮಾಡಿದ ಅಪರಾಧಗಳನ್ನು ಯಶೋದೆಯು ಮುಂದೆ ಹೇಳುವದ

ಕ್ಕಾಗಿ, ಗೌಳಿಗರ ಹೆಂಗಸರು ಆತನ ಕೈಹಿಡಿದು ಎಳಕೊಂಡು ಬರುತ್ತಿರುವಾಗ ಆ ಬಾಲಕೃಷ್ಣನು ಅನಂತರೂಪಗಳನ್ನು ಧರಿಸಿದಂತೆ ಈಗ ಕಬೀರನ ಸಲುವಾಗಿ ಭಗವಂತನು ಅನಂತ ಕಬೀರರೂಪಗಳನ್ನು ಧರಿಸಿದನು.

ಹೀಗೆ ವಿಶ್ವವ್ಯಾಪಕನು ನಟಿಸುತ್ತಿರಲು, ಕಾಶಿಯ ಜನರು ಆಶ್ಚರ್ಯ ಪಟ್ಟರು. ಭಕ್ತರ ಸಮೂಹವು ಕಾಶೀ ಕ್ಷೇತ್ರದಲ್ಲಿ ಮೂರು ರಾತ್ರಿ ವಾಸ ಮಾಡಿತು. ಅಲ್ಲಿಯವರೆಗೆ ವೈಕುಂಠಪತಿಯು ಅವರ ಸೇವೆಯನ್ನು ಪ್ರೀತಿಯಿಂದ ಮಾಡಿದನು. ಸಂತರಿಗೆ ವಸ್ತ್ರಭೂಷಣಗಳನ್ನು ಕೊಟ್ಟನು. ಯಾರ ಯಾರ ಬಯಕೆ ಏನಿರುವದೋ ಅವನ್ನು ತಾನೇ ಆಯಾವಸ್ತುಗಳಾಗಿ ಪೂರ್ಣಮಾಡಿದನು. ಸಂತರನ್ನು ಆದರದಿಂದ ಅವರವರ ಸ್ಥಾನಗಳಿಗೆ ಕಳಿಸಿದ ಬಳಿಕ ಸೀತಾ ರಮಣನು ಅದೃಶ್ಯನಾದನು. ಈ ಅದ್ಭುತವನ್ನು ನೋಡಿ ದುರ್ಜನರು ಪಶ್ಚಾತ್ತಾಪಪಟ್ಟು ಕಬೀರನ ಚರಣಕ್ಕೆರಗಿದರು. ಅವರು ಕಬೀರನನ್ನು ಕುರಿತು— ಮಹಾರಾಯಾ ಕಬೀರಾ, ನೀನು ಶ್ರೇಷ್ಠ ವೈಷ್ಣವವೀರನಿರುತ್ತೀ. ನಿನ್ನನ್ನು ನಾವು ಪೀಡಿಸಿದರೂ ಶ್ರೀ ರಘುನಾಥನು ನಿನಗೆ ಸಹಾಯಕನಾಗಿ ನಿನ್ನ ಅದ್ಭುತ ಕೀರ್ತಿಯನ್ನು ಹಬ್ಬಿಸಿದನು. ದೀಪದ ಗಹನವಾದ ಜ್ಯೋತಿಯನ್ನು ಪತಂಗವು ನಂದಿಸಲಾರದು. ಕಾಚಮಣಿಯು ದ್ವೇಷದಿಂದ ಸೂರ್ಯನಾರಾಯಣನನ್ನು ಅಡಗಿಸಲಾರದು. ಕೌರವರು ಅರಗಿನ ಮನೆಯಲ್ಲಿ ಪಾಂಡವರನ್ನು ಸುಡಬೇಕೆಂದರೆ ಪಾಂಡವರು ಸುಡಲಿಲ್ಲ, ಎಂದು ನುಡಿದು ಸಂಪೂರ್ಣ ಪಶ್ಚಾತ್ತಾಪ ತಾಳಿದ ಆ ದುರ್ಜರು, ಮತ್ತೆ ಕಬೀರನ ಚರಣಕ್ಕೆ ಸಾಷ್ಟಾಂಗವಾಗಿ ಎರಗಿದರು. ವಿಕಲ್ಪವನ್ನೂ, ದ್ವೇಷವನ್ನೂ ಬಿಟ್ಟುಕೊಟ್ಟು ಅವರು ಕಬೀರನ ಗುಣಗಳ ಗಾಯನ ಮಾಡಿದರು.

‡ ‡ ‡ ‡ ‡

ಪರಮಮಂಗಲಕರವಾದ ಈ ಕಬೀರ ಚರಿತ್ರದಿಂದ ನಾವು ಕಲಿತುಕೊಳ್ಳತಕ್ಕ ಸಂಗತಿಗಳು ಹಲವು ಇರುತ್ತವೆ. ಕುಟುಂಬದೊಳಗಿನವರೆಲ್ಲರೂ ಸಜ್ಜನರಿದ್ದು, ಪರಸ್ಪರರು ಅನುಕೂಲವಾಗಿದ್ದರೆ, ಪರೋಪಕಾರವು ಅನಾಯಾಸವಾಗಿ ಹ್ಯಾಗೆ ಘಟಿಸುವದೆಂಬದನ್ನು ಮೊದಲು ನಾವು ಮನಸ್ಸಿನಲ್ಲಿ ತಂದುಕೊಳ್ಳಬೇಕು. ಸಣ್ಣಪುಟ್ಟ ತೊಂದರೆಗಳಿಗೆ ಅಳಕುವ ನಾವು ಪರೋಪಕಾರಕ್ಕಾಗಿ ಕಮಾಲನು ದೇಹವನ್ನು ಅರ್ಪಿಸುವಾಗ ಆಡಿದ ಮಾತುಗಳನ್ನೂ, ಮಗನ ಕುತ್ತಿಗೆ ಕೊಯ್ಯುವಾಗ ಇದ್ದ ಕಬೀರನ ಮನಸ್ಸಿನ ಸ್ಥಿತಿಯನ್ನೂ, ಮಗನ ತಲೆಯನ್ನು ನೋಡಿ

ಕಬೀರನ ಪತ್ನಿಯು ನುಡಿದ ನುಡಿಗಳನ್ನೂ ಆಲೋಚಿಸಿ, ಮಧ್ಯಾಹ್ನಕ್ಕೆ ಮನೆಗೆ ಬಂದವರಿಗೆ ಸಮಾಧಾನದಿಂದ ಊಟಕ್ಕೆ ಹಾಕುವದನ್ನಾದರೂ ನಾವು ಕಲಿಯಬೇಕು.

ಕಬೀರನ ಬೆನ್ನಮೇಲೆ ಹೊಡೆದರೆ, ಬ್ರಾಹ್ಮಣವೇಷಧಾರಿಯಾದ ಶ್ರೀ ರಾಮಚಂದ್ರನ ಬೆನ್ನಮೇಲೆ ಬಾಸಾಳುಗಳು ಮೂಡಿದ್ದೂ, ಸಂತರು ಕಪಾಲನನ್ನು ಸಜೀವಗೊಳಿಸಿದ್ದೂ, ಅಕಸ್ಮಾತ್ತಾಗಿ ಕಬೀರನ ಮನೆಗೆ ಬಂದ ಸಹಸ್ರಾವಧಿ ಸಂತರನ್ನು ಶ್ರೀರಾಮನು ಕಬೀರರೂಪದಿಂದ ಸತ್ಕರಿಸಿದ್ದೂ ನಮಗೆ ಅಸಂಭವ ವಾಗಿ ತೋರುವದು ಆಶ್ಚರ್ಯವಲ್ಲ. ಯಾಕಂದರೆ, ಕಬೀರನ ಸದ್ವೃತ್ತಿಯ ಗಂಧವು ನಮ್ಮಲ್ಲಿರುವದಿಲ್ಲ. ಈ ಚರಿತ್ರಾವಲೋಕನದಿಂದ ನಾವು ಸತ್ಸಮಾ ಗಮ ಮಾಡಿ ಸಜ್ಜನರಾಗುತ್ತ ಹೋದರೆ, ಮನುಷ್ಯನ ಬುದ್ಧಿಗೆ ನಿಲುಕದಂಥ ದೈವೀಶಕ್ತಿಯು ಜಗತ್ತಿನಲ್ಲಿರುತ್ತದೆಂಬದರ ಅನುಭವವು ನಮಗಾಗಬಹುದು.

ಸಾಕ್ಷಾತ್ ಶುಕಾಚಾರ್ಯರು ಮುಸಲ್ಮಾನರಲ್ಲಿ ಅವತರಿಸಿರುವದನ್ನು ನೋಡಿದರೆ ಸತ್ಪುರುಷರ ಉದಯಕ್ಕೆ ಜಾತಿಯ ನಿಯಮವಿಲ್ಲೆಂಬದು ಗೊತ್ತಾ ಗುತ್ತದೆ. ಇದನ್ನು ನೆನಪಿನಲ್ಲಿಟ್ಟು ನಾವು ಜಾತಿಮತ್ಸರವನ್ನು ಬಿಡಬೇಕು. ಮತ್ತು ಎಲ್ಲ ಜಾತಿಯವರನ್ನು ಬಂಧುಗಳೆಂದು ತಿಳಿದು ನಡೆಯುವ ಸಾಧನಹಿಡ ಬೇಕು, ಅದರಂತೆ ಶ್ರೀರಾಮಾನಂದ ಯತಿಗಳು ಮುಸಲ್ಮಾನನಿಗೆ ಉಪದೇಶಿಸಿ ದ್ದರ ಮರ್ಮವನ್ನು ವಿಚಾರಿಸಬೇಕು.

ಸಾರಾಂಶ ಸದ್ಗುಣಗಳ ಖನಿಯಂತಿರುವ ಕಬೀರನ ಕುಟುಂಬದಿಂದ ನಾವು ಈಶ್ವರಭಕ್ತಿ, ಅತಿಥಿಭಕ್ತಿ, ಗುರುಭಕ್ತಿ, ಪತಿಭಕ್ತಿ, ಪಿತೃಭಕ್ತಿ, ವೈರಾಗ್ಯ ಮುಂ ತಾದ ಸದ್ಗುಣಗಳನ್ನು ಸ್ವೀಕರಿಸುವ ಸಾಧನಹಿಡಿಗಬೇಕು. ಅದರಿಂದ ತಪ್ಪದೆ ಕಲ್ಯಾಣವಾಗುವದು. ಈ ಭಗವದ್ಭಕ್ತ ಕುಟುಂಬದ ಚರಿತ್ರಲೇಖನದಿಂದ ಲೇಖ ಕನ ಅರಿಷ್ಟನಿವಾರಣವಾಗುವದೆಂಬದನ್ನು ಆ ಭಗವದ್ಭಕ್ತರ ಸಾಕ್ಷಿಯಿಂದ ಅನು ಭವತಕ್ಕೊಂಡು ಹೇಳಲಾಗುವದು. ಈ ಚರಿತ್ರವನ್ನು ಭಕ್ತಿಯಿಂದ ಓದಿ, ವೃತ್ತಿಯನ್ನು ಸುಧಾರಿಸಿಕೊಳ್ಳುವ ಪುಣ್ಯವಂತರು ಕೃತಾರ್ಥರಾಗುವದರಲ್ಲಿ ಸಂಶಯವಿಲ್ಲ.



# ಶ್ರೀ ಜ್ಞಾನದೇವ.



## ೧ನೆಯ ಪ್ರಕರಣ:—ಯತಿ ದರ್ಶನ.



ಪರಮಾತ್ಮನು ತನ್ನ ಅನೇಕ ಲೀಲೆಗಳಿಂದ ಭಕ್ತರ ಮನಸ್ಸನ್ನು ಸಂತೋಷ ಗೊಳಿಸುವದಕ್ಕಾಗಿಯೂ, ಧರ್ಮವನ್ನು ಸ್ಥಾಪಿಸುವದಕ್ಕಾಗಿಯೂ ಆಗಾಗ್ಗೆ ಅವ ತಾರವನ್ನು ತಾಳುತ್ತಿರುವನು. ದೇಶಕಾಲಾನುಸಾರವಾಗಿ ಆತನ ಅವತಾರ ಗಳು ಬೇರೆಬೇರೆಯಾಗಿರುವವು. ಭಗವದ್ಭಕ್ತರೂ ಈಶ್ವರನ ಅವತಾರಗಳಲ್ಲಿಯೇ ಎಣಿಸಲ್ಪಡುವರು. ಮನುಷ್ಯರಂತೆಯೇ ಭಗವದ್ಭಕ್ತರು ದೇಹವನ್ನು ಧರಿಸಿ ದ್ದರೂ, ಅವರ ಅಂತರ್ವೃತ್ತಿಯು ಮನುಷ್ಯರಿಂದ ತೀರ ಭಿನ್ನವಾಗಿರುವದು. ಆತ್ಮಜ್ಞಾನವು ಅವರಲ್ಲಿಯ ಅವತಾರದ ಮುಖ್ಯ ಲಕ್ಷಣವಾಗಿರುವದು. ಶಾಂತಿ, ಕ್ಷಮೆ, ಭೂತದಯೆ ಮೊದಲಾದ ಗುಣಗಳಂತು ಅವರಲ್ಲಿ ತುಂಬಿತುಳುಕುತ್ತಿರು ವವು. ಜನರ ಮನಸ್ಸನ್ನು ಎಳಕೊಂಡು, ಅವರನ್ನು ಸನ್ಮಾರ್ಗಕ್ಕೆ ಹಚ್ಚುವ ಕೆಲಸದಲ್ಲಿ ಈ ಮಹಾನುಭಾವರನ್ನು ಯಾರೂ ಸರಿಗಟ್ಟಲಾರರು. ಜ್ಞಾನಮಾರ್ಗ ದಿಂದ ಸದ್ಗುರು-ಸಾಂಪ್ರದಾಯವನ್ನು ಬೋಧಿಸುವ ಸಂತರಲ್ಲಿ, ಜ್ಞಾನದೇವರು ಮೊದಲನೆಯ ಸಂತರಾಗಿರುವರು. ಅವರು ಕೇವಲ ವಿಷ್ಣುವಿನ ಅವತಾರವಾ ದ್ದರಿಂದ ಸಂತರಲ್ಲಿ ಶಿರೋಮಣಿಗಳೆಂತಲೂ, ಜ್ಞಾನ-ವೈರಾಗ್ಯಯುಕ್ತವಾದ ಭಕ್ತಿ ಮಾರ್ಗದ ಪ್ರವರ್ತಕರೆಂತಲೂ ಎನಿಸಿಕೊಂಡಿರುವರು. ಆ ಮಹಾನುಭಾವರ ಚರಿತ್ರವನ್ನು ಕೆಳಗೆ ಬರೆಯತೊಡಗುವಾ.

ಒಂದಾನೊಂದು ದಿನ ಬ್ರಹ್ಮ-ರುದ್ರರು ವಿಷ್ಣುವಿನ ದರ್ಶನಕ್ಕಾಗಿ ಕ್ಷೀರ ಸಾಗರಕ್ಕೆ ಬಂದರು. ಆಗ ಲಕ್ಷ್ಮೀಪತಿಯು ಅವರನ್ನು ಕುರಿತು—ಈಗ ನಾವು ಮೃತ್ಯುಲೋಕದಲ್ಲಿ ನಿವೃತ್ತಿ, ಸೋಪಾನ, ಜ್ಞಾನದೇವ ಎಂಬ ಹೆಸರುಗಳಿಂದ ಅವತಾರ ತಾಳಿ, ಅನೇಕ ಲೀಲೆಗಳನ್ನು ತೋರಿಸೋಣ. ನಾವು ಮೂವರೂ ಬಂಧುಗಳಾಗಿ ಒಬ್ಬರ ಹೊಟ್ಟೆಯಲ್ಲಿಯೇ ಹುಟ್ಟೋಣ. ಆದಿಮಾಯೆಯು ಮುಕ್ತಾಬಾಯಿಯೆಂಬ ಹೆಸರಿನಿಂದ ನಮಗೆ ತಂಗಿಯಾಗಿ ಹುಟ್ಟಲಿ, ಎಂದು ಹೇಳಿದನು. ಅದಕ್ಕೆ ಬ್ರಹ್ಮ-ರುದ್ರರು ಒಪ್ಪಿಕೊಳ್ಳಲು, ಆ ತ್ರಿಮೂರ್ತಿಗಳು ತಾವು ಹುಟ್ಟಿಬರಲಿಕ್ಕೆ ಭೂಲೋಕದಲ್ಲಿ ಸ್ಥಾನವನ್ನು ಯೋಜಿಸಿದರು. ಗಂಗಾ

ತೀರದಲ್ಲಿ "ಆಪೇಗಾವ" ಎಂಬ ಜಗದ್ವಿಖ್ಯಾತವಾದ ಒಂದು ಕ್ಷೇತ್ರವಿತ್ತು. ಅಲ್ಲಿ ಗೋವಿಂದಪಂತನೆಂಬ ಹೆಸರಿನ ಒಬ್ಬ ಕುಲಕರಣಿಯು ವಿಷ್ಣುಭಕ್ತನಾಗಿದ್ದನು. ಆತನ ಹೆಂಡತಿಯ ಹೆಸರು ನೀರಾಬಾಯಿ. ನೀರಾಬಾಯಿಯು ಒಳ್ಳೇ ಭಾವಿಕಳೂ, ಪತಿವ್ರತೆಯೂ ಆಗಿದ್ದಳು. ಆಕೆಯು ಬಸುರಿರುವಾಗ ಗಂಡುಮಗನನ್ನು ಹಡೆಯಬೇಕೆಂದು ಬಯಸುತ್ತಿದ್ದಳು. ಆ ಪತಿವ್ರತೆಯ ಬಯಕೆಯಂತೆ ಒಂಬತ್ತು ತಿಂಗಳು ತುಂಬುತ್ತಲೆ, ಭಕ್ತಿ-ಜ್ಞಾನ-ವೈರಾಗ್ಯಯುಕ್ತನಾದ ಮಗನು ಹುಟ್ಟಿದನು. ಆ ಕೂಸನ್ನು ನೋಡಿ ತಾಯಿ-ತಂದೆಗಳಿಗೆ ಬಹಳ ಆನಂದವಾಯಿತು.

ಹನ್ನೆರಡು ದಿವಸಗಳಾಗುತ್ತಲೇ ಆ ಕೂಸಿಗೆ ವಿಠೋಬನೆಂದು ಹೆಸರನ್ನಿಟ್ಟರು. ವಿಠೋಬನು ತಾಯಿ-ತಂದೆಗಳ ಮನಸ್ಸನ್ನು ಸಂತೋಷಬಡಿಸುತ್ತ ಎಂಟು ವರ್ಷದವನಾದನು. ಆಗ ಗೋವಿಂದಪಂತನು ಶಾಸ್ತ್ರವಿಧಿಯಂತೆ ಮಗನ ಉಪನಯನವನ್ನು ಮಾಡಿ, ಅಧ್ಯಯನಕ್ಕಾಗಿ ಆತನನ್ನು ಗುರುಗಳ ಬಳಿಗೆ ಕಳುಹಿದನು. ವಿಠೋಬನು ಗುರುಗಳ ಬಳಿಯಲ್ಲಿ ವೇದ-ಶಾಸ್ತ್ರಗಳನ್ನು ಕಲಿತನು. ಕಾವ್ಯ-ವ್ಯಾಕರಣಗಳಲ್ಲಿ ನಿಪುಣನಾದನು. ಹೀಗೆ ಘನಪಂಡಿತನಾದ ವಿಠೋಬನು ತೀರ್ಥಾಟನ ಮಾಡಲಿಚ್ಛಿಸಿ, ತಂದೆಯನ್ನು ಕುರಿತು—ಅಪ್ಪಾ, ನನಗೆ ತೀರ್ಥಯಾತ್ರೆಗಳನ್ನು ಮಾಡುವ ಇಚ್ಛೆಯಾಗಿದೆ; ಪುಷ್ಕರ ತೀರ್ಥಕ್ಕೆ ಹೋಗುವದಕ್ಕಾಗಿ ನನಗೆ ಅಪ್ಪಣೆಯನ್ನು ಕೊಡಬೇಕು, ಎಂದು ಬೇಡಿಕೊಂಡನು. ಅದಕ್ಕೆ ಗೋವಿಂದಪಂತನು ಒಪ್ಪಿಕೊಳ್ಳಲು, ವಿಠೋಬನು ಕೂಡಲೆ ತಾಯಿ-ತಂದೆಗಳನ್ನು ನಮಿಸಿ, ಆನಂದದಿಂದ ಯಾತ್ರೆಗೆ ಹೊರಟನು.

ಮನಸ್ಸಿನಲ್ಲ ವೈರಾಗ್ಯವು ಉತ್ಪನ್ನವಾಗದವನ ಶಾಸ್ತ್ರಾಭ್ಯಾಸವು ವ್ಯರ್ಥವೇ ಸರಿ. ಕಿವುಡನಿಗೆ ದೊಡ್ಡ ಕಿವಿಗಳಿಂದ ಉಪಯೋಗವೇನು? ವಿಧವೆಯ ತಾರುಣ್ಯದಿಂದ ಆಗುವದೇನು? ಆಡಿನ ಕುತ್ತಿಗೆಯೊಳಗಿನ ಮೊಲೆಯು ದೊಡ್ಡದಾದರೇನು? ಅದರಂತೆ ಶಾಸ್ತ್ರಗಳನ್ನೆಲ್ಲ ಕಲಿತ ಮನುಷ್ಯನ ಮನಸ್ಸಿನಲ್ಲಿ ವೈರಾಗ್ಯವು ಹುಟ್ಟದಿದ್ದರೆ, ಆ ಶಾಸ್ತ್ರಾಧ್ಯಯನವು ವ್ಯರ್ಥವಾದದ್ದೆಂದು ತಿಳಿಯಬೇಕು. ಅಂಥ ಶಾಸ್ತ್ರಿಯು, ಮೀನವನ್ನು ನುಂಗುವದಕ್ಕಾಗಿ ಧ್ಯಾನಸ್ಥವಾಗಿ ಕುಳಿತ ಬಕಪಕ್ಷಿಯನ್ನು ಹೋಲುವನು. ವಿಠೋಬನು ಹೀಗೆ ಬಕಪಕ್ಷಿಯನ್ನು ಹೋಲುವ ಪಂಡಿತನಲ್ಲ. ಆತನ ಮನಸ್ಸು ಪೂರ್ಣ ವೈರಾಗ್ಯದಿಂದ ಕೂಡಿತ್ತು. ಆತನು ಮಾಯಾಮಮತೆಗಳನ್ನು ಬಿಟ್ಟು, ಹರಿಭಜನೆಯನ್ನು ಮಾಡುತ್ತ ಯಾತ್ರೆಗೆ ಹೊರಟನು.

ವಿಠೋಬನು ದ್ವಾರಾವತಿಯೇ ಮೊದಲಾದ ಪುಣ್ಯಸ್ಥಳಗಳ ಯಾತ್ರೆಯನ್ನು ಮಾಡುತ್ತ ದಕ್ಷಿಣಕ್ಕೆ ಸಾಗಿ, ಅಲಕಾವತಿಗೆ ಬಂದನು. ಆತನು ಚಕ್ರತೀರ್ಥದಲ್ಲಿ ಸ್ನಾನಮಾಡಿ, ದೇವರನ್ನು ಪೂಜಿಸುತ್ತ ಕುಳಿತಿರಲು, ಅಲ್ಲಿಗೆ ಅಲಕಾವತಿಯ ಸಿಧೋಪಂತನೆಂಬ ಒಬ್ಬ ಬ್ರಾಹ್ಮಣನು ಸ್ನಾನಕ್ಕಾಗಿ ಬಂದನು. ಸಿಧೋಪಂತನು ದೇವರನ್ನು ಪೂಜಿಸುತ್ತ ಕುಳಿತಿರುವ ಬ್ರಹ್ಮಚಾರಿಯಾದ ವಿಠೋಬನನ್ನು ನೋಡಿ, ಸಾಷ್ಟಾಂಗವಾಗಿ ವಂದಿಸಿ—ತೇಜಸ್ವಿಯಾದ ಬ್ರಾಹ್ಮಣೋತ್ತಮನೇ, ನಿನ್ನ ಹೆಸರೇನು? ಎಲ್ಲಿಂದ ಬಂದೆ? ದಯಮಾಡಿ ಹೇಳು, ಎಂದು ಪ್ರಾರ್ಥಿಸಿದನು. ಅದಕ್ಕೆ ವಿಠೋಬನು—ಗಂಗಾತೀರದಲ್ಲಿ 'ಆಪೆಗಾವ' ಎಂಬ ಊರು ಇರುವದು. ನಾನು ಆ ಊರ ಕುಲಕರಣಿಯ ಮಗನು. ಅಲ್ಲಿ ಮುದುಕರಾದ ನನ್ನ ತಾಯಿ ತಂದೆಗಳು ಇರುವರು. ನಾನು ದ್ವಾರಾವತಿಯೇ ಮೊದಲಾದ ಕ್ಷೇತ್ರಗಳನ್ನು ಸಂಚರಿಸುತ್ತ ಇಲ್ಲಿಗೆ ಬಂದೆನು, ಎಂದು ಹೇಳಲು, ಸಿಧೋಪಂತನು—ಸ್ವಾಮೀ, ಇಂದಿನ ದಿನವು ಧನ್ಯವಾದದ್ದು. ಅಂತೇ, ಸ್ವಾಮಿಗಳ ಆಗಮನವಾಯಿತು. ಇನ್ನು ನನ್ನ ಮನೆಗೆ ಬಂದು, ಆಶ್ರಮವನ್ನು ಪವಿತ್ರವಾಗ ಮಾಡಬೇಕು, ಎಂದು ಪ್ರಾರ್ಥಿಸಿ, ವಿಠೋಬನನ್ನು ತನ್ನ ಮನೆಗೆ ಕರಕೊಂಡು ಬಂದನು.

ಸಿಧೋಪಂತನು ಬ್ರಹ್ಮಚಾರಿಯನ್ನು ಪರಿಪರಿಯಿಂದ ಸತ್ಕರಿಸಿದನು. ಆತನಿಗೆ ಮಿಷ್ಟಾನ್ನ ಭೋಜನ ಮಾಡಿಸಿ, ಸುಖದಿಂದ ನಿದ್ದೆ ಹತ್ತಬೇಕೆಂದು ಹಾಸಿಗೆಯನ್ನು ಹಾಸಿಕೊಟ್ಟನು. ಹಾದಿಯ ನಡಿದು ದಣಿದಿದ್ದ ಬ್ರಹ್ಮಚಾರಿಗೆ ಗಡದ್ದು ನಿದ್ದೆಯು ಹತ್ತಿತು. ಇತ್ತ ಪಾಂಡುರಂಗನು ಸಿಧೋಪಂತನ ಕನಸಿನಲ್ಲಿ ಬಂದು ಈಗ ನಿನ್ನ ಮನೆಗೆ ಬಂದಿರುವ ಬ್ರಹ್ಮಚಾರಿಗೆ ನಿನ್ನ ಮಗಳನ್ನು ಕೊಟ್ಟು ಲಗ್ನಮಾಡೆಂದು ಹೇಳಿದನು. ಈ ಸ್ವಪ್ನವೃತ್ತಾಂತವನ್ನು ನೆನಿಸಿ, ಸಿಧೋಪಂತನಿಗೆ ಬಹಳ ಆನಂದವಾಯಿತು. ಆತನು ಮರುದಿವಸ ಸ್ನಾನಸಂಧ್ಯಾದಿ ಕರ್ಮಗಳನ್ನು ತೀರಿಸಿಕೊಂಡು, ಬ್ರಹ್ಮಚಾರಿಯ ಬಳಿಗೆ ಬಂದು, ಸ್ವಪ್ನದ ಸಂಗತಿಯನ್ನು ತಿಳಿಸಿದನು. ಅದಕ್ಕೆ ಬ್ರಹ್ಮಚಾರಿಯು—ನೀವು ಹೇಳುವದೆಲ್ಲ ಸರಿ; ಆದರೆ ಪಂಢರಿನಾಥನು ನನಗೆ ಏನೂ ಅಪ್ಪಣೆ ಕೊಟ್ಟಿಲ್ಲವಲ್ಲ! ಎಂದು ಕೇಳಲು. ಸಿಧೋಪಂತನು—ಬ್ರಾಹ್ಮಣೋತ್ತಮನೇ, ನೀನು ಈ ಹೊತ್ತಿನ ದಿವಸ ಇಲ್ಲಿಯೇ ಇರಬೇಕು. ನನಗೆ ಬಿದ್ದ ಸ್ವಪ್ನವು ನಿಜವಾದದ್ದಿದ್ದರೆ, ನಿನಗಾದರೂ ಈ ದಿನ ನಿಶ್ಚಯವಾಗಿ ಸ್ವಪ್ನವೃತ್ತಾಂತವಾಗುವದು, ಎಂದು ಹೇಳಿದನು.

ಸಿಧೋಪಂತನ ಈ ಮಾತಿಗೆ ಬ್ರಹ್ಮಚಾರಿಯು ಒಪ್ಪಿಕೊಂಡನು. ಆತನು ವೃಂದಾವನದ ಕಟ್ಟೆಯ ಮೇಲೆ ಆಸನವನ್ನು ಹಾಕಿಕೊಂಡು ಮಲಗಿಕೊಳ್ಳಲು ಸಂಕಲ್ಪ ವಿಕಲ್ಪದಿಂದ ಕೂಡಿದ ಮನಸ್ಸಿನ ಆ ಬ್ರಹ್ಮಚಾರಿಗೆ ಸ್ವಪ್ನವು ಬಿದ್ದಿತು. ಪಂಢರೀನಾಥನು ಸ್ವಪ್ನದಲ್ಲಿ ಬ್ರಹ್ಮಚಾರಿಯನ್ನು ಕುರಿತು—ಎಲೈ ಬ್ರಹ್ಮ ಚಾರಿಯೇ, ಬ್ರಹ್ಮ-ವಿಷ್ಣು-ಮಹೇಶ್ವರರ ಹಾಗೂ ಆದಿಮಾಯೆಯ ಈ ನಾಲ್ಕು ಅವತಾರಗಳು ಈ ಸಿಧೋಪಂತನ ಮಗಳ ಹೊಟ್ಟೆಯಲ್ಲಿ ಆಗುವವು. ನನ್ನ ಅಪ್ಪಣೆಯನ್ನು ಮನ್ನಿಸಿ, ನೀನು ಆಕೆಯನ್ನು ಕನ್ಯಾದಾನವಾಗಿ ಸ್ವೀಕರಿಸ ಬೇಕು, ಎಂದು ಹೇಳಿದನು. ಎಚ್ಚತ್ತಕೂಡಲೆ ಬ್ರಹ್ಮಚಾರಿಯು ಎದ್ದು ಕುಳಿತು ಸಿಧೋಪಂತನಿಗೆ ಸ್ವಪ್ನವೃತ್ತಾಂತವನ್ನು ಹೇಳಿ, ಲಗ್ನಮಾಡಿಕೊಳ್ಳಲಿಕ್ಕೆ ಒಪ್ಪಿ ಕೊಂಡನು. ಬ್ರಾಹ್ಮಣರು ಘಟಿತಾರ್ಥವನ್ನು ನೋಡಲು, ಮೂವತ್ತಾರು ಗುಣಗಳು ಕೂಡಿಬಂದವು. ಲಗ್ನಮುಹೂರ್ತವು ಗೊತ್ತಾಯಿತು. ಎಲ್ಲ ಸಾಹಿತ್ಯ ಗಳು ಸಿದ್ಧವಾದವು. ನಾಂದೀಸ್ಥಾಪನವಾಯಿತು. ವಿಘ್ನನಿವಾರಣಾರ್ಥವಾಗಿ ಗಣಪತಿಯನ್ನು ಪೂಜಿಸಿದರು. ಮಂಗಲವಾದ್ಯಗಳು ಬಾರಿಸ ಹತ್ತಿದವು. ಪುಣ್ಯಾ ಹವಾಚನವು ನೆರವೇರಿತು. ಬ್ರಾಹ್ಮಣಭೋಜನವಾಯಿತು. ಸೀಮಾಂತಪೂಜನ ವಾದ ಬಳಿಕ ಬ್ರಾಹ್ಮಣರು ಮಂಗಲಾಷ್ಟಕಗಳನ್ನು ಅಂದರು. ಹಲವು ಮಂಗಲ ವಾದ್ಯಗಳು ಬಾರಿಸ ಹತ್ತಿರಲು, ಪಾಣಿಗ್ರಹಣದ ಕಾರ್ಯವು ಸಾಂಗವಾಯಿತು. ನಾಲ್ಕುದಿನ ಲಗ್ನಮಹೋತ್ಸವವಾಯಿತು. ಬ್ರಹ್ಮಚಾರಿಯಾದ ವಿಠೋಬನು, ಲಗ್ನಮಾಡಿಕೊಂಡು ವಿಠ್ಠಲಪಂತನಾದನು. ವಿಠ್ಠಲಪಂತನು ಆಷಾಢಮಾಸದಲ್ಲಿ ಪಂಢರಪುರಕ್ಕೆ ಹೋಗಬೇಕೆಂದು ಮಾವನನ್ನು ಕೇಳಿಕೊಂಡನು. ಆದಕ್ಕೆ ಸಿಧೋಪಂತನು ಒಪ್ಪಿಕೊಂಡು, ಕುಟುಂಬಸಹಿತವಾಗಿ ಪಂಢರಪುರದ ಯಾತ್ರೆಗೆ ಹೊರಟನು.

ಪಂಢರಪುರವನ್ನು ಹೋಲುವ ಅನ್ಯಕ್ಷೇತ್ರವು ಭೂಮಂಡಲದಲ್ಲಿ ದೊರೆ ಯಲಾರದು. ಬಂಗಾರದಂಥ ಬೇರೆ ಧಾತುವೂ, ಗೀತಾಶಾಸ್ತ್ರದಂಥ ಬೇರೆ ಶಾಸ್ತ್ರವೂ ದೊರೆಯುವದು ದುರ್ಲಭವಾಗಿರುವಂತೆ, ಪಂಢರೀಕ್ಷೇತ್ರದಂಥ ಬೇರೆ ಕ್ಷೇತ್ರವು ದೊರೆಯುವದು ದುರ್ಲಭವೇ ಸರಿ, ಮೋಕ್ಷದಾಯಕಗಳಾದ ಅಯೋಧ್ಯಾ, ಮಥುರಾ ಮುಂತಾದ ಸಪ್ತಪುರಿಗಳಿಗಿಂತಲೂ ಪಂಢರಿಯು ಹ್ಯಾಗೆ ಹೆಚ್ಚಿನದೆಂದು ಯಾರಾದರೂ ಕೇಳಬಹುದು; ಆದರೆ, ಅನ್ಯ-ಕ್ಷೇತ್ರ- ತೀರ್ಥಗಳಲ್ಲಿ ಸ್ನಾನಮಾಡುತ್ತಲೆ ಅಭಿಮಾನವು ಹೆಚ್ಚುತ್ತಿರಲು, ಪಂಢರಿಯ

ದರ್ಶನದಿಂದ ಅಭಿಮಾನವು ನಾಶವಾಗುತ್ತದೆಂಬದನ್ನು ಅವರು ನೆನಪಿನಲ್ಲಿಡಬೇಕು. ದೂರದಿಂದ ಪಂಢರಿಯ ದರ್ಶನವಾಗುತ್ತಲೆ, ದುಷ್ಟನ ಮನಸ್ಸಾದರೂ ಕರಗು ವದು. ಇರಲಿ, ಸಿಧೋಪಂತನು ಸಕುಟುಂಬವಾಗಿ ಪಂಢರಿಗೆ ಬಂದು, ಚಂದ್ರ ಭಾಗದಲ್ಲಿ ಸ್ನಾನವನ್ನು ಮಾಡಿ, ಪಾಂಡುರಂಗನನ್ನು ನಮಿಸಿದನು. ಆತನು ಅಳಿಯನೊಂದಿಗೆ ಪಂಢರಿಯಲ್ಲಿ ಆನಂದದಿಂದ ವಾಸಿಸಿದನು. ಆ ಪುಣ್ಯಕ್ಷೇತ್ರದಲ್ಲಿ ವೈಷ್ಣವರು ವೀಣಾ-ಮೃದಂಗ-ತಾಳಗಳ ನಾದದೊಡನೆ ಚಪ್ಪಳೆಯಿಕ್ಕುತ್ತ ಕುಣಿ ಯುತ್ತ ಹರಿಭಜನೆ ಮಾಡುವದನ್ನು, ಕಂಡು ಕೈಲಾಸಪತಿಯಾದ ಶಂಕರನು ಕೌತು ಕದಿಂದ, ಆನಂದದಿಂದ ತಲೆದೂಗುತ್ತಿರುವನು. ಸಿಧೋಪಂತನು ಸಕುಟುಂಬ ವಾಗಿ ಕ್ಷೇತ್ರಪ್ರದಕ್ಷಿಣೆಯನ್ನು ಮಾಡಿ, ಮಹಾದ್ವಾರಕ್ಕೆ ಬಂದು ವಿಠ್ಠಲನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿದನು. ಬಳಿಕ ಆತನು ಮಗಳನ್ನೂ, ಅಳಿಯ ನನ್ನೂ ಕೈಹಿಡಿದು ಕರೆದೊಯ್ದು, ಅವರನ್ನು ವಿಠ್ಠಲನ ಪಾದದ ಮೇಲೆ ಕೆಡವಿ, ತಾನು ವಿಠ್ಠಲನನ್ನು ಆಲಂಗಿಸಿ, ಪರಿವಾರದೊಡನೆ ಅಲಕಾಪುರಿಗೆ ಬಂದನು.

ಊರಿಗೆ ಬಂದ ಬಳಿಕ ವಿಠ್ಠಲಪಂತನು ರಾಮೇಶ್ವರದ ಯಾತ್ರೆಗೆ ಹೋಗು ವದಕ್ಕಾಗಿ ಮಾವನ ಒಪ್ಪಿಗೆಯನ್ನು ಪಡೆದನು. ಆತನು ಶ್ರೀಶೈಲ, ಅಹೋಬಲ ಚಿದಂಬರ, ಗೋಕರ್ಣ ಮೊದಲಾದ ಪುರಾಣಪ್ರಸಿದ್ಧ ಸ್ಥಳಗಳ ಯಾತ್ರೆಯನ್ನು ಮಾಡುತ್ತ ರಾಮೇಶ್ವರಕ್ಕೆ ಮುಟ್ಟಿದನು. ಯಾತ್ರೆಯ ಇಚ್ಛೆಯು ಪೂರ್ಣವಾದ ಬಳಿಕ ಆತನು ತಿರುಗಿ ಊರಿಗೆ ಹೊರಟು, ಕೊಲ್ಲಾಪುರ, ಮಾಹುಲಿ ಮೊದಲಾದ ಯಾತ್ರೆಗಳಿಗೆ ಹೋಗಿ, ಅಲಕಾಪುರಿಗೆ ಬಂದನು. ಯಾತ್ರೆತೀರಿಸಿಕೊಂಡು ಬಂದ ಅಳಿಯನನ್ನು ನೋಡಿ, ಸಿಧೋಪಂತನಿಗೆ ಬಹಳ ಸಂತೋಷವಾಯಿತು. ವಿಠ್ಠಲಪಂತನು ಪ್ರೀತಿಯಿಂದ ಮಾವನನ್ನು ಅಪ್ಪಿಕೊಂಡು, ಸಾಷ್ಟಾಂಗವಾಗಿ ವಂದಿಸಿದನು. ನಾಲ್ಕುದಿನ ಮಾವನ ಮನೆಯಲ್ಲಿ ಇದ್ದ ಬಳಿಕ ಆತನು ಮಾವ ನಿಗೆ—ಹಿರಿಯರೇ, ನಾನು ಮುದುಕರಾದ ತಂದೆ-ತಾಯಿಗಳನ್ನು ಕಾಣಲಿಚ್ಛಿಸು ತ್ತೇನೆ. ಅಪ್ಪಣೆಕೊಟ್ಟರೆ. ಬೇಗನೆ ಹೋಗಿ ಬರುವೆನು, ಎನ್ನಲು, ಸಿಧೋ ಪಂತನು—ಓಹೋ! ನಿಮ್ಮ ಹೆಂಡತಿಯನ್ನು ಕರಕೊಂಡು ಹೋಗಿ, ಅವಶ್ಯ ವಾಗಿ ತಾಯಿ-ತಂದೆಗಳ ದರ್ಶನವನ್ನು ತಕ್ಕೊಳ್ಳತಕ್ಕದ್ದು. ನಾವೂ ನಿಮ್ಮನ್ನು ಕಳಿಸಲಿಕ್ಕೆ ಬರುತ್ತೇವೆ. ಅನಾಯಾಸವಾಗಿ ಗೋವಿಂದಪಂತರ ದರ್ಶನವು ನಮ ಗಾಗುವದು, ಎಂದು ನುಡಿದು, ಆತನು ಎಲ್ಲ ಪರಿವಾರದೊಡನೆ ಆಪೇಗಾವಕ್ಕೆ ಹೊರಟನು.

ಬಹುದಿವಸಕ್ಕೆ ಮಗನು ಬಂದದ್ದನ್ನು ನೋಡಿ, ಮುಪ್ಪಿನ ತಾಯಿ-ತಂದೆಗಳಿಗೆ ಹಿಡಿಸಲಾರದಷ್ಟು ಆನಂದವಾಯಿತು. ವಿಠ್ಠಲಪಂತನು ತಾಯಿ-ತಂದೆಗಳ ಚರಣಕ್ಕೆ ಸಾಷ್ಟಾಂಗವಾಗಿ ವಂದಿಸಿದನು. ಸಿಧೋಪಂತನು ಗೋವಿಂದಪಂತನನ್ನೂ, ನೀರಾಬಾಯಿಯನ್ನೂ ವಂದಿಸಿ ಯಾವತ್ತು ವರ್ತಮಾನವನ್ನು ಹೇಳಲು, ನೀರಾಬಾಯಿಗೆ ಬಹಳ ಸಂತೋಷವಾಯಿತು. ಆಕೆಯು ಸೊಸೆಯ ಮೋರೆಯನ್ನು ನೋಡಿ ಹಿರಿಹಿರಿ ಹಿಗ್ಗಿದಳು. ಜಾನಕಿಯನ್ನು ಲಗ್ನಮಾಡಿಕೊಂಡು ಬಂದ ಶ್ರೀರಾಮನನ್ನು ನೋಡಿ, ಕೌಸಲ್ಯಾಮಾತೆಯು ಸಂತೋಷಬಟ್ಟಂತೆ, ಮಗನನ್ನೂ ಸೊಸೆಯನ್ನೂ ನೋಡಿ ನೀರಾಬಾಯಿಯು ಸಂತೋಷಬಟ್ಟಳು. ಸಿಧೋಪಂತನು ಆ ವೃದ್ಧದಂಪತಿಗಳಿಗೆ ವಸ್ತ್ರಭೂಷಣಗಳನ್ನು ಕೊಟ್ಟು ಮನ್ನಿಸಿ ಅವರ ಅಪ್ಪಣೆಪಡೆದು ತಿರುಗಿ ಆಳಂದಿಗೆ (ಅಲಕಾಪುರಿಗೆ) ಬಂದನು. ಇತ್ತ ಒಂದಾನೊಂದುದಿನ ಆ ಮುದುಕರು ಕಾಲವಶದಿಂದ ವೈಕುಂಠಕ್ಕೆ ತೆರಳಲು, ಸಂಸಾರದ ಭಾರವು ವಿಠ್ಠಲಪಂತನ ಮೇಲೆ ಬಿದ್ದಿತು.

ವಿಠ್ಠಲಪಂತನು ಸಂಸಾರದ ಹೊಲಸನ್ನು ಮೈಗೆ ಹಚ್ಚಿಕೊಳ್ಳದಾದನು. ಆತನು ಸುಖವಾದರೆ ಹಿಗ್ಗುತ್ತಿದ್ದಿಲ್ಲ, ದುಃಖವಾದರೆ ಕೊರಗುತ್ತಿದ್ದಿಲ್ಲ. ಸಮುದ್ರದಂತೆ ಗಂಭೀರವಾಗಿದ್ದನು. ಸಾವಿರಾರು ಹೊಳೆಗಳು ತುಂಬಿ ಹರಿದು ಸಮುದ್ರಕ್ಕೆ ಕೂಡಿದರೂ, ಬೇಸಿಗೆಯಲ್ಲಿ ಸೂರ್ಯನ ಪ್ರಕಾಶದಿಂದ ಸಮುದ್ರದೊಳಗಿನ ನೀರು ಆಟ್ಟಿಸಿದರೂ, ಸಮುದ್ರವು ವೃದ್ಧಿ-ಕ್ಷಯಗಳೆಂಬ ವಿಕಾರಗಳಿಗೆ ಒಳಗಾಗದೆ ಸಮಾನವಾಗಿರುವಂತೆ, ವಿಠ್ಠಲಪಂತನು ಸುಖದುಃಖಗಳಲ್ಲಿ ಸಮಭಾವವನ್ನು ವಹಿಸಿ ಇರುತ್ತಿದ್ದನು. ಈ ಸುದ್ದಿಯು ಸಿಧೋಪಂತನಿಗೆ ಹತ್ತಲು, ಆತನು ಅಳಿಯನ ಮನಸ್ಸು ನೊಂದೀತೆಂದು ತಿಳಿದು ಆತನ ಸಮಾಚಾರವನ್ನು ತಕ್ಕೊಳ್ಳುವದಕ್ಕಾಗಿ ಆಪೇಗಾವಕ್ಕೆ ಬಂದನು. ಆತನು ಅಳಿಯನನ್ನು ಕುರಿತು— ನೀವು ವಿರಕ್ತರು, ಉದಾಸೀನರು. ಸಂಸಾರಕ್ಕೆ ನಿತ್ಯಾನಿತ್ಯಗಳಾದ ಪದಾರ್ಥಗಳೆಲ್ಲ ಬೇಕಾಗುವವು. ಇನ್ನು ನೀವು ದಯಮಾಡಿ ಆಳಂದಿಗೆ ಬರಬೇಕು. ಇಲ್ಲಿ ಇದ್ದರೆ, ನಿಮ್ಮ ಯೋಗಕ್ಷೇಮವನ್ನು ಶ್ರೀಹರಿಯು ನೋಡಿಕೊಳ್ಳುತ್ತಿದ್ದರೂ, ಲೋಕಾಚಾರದಲ್ಲಿ ನಿಮ್ಮ ವೈರಾಗ್ಯಸ್ಥಿತಿಯು ವಿಪರೀತವಾಗುವದು, ಎನ್ನಲು, ಮಾವನ ಮಾತಿಗೆ ವಿಠ್ಠಲಪಂತನು ಸಮ್ಮತಿಸಿದನು. ಆಗ ಸಿಧೋಪಂತನು ಸಂತೋಷಬಟ್ಟು, ಅಳಿಯನನ್ನೂ, ಮಗಳನ್ನೂ ಕರಕೊಂಡು ಆಳಂದಿಗೆ ಬಂದನು.

ಕ್ಷೇತ್ರವಾಸದಿಂದ ವಿಠ್ಠಲಪಂತನಿಗೆ ಬಹಳ ಸಮಾಧಾನವಾಯಿತು. ಆತನು ದಿನಾಲು ಹರಿಕೀರ್ತನವನ್ನು ಮಾಡುತ್ತಿದ್ದನು. ಆಷಾಢ-ಕಾರ್ತಿಕ ಮಾಸಗಳ ಏಕಾದಶಿಗೆ ಪಂಢರಪುರದ ಯಾತ್ರೆಗೆ ಹೋಗುತ್ತಿದ್ದನು. ಆತನಿಗೆ ದಿನಾಲು ಸಾಧುಸಂತರ ದರ್ಶನವಾಗುತ್ತಿತ್ತು. ಹೀಗೆ ಬಹು ಕಾಲವು ಕ್ರಮಿಸಿಹೋದರೂ ಹೊಟ್ಟೆಯಲ್ಲಿ ಸಂತಾನವಾಗಲಿಲ್ಲ. ಇದರಿಂದ ವಿಠ್ಠಲಪಂತನ ಮನಸ್ಸು ಉದಾಸೀನವಾಯಿತು. ಆತನು ಹೆಂಡತಿಯನ್ನು ಕುರಿತು—ಪ್ರಿಯೇ, ಸಂತಾನವಾಗದ್ದರಿಂದ ನನ್ನ ಮನಸ್ಸು ಉದಾಸೀನವಾಗಿರುತ್ತದೆ. ನಾನು ಕಾಶಿಗೆ ಹೋಗಿ ಸಂನ್ಯಾಸಗ್ರಹಣಮಾಡಬೇಕೆಂದು ಇಚ್ಛಿಸುತ್ತೇನೆ; ನೀನು ಅಪ್ಪಣೆಯನ್ನು ಕೊಡಬೇಕು, ಎಂದು ಕೇಳಿಕೊಂಡನು. ಅದನ್ನು ಕೇಳಿ ರಖುಮಾಯಿಯು ಮನಸ್ಸಿನಲ್ಲಿ ನೊಂದುಕೊಂಡು, ಚಿಂತೆಯಿಂದ ಆಗ ಏನೂ ಉತ್ತರ ಕೊಡಲಿಲ್ಲ. ಅವಳು ತಂದೆಯ ಒಳಿಗೆ ಹೋಗಿ ಈ ಸಂಗತಿಯನ್ನು ತಿಳಿಸಿದಳು. ಅದನ್ನು ಕೇಳಿ ಸಿಧೋಪಂತನು—ಅಮ್ಮಾ, ಸಂತಾನವಾಗದೆ ಸಂನ್ಯಾಸಗ್ರಹಣಮಾಡಲಾಗದೆಂದು ವೇದಗಳು ಹೇಳುತ್ತವೆ. ನೀನು ಬಹಳ ಎಚ್ಚರವಾಗಿರು. ಗಂಡನಿಗೆ ಸಂನ್ಯಾಸಗ್ರಹಣಕ್ಕೆ ಅನುಮತಿಯನ್ನು ಕೊಟ್ಟೀ, ಎಂದು ಬೋಧಿಸಲು, ರಖುಮಾಯಿಯು ಯಾವಾಗಲೂ ಜಾಗರೂಕಳಾಗಿದ್ದಳು.

ಹೀಗಿರಲು, ಒಂದಾನೊಂದು ದಿನ ವಿಠ್ಠಲಪಂತನು ರಖುಮಾಯಿಯನ್ನು ಕುರಿತು—ಪ್ರಿಯೇ, ನಾನು ಗಂಗಾಸ್ನಾನಕ್ಕೆ ಹೋಗಲಿಚ್ಛಿಸುತ್ತೇನೆ, ನೀನು ಅಪ್ಪಣೆ ಕೊಡಬೇಕು, ಎಂದು ಕೇಳಿಕೊಂಡನು. ಅದಕ್ಕೆ ರಖುಮಾಯಿಯು ನೊಂದ ಮನಸ್ಸಿನಿಂದ ನಿರ್ವಾಹವಿಲ್ಲದೆ ಸಮ್ಮತಿಸಿದಳು. ಇದರಿಂದ ವಿಠ್ಠಲಪಂತನಿಗೆ ಬಹಳ ಸಮಾಧಾನವಾಗಿ, ಆತನು ಕೂಡಲೆ ಆನಂದವನಕ್ಕೆ ಬಂದನು. ನಾಗರಹಾವು ಗಾರುಡಿಗನಿಂದ ಬಿಡುಗಡೆ ಹೊಂದಿ, ಅರಣ್ಯದೊಳಗಿನ ಹುತ್ತವನ್ನು ಪ್ರವೇಶಿಸುವಂತೆಯೂ, ಪಂಜರದೊಳಗಿನ ಹಕ್ಕಿಯು ಹಾರಿ ಗಿಡದಮೇಲೆ ಕುಳಿತುಕೊಳ್ಳುವಂತೆಯೂ, ಹುಲಿಯನಖಪಂಜರದಲ್ಲಿ ಸಿಕ್ಕಿಕೊಂಡಿದ್ದ ಚಿಗರೆಯು ಪಾರಾಗಿ ಜಿಗಿಯುತ್ತ ಹೋಗುವಂತೆಯೂ ವಿಠ್ಠಲಪಂತನು ಸಂಸಾರದಿಂದ ಪಾ-ರಾಗಿ ಆನಂದವನಕ್ಕೆ ಹೋದನು. ಈ ಮೇರೆಗೆ ಸಮಾಧಾನಪಟ್ಟು ಆತನು ಕಾಶಿಗೆ ಬಂದು, ತ್ರಿವೇಣಿಯಲ್ಲಿ ಸ್ನಾನವನ್ನು ಮಾಡಿ, ಮಾಧವನನ್ನು ಪೂಜಿಸಿ, ಪ್ರಯಾಗದಲ್ಲಿ ಮಾಘಸ್ನಾನವನ್ನು ಮಾಡಿದನು. ಅಲ್ಲಿಂದ ಹಿಂದಿರುಗಿ ಆತನು ಪುಷ್ಕರ ತೀರ್ಥಕ್ಕೆ ಬರಲು, ಅಲ್ಲಿ ಬಹು ಜನ ಸಾಧು-ಸಂತರು ವಾಸಿಸುತ್ತಿದ್ದರು.

ಅವರಿಂದ ಭಗವದ್ಗೀತೆಯನ್ನು ಕೇಳುತ್ತಿರುವಾಗ, ಸಂನ್ಯಾಸಯೋಗದಲ್ಲಿ ಆತನ ಮನಸ್ಸು ಕೂತಿತು. ಸಂಸಾರವು ದುಸ್ತರವಾದದ್ದೆಂತಲೂ, ಮಾಯೆಯನ್ನು ದಾಟುವದು ಅಶಕ್ಯವೆಂತಲೂ, ಜನ್ಮ ಮರಣಗಳ ಪರಂಪರೆಯನ್ನು ತಪ್ಪಿಸಿಕೊಳ್ಳುವ ಯತ್ನ ಮಾಡಬೇಕೆಂತಲೂ ಆತನು ನೆನಿಸಿದನು.

ಈ ಮೇರೆಗೆ ಸಂಸಾರದ ವಿಷಯವಾಗಿ ಪೂರ್ಣ ವಿರಕ್ತಿಯನ್ನು ತಾಳಿದ ವಿಠ್ಠಲಪಂತನು ಶ್ರೀರಾಮಾಶ್ರಮ ಸಂನ್ಯಾಸಿಗಳಿಗೆ ಸದ್ಭಾವದಿಂದ ಶರಣುಹೋಗಿ ಸಂನ್ಯಾಸವನ್ನು ಕೊಡಬೇಕೆಂದು ಅವರನ್ನು ಬೇಡಿಕೊಂಡನು. ಆಗ ಯತಿಗಳು—ನಿನ್ನ ಪೂರ್ವಾಶ್ರಮದ ವೃತ್ತಾಂತವೇನು? ಹೆಂಡಿರು-ಮಕ್ಕಳು, ಬಂಧು ಬಳಗದವರು ನಿನಗೆ ಇರುವರೋ? ಎಂದು ಕೇಳಲು. ವಿಠ್ಠಲಪಂತನು—ನನಗೆ ಯಾವ ಪರಿವಾರವೂ ಇಲ್ಲ, ನಾನು ಒಬ್ಬನೇ. ಇದ್ದೇನೆ. ಹೆಂಡಿರು-ಮಕ್ಕಳ ಪಾಶವು ಇಲ್ಲದ್ದರಿಂದ ಪೂರ್ಣಪಶ್ಚಾತ್ತಾಪಬಟ್ಟು ಸದ್ಭಾವದಿಂದ ನಾನು ಸ್ವಾಮಿಗಳವರಿಗೆ ಶರಣು ಬಂದಿದ್ದೇನೆ. ಸಂನ್ಯಾಸದೀಕ್ಷೆಯನ್ನು ಕೊಟ್ಟು ಉದ್ಧರಿಸಬೇಕು, ಎಂದು ಪ್ರಾರ್ಥಿಸಿದನು. ವೈರಾಗ್ಯಶಾಲಿಯೂ, ಸಂತನೂ ಆದ ವಿಠ್ಠಲಪಂತನನ್ನು ನೋಡಿ ಯತಿಗಳು ಯಾಕಾಗಲೊಲ್ಲದೆಂದು ಸಮ್ಮತಿಸಿ, ಮಂತ್ರದೀಕ್ಷೆಯನ್ನು ಕೊಟ್ಟು, ಸಂನ್ಯಾಸವನ್ನು ಸಂಪಾದಿಸಿಕೊಟ್ಟರು.

ಹೀಗೆ ವಿಠ್ಠಲಪಂತನು ಕಾಶಿಯಲ್ಲಿ ಸಂನ್ಯಾಸಗ್ರಹಣಮಾಡಿದ ಸುದ್ದಿಯು ಪರಸ್ಪರವಾಗಿ ಸಿಧೋಪಂತನಿಗೆ ಹತ್ತಿತು. ಗಂಡನು ಸಂನ್ಯಾಸಿಯಾದದ್ದನ್ನು ಕೇಳಿ, ರಖುಮಾಯಿಯು ಬಹು ವ್ಯಸನಪಟ್ಟು—ಅಯ್ಯೋ! ನನ್ನ ಪ್ರಾಣನಾಥನು ಈ ಅರಣ್ಯದಲ್ಲಿ ನನ್ನನ್ನು ಬಿಟ್ಟು ಯಾಕೆ ಹೋಗಿದ್ದಾನು? ಎಂದು ಚಿಂತಿಸಿದಳು. ಪಾಂಡವರ ವಿಯೋಗದಿಂದ ಸತಿಯಾದ ದ್ರೌಪದಿಯು ದುಃಖಿಸುವಂತೆಯೂ, ನಳನ ವಿಯೋಗದಿಂದ ದಮಯಂತಿಯು ಗೋಳಾಡುವಂತೆಯೂ, ಗಂಡನು ಸಂನ್ಯಾಸಿಯಾದದ್ದನ್ನು ಕೇಳಿ ಪತಿವ್ರತೆಯಾದ ರಖುಮಾಯಿಯು ಅತ್ತು ಆಕ್ರೋಶ ಮಾಡತೊಡಗಿದಳು. ಆಗ ತಾಯಿ-ತಂದೆಗಳು ಆಕೆಯನ್ನು ಪರಿಪರಿಯಿಂದ ಸಮಾಧಾನಗೊಳಿಸಲು, ಆಕೆಯ ಚಿತ್ತವು ಸಮಾಧಾನವನ್ನು ಹೊಂದಿತು. ಆಕೆಯು ಧೈರ್ಯದಿಂದ ಮನಸ್ಸನ್ನು ಜಿಗಿದು ಒಡಿದಳು. ಸಂಸಾರದಲ್ಲಿ ದೇಹವನ್ನು ಸಾರ್ಥಕವಾಗಮಾಡಬೇಕೆಂದು ಅಶ್ವತ್ಥನ ಸೇವೆಯನ್ನು ಮಾಡತೊಡಗಿದಳು. ಆಕೆಯ ಪ್ರಬಲವಾದ ಅನುಷ್ಠಾನದಿಂದ ಆಕೆಯಲ್ಲಿದ್ದ ದೋಷಗಳೆಲ್ಲ ನಷ್ಟವಾದವು. ಹೀಗೆ ಅಶ್ವತ್ಥ ಸೇವೆಯಿಂದ ಪವಿತ್ರಳಾದ ರಖುಮಾಯಿಯು ಸೇವಾತತ್ಪರಳಾಗಿ ಕಾಲ

ವನ್ನು ಕ್ರಮಿಸುತ್ತಿರಲು, ಆಕೆಯು ಗಂಡನಿಗೆ ಸಂನ್ಯಾಸದೀಕ್ಷೆಯನ್ನು ಕೊಟ್ಟಿದ್ದ ಶ್ರೀ ರಾಮಾಶ್ರಮ ಸಂನ್ಯಾಸಿಗಳು ಒಂದು ದಿನ ಅಕಸ್ಮಾತ್ತಾಗಿ ಅಶ್ವತ್ಥಸೇವೆಯು ನಡೆದಲ್ಲಿಗೆ ಬಂದರು.

---

## ೨ನೆಯ ಪ್ರಕರಣ:—ತ್ರಿಮೂರ್ತಿಗಳ ಅವತಾರ.

ಯತಿಗಳನ್ನು ನೋಡಿ ಆ ಪುಣ್ಯವಂತಳು ನಮಸ್ಕರಿಸುವದಕ್ಕಾಗಿ ಮುಂದು ವರಿದಳು. ಯತಿಗಳು ಅಶ್ವತ್ಥದ ಪೀಠದ ಮೇಲೆ ಕುಳಿತುಕೊಂಡರು. ರಖುಮಾಯಿಯು ಭಕ್ತಿಯಿಂದ ವಂದಿಸಲು, ಆ ಮಹಾತ್ಮರು—"ಅಷ್ಟಪುತ್ರಸೌಭಾಗ್ಯವತೀಭವ" ಎಂದು ಆಕೆಯನ್ನು ಆಶೀರ್ವದಿಸಿದರು. ಅದನ್ನು ಕೇಳಿ ರಖುಮಾಯಿಯು ಪರಮಾಶ್ಚರ್ಯಪಟ್ಟು, ಮನಸ್ಸಿನಲ್ಲಿ ನಕ್ಕಳು. ಆಗ ಶ್ರೀಪಾದರು--ತಾಯೇ, ನೀನು ಮನಸ್ಸಿನಲ್ಲಿ ನಕ್ಕ ಕಾರಣವೇನು? ಎಂದು ಕೇಳಲು, ರಖುಮಾಯಿಯು—ಸ್ವಾಮಿ, "ಪುತ್ರವತಿಯಾಗೆಂದು ನನ್ನನ್ನು ನೀವು ಆಶೀರ್ವದಿಸಿದಿರಿ; ಆದರೆ ಗಂಡನಿಲ್ಲದೆ ಪುತ್ರವತಿಯಾಗುವ ಬಗೆಯೇನು? ಗಂಡನು ನನಗೆ ಸಂತತಿಯಾಗಲಿಲ್ಲೆಂದು ಅನುತಾಪಪಟ್ಟು, ಸಂನ್ಯಾಸವನ್ನು ಗ್ರಹಿಸಿದನು. ಈ ಸ್ಥಿತಿಯಲ್ಲಿ ನಿಮ್ಮ ಆಶೀರ್ವಾದವನ್ನು ನೆನೆದು ಮನಸ್ಸಿನಲ್ಲಿ ವಿಕಲ್ಪವು ಉತ್ಪನ್ನವಾಯಿತು. ಅಗ್ನಿಕುಂಡದಲ್ಲಿ ಬೀಜವನ್ನು ಬಿತ್ತಿದಂತೆ ನನ್ನನ್ನು ಆಶೀರ್ವದಿಸುವಾಗ ಯಾವ ವಿಚಾರವನ್ನೂ ಮಾಡುವದಾಗಲಿಲ್ಲ. ಕುರುಡನ ಮುಂದೆ ಕನ್ನಡಿಯನ್ನು ಹಿಡಿದಂತೆಯೂ, ರೋಗಿಯ ಮುಂದೆ ಪಕ್ವಾನ್ನಗಳನ್ನು ಒಡಿಸಿದಂತೆಯೂ ತಮ್ಮ ಆಶೀರ್ವಚನವು ವ್ಯರ್ಥವಾಯಿತು. ನನ್ನ ಕರ್ಮಗತಿಯನ್ನು ನೋಡದೆ ಆಶೀರ್ವದಿಸೋಣವಾಯಿತು. ಇನ್ನು ದೊಡ್ಡವರ ಆಶೀರ್ವಾದವೂ ಸುಳ್ಳಾಗಲರಿಯದು. ಈ ವಿರುದ್ಧ ಸಂಗತಿಗಳು ಮನಸ್ಸಿನಲ್ಲಿ ಬರಲು, ವಿನೋದಪಟ್ಟೆನು, ಎಂದು ಹೇಳಿದಳು.

ರಖುಮಾಯಿಯ ಈ ಮಾತುಗಳನ್ನು ಕೇಳಿ ಯತಿಗಳು ಆಶ್ಚರ್ಯಪಟ್ಟು--ಅಮ್ಮಾ, ನಿನ್ನ ಗಂಡನಿಗೆ ಸಂನ್ಯಾಸದೀಕ್ಷೆಯನ್ನು ಕೊಡುವವನಿಗೆ ಪ್ರಾಯಶ್ಚಿತ್ತ ಕೊಡಬೇಕಾದೀತು. ಸಂತಾನವಿಲ್ಲದ ತರುಣಸ್ತ್ರೀಯನ್ನು ಬಿಟ್ಟು ಸಂನ್ಯಾಸಗ್ರಹಣ ಮಾಡಿದರೆ, ಗುರುಶಿಷ್ಯರಿಬ್ಬರಿಗೂ ಶಾಸ್ತ್ರವು ಶಿಕ್ಷೆಯನ್ನು ಹೇಳಿರುತ್ತದೆ. ಗುರು

ತು-ಪರಿಚಯು ಕೇಳಹೋದರೆ ನನ್ನ ಮೇಲೆಯೇ ಮಾತು ಹೊರುವ ಹಾಗೆ ಕಾಣುತ್ತದಲ್ಲಾ! ಸುದ್ದಿಯನ್ನು ಕೇಳಹೋದರೆ, ಗುದ್ದಿಯು ಕೊರಳೊಳಗೆ ಬರುವದೋ ಏನು! ತನ್ನಲ್ಲಿ ಕಲಂಕವಿರಲು, ಚಂದ್ರನು ನಕ್ಷತ್ರಗಳನ್ನು ನೋಡಿ ನಗುವಂತೆಯೂ, ಹುಟ್ಟುಗುರುಡನು ಸೂರ್ಯನ ಮೇಲೆ ತಪ್ಪು ಹೊರಿಸುವಂತೆಯೂ ಪಾಪಮಾಡಿದ ಈ ಸ್ತ್ರೀಯು ಮಂದಿಯ ಮೇಲೆ ಹೊರಿಸುತ್ತಾಳಲ್ಲ! ಈಕೆಯ ಪಾಪಗಳಿಂದ ನಮ್ಮ ಪುಣ್ಯವು ನಾಶಹೊಂದುವಂತೆ ತೋರುತ್ತದೆ, ಎಂದು ಯೋಚಿಸಿ, ರಖುಮಾಯಿಗೆ—ಅವ್ವಾ, ನಿನಗೆ ಆಪ್ತೇಷ್ಟರು ಯಾರಾದರೂ ಇರುವರೇ? ಎಂದು ಕೇಳಲು, ರಖುಮಾಯಿಯು ವಿನಯದಿಂದ ಸ್ವಾಮಿ, ತಾಯಿತಂದೆ, ಅಕ್ಕತಂಗಿ, ಅಣ್ಣತಮ್ಮಂದಿರು, ಎಲ್ಲರೂ ಇದ್ದಾರೆ; ಆದರೆ ಪತಿಯೊಬ್ಬನು ಇಲ್ಲದ್ದರಿಂದ ಜನರಲ್ಲಿ ನಾನು ದುರ್ದೈವಿಯಾಗಿದ್ದೇನೆ, ಎಂದು ಹೇಳಿದಳು. ಆಗ ಯತಿಗಳು ನಿನ್ನ ತಂದೆಯನ್ನು ಕರಕೊಂಡು ಬಾರೆಂದು ಆಜ್ಞಾಪಿಸಲು, ಆಕೆಯು ಬೇಗನೆ ಸಿಧೋಪಂತನನ್ನು ಕರತಂದಳು.

ಸಿಧೋಪಂತನು ಯತೀಶ್ವರರನ್ನು ನೋಡಿ ಸಾಷ್ಟಾಂಗವಾಗಿ ವಂದಿಸಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಬೇಗನೆ ಭೋಜನವನ್ನು ತೀರಿಸಿದನು. ಬಳಿಕ ಆತನು ಕೈಜೋಡಿಸಿ ಯತಿಗಳನ್ನು ಕುರಿತು—ಸ್ವಾಮಿ, ತಮ್ಮ ಆಗಮನವು ಎತ್ತ ಕಡೆಯಿಂದ ಆಯಿತು? ಇನ್ನು ಮೇಲೆ ಪ್ರಯಾಣವೆತ್ತ? ಇದನ್ನು ಈ ದಿನ ನನಗೆ ಹೇಳಬೇಕು, ಎಂದು ಪ್ರಾರ್ಥಿಸಿದನು. ಅದಕ್ಕೆ ಯತಿಗಳು—ನಮ್ಮ ಆಶ್ರಮವು ಕಾಶಿಯಲ್ಲಿರುವದು. ರಾಮೇಶ್ವರಕ್ಕೆ ಹೋಗಬೇಕೆಂದು ದಕ್ಷಿಣದೇಶದಲ್ಲಿ ಸಂಚರಿಸುತ್ತ ನಿಮ್ಮಲ್ಲಿಗೆ ಬಂದೆವು. ನಿಮ್ಮ ಮಗಳು ಎಲ್ಲ ವೃತ್ತಾಂತವನ್ನು ಹೇಳಿದ್ದಾಳೆ. ಇನ್ನು ನಾವು ಬೇಗನೆ ಕಾಶಿಗೆ ತಿರುಗಿ ಹೋಗಬೇಕಾಗಿರುವದು. ಈಕೆಯ ದೋಷದಿಂದ ನಮ್ಮ ಪುಣ್ಯವೆಲ್ಲ ಕ್ಷೀಣವಾಗುವ ಹೊತ್ತು ಬಂದಿದೆ. ನೀವು ರಖುಮಾಯಿಯನ್ನು ಕರಕೊಂಡು ಆನಂದವನಕ್ಕೆ ಬರಬೇಕು, ಎಂದು ನುಡಿಯಲು, ಸಿಧೋಪಂತನು ಯತಿಯ ಚರಣಕ್ಕೆ ನಮಿಸಿ—ಸ್ವಾಮಿ, ತಾವು ಪರಮದಯಾಳುಗಳು. ಅಂತೇ ತಿರುಗಿ ಹೋಗಲಿಕ್ಕೆ ಇಷ್ಟು ಆತುರಪಡುತ್ತಿರುವಿರಿ, ಎಂದು ನುಡಿದು ಮಗಳನ್ನು ಕರಕೊಂಡು ಯತೀಶ್ವರರನ್ನು ಹಿಂಬಾಲಿಸಿದನು.

ಮಾರ್ಗವನ್ನು ಕ್ರಮಿಸುತ್ತ ಅವರೆಲ್ಲರೂ ಕಾಶಿಗೆ ಮುಟ್ಟಿದರು. ಆಗ ಶ್ರೀಪಾದರು, ತಮ್ಮ ಆಶ್ರಮಕ್ಕೆ ಹೋಗಿ ಚೈತನ್ಯನನ್ನು ಕರೆದು—ಚೈತನ್ಯಾ,

ಗೃಹಸ್ಥಾಶ್ರಮದಲ್ಲಿ ನಿನಗೆ ಹೆಂಡತಿಯು ಇದ್ದಳೋ ಇಲ್ಲವೋ? ಸತ್ಯವಾಗಿ ಹೇಳು. ನಮ್ಮ ಮುಂದೆ ಯಾವ ಮಾತನ್ನೂ ಮುಚ್ಚಬೇಡ. ನಿನಗೆ ಅಭಯವನ್ನು ಕೊಟ್ಟಿದ್ದೇವೆ, ಎಂದರು. ತಪ್ಪುಗಾರನಾದ ಮಗನು ತಾಯಿಯ ಬೆದರಿಕೆಗೆ ಅಂಜುವಂತೆಯೂ, ಅಪರಾಧಿಯಾದ ಚೈತನ್ಯನು ಶಾಪದ ಭಯದಿಂದ ಗುರುಗಳ ಮುಂದೆ ಮಾತಾಡಲಿಕ್ಕೆ ಅಂಜಿದನು. ಆತನು ಕೈಜೋಡಿಸಿಕೊಂಡು ಗುರುಗಳನ್ನು ಕುರಿತು—ಸ್ವಾಮೀ, ಗೃಹಸ್ಥಾಶ್ರಮದಲ್ಲಿ ನನಗೆ ಪ್ರಾಯಸ್ಥಳಾದ ಹೆಂಡತಿಯು ಇದ್ದಳು; ಸಂತಾನವಾಗದಿರಲು, ಉದಾಸೀನನಾಗಿ ಆಕೆಯನ್ನು ಬಿಟ್ಟು ಸಂನ್ಯಾಸವನ್ನು ಗ್ರಹಿಸಿದೆನು, ಎಂದು ಹೇಳಿದನು. ಗುರುಗಳು ಅದನ್ನು ಕೇಳಿ ರಖುಮಾಯಿಯನ್ನು ಕರೆದು, ಚೈತನ್ಯನಿಗೆ—ನೀನು ನಿನ್ನ ಹೆಂಡತಿಯನ್ನು ಕರಕೊಂಡು ಸ್ವದೇಶಕ್ಕೆ ಹೋಗಿ ಸ್ವಧರ್ಮವನ್ನು ಆಚರಿಸಬೇಕು. ಅವಿಧಿಕರ್ಮದ ಭಯವನ್ನೂ, ಇಲ್ಲದ ವಿಕಲ್ಪವನ್ನೂ ಮನಸ್ಸಿನಲ್ಲಿ ಎಣಿಸಲಾಗದು. ನಿನಗೆ ನಮ್ಮ ಆಜ್ಞೆಯೇ ಪ್ರಮಾಣವು. ಹೃಷೀಕೇಶನ ಸಹಾಯವು ನಿನಗೆ ಒದಗುವದು, ಎಂದು ಹೇಳಿದರು. ಈ ಮೇರೆಗೆ ಗುರುಗಳು ಆಶೀರ್ವದಿಸಿದ್ದನ್ನು ಕೇಳಿ; ಚೈತನ್ಯನು ಗುರುಚರಣಕ್ಕೆ ಸಾಷ್ಟಾಂಗವಾಗಿ ನಮಸ್ಕರಿಸಿ, ಹೆಂಡತಿಯೊಡನೆ ಸ್ವದೇಶಕ್ಕೆ ತೆರಳಿದನು. ವಿಂಧ್ಯಾಚಲನು ಗುರುಗಳಾದ ಅಗಸ್ತ್ಯರ ಅಪ್ಪಣೆಯನ್ನು ಅನುಸರಿಸಿ ಭೂಮಿಯಲ್ಲಿ ಮಲಗಿಕೊಂಡಂತೆ, ಚೈತನ್ಯನು ಗುರುಗಳ ಅಪ್ಪಣೆಯನ್ನು ಪಾಲಿಸಿ ಹೆಂಡತಿಯನ್ನು ಕರಕೊಂಡು ತಿರುಗಿ ಗೃಹಸ್ಥಾಶ್ರಮವನ್ನು ತಾಳಿ ಊರಿಗೆ ಬಂದನು.

ಸಿಧೋಪಂತನು ಮಗಳನ್ನೂ, ಅಳಿಯನನ್ನೂ ಕರಕೊಂಡು ಆಳಂದಿಗೆ ಬಂದದ್ದನ್ನು ಕೇಳಿ, ನೀಚರು ಹುಡುಗಾಟಿಗೆ ಮಾಡಿ ನಗಹತ್ತಿದರು. ಅವರಲ್ಲಿ ಒಬ್ಬನು—ಸಂನ್ಯಾಸವನ್ನು ಗ್ರಹಿಸಿದ ಬಳಿಕ ತಿರುಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಲಿಕ್ಕೆ ಹ್ಯಾಗೆ ಬರುವದು? ಬುದ್ಧಿಪಲ್ಲಟವಾಯಿತು. ಹೀಗೆ ಮಾಡುವದು ಬಹುದೊಡ್ಡ ಪಾಪವು, ಎಂದು ತಿರಸ್ಕರಿಸಿದನು. ಮತ್ತೊಬ್ಬನು ಇದು ವಿಷಯ ಲಂಪಟರ ಕೆಲಸವೆಂದು ಹೀಯಾಳಿಸಿದನು. ಇನ್ನೊಬ್ಬನು—ಇಂಥ ಭ್ರಷ್ಟರ ಮುಖಾವಲೋಕನವನ್ನು ಮಾಡಲಾಗದೆಂದು ನಿಂದಿಸುವನು. ಆಪ್ತರು ಚೈತನ್ಯನನ್ನು ಬಿಟ್ಟುಕೊಟ್ಟರು. ಬ್ರಾಹ್ಮಣರು ಆತನಿಗೆ ಬಹಿಷ್ಕಾರವನ್ನು ಹಾಕಿದರು. ಆದರೂ ಚೈತನ್ಯನು ಅಸಮಾಧಾನಪಡಲಿಲ್ಲ. ನಾಯಿಯ ಬೊಗಳಿಕೆಗೆ ಆನೆಯು ಬೆದರದಂತೆ, ಚೈತನ್ಯನು ಜನನಿಂದೆಯನ್ನು ಲೆಕ್ಕಿಸದಾದನು. ಕಾಮಕ್ರೋಧಾದಿ

ಗಳಿಗೆ ಆತನಲ್ಲಿ ಅನುವು ದೊರೆಯಲಿಲ್ಲ. ಆತನು ಅಡವಿಯಲ್ಲಿ ಗುಡಿಸಲು ಕಟ್ಟಿಕೊಂಡು ಭಿಕ್ಷೆಯಿಂದ ಕುಟುಂಬ—ಪೋಷಣ ಮಾಡಹತ್ತಿದನು. ಹಗಲು ರಾತ್ರಿ ಹರಿನಾಮಸ್ಮರಣದಲ್ಲಿಯೂ, ಗೀತಾ-ಭಾಗವತಾದಿ ಗ್ರಂಥಗಳ ಶ್ರವಣ-ಮನನಾದಿಗಳಲ್ಲಿಯೂ ಆತನು ತೊಡಗಿರುತ್ತಿದ್ದನು. ಹೀಗೆ ಸಮಾಧಾನದಿಂದ ಹನ್ನೆರಡು ವರ್ಷಗಳನ್ನು ಕಳೆಯಲು, ಚೈತನ್ಯನಿಗೆ ಸಂತಾನವಾಯಿತು.

ಆ ದಂಪತಿಗಳ ಪುಣ್ಯವು ಎಷ್ಟು ದೊಡ್ಡದೋ ತಿಳಿಯದು! ಶ್ರೀಗುರು ಕೃಪೆಯಿಂದ ಅವರಲ್ಲಿ ತ್ರ್ಯಮೂರ್ತಿಗಳೂ, ಆದಿಮಾಯೆಯೂ ಅವತರಿಸಿದರು. ಸಾಕ್ಷಾತ್ ಶ್ರೀಶಂಕರನು ರಖಮಾಯಿಯ ಹೊಟ್ಟೆಯಲ್ಲಿ ನಿವೃತ್ತಿಯೆಂಬ ಹೆಸರಿನಿಂದ ಅವತರಿಸಿದನು. ಎರಡನೆಯ ಮಗನು ಸಾಕ್ಷಾತ್ ಶ್ರೀವಿಷ್ಣುವು. ಆತನಿಗೆ ಜ್ಞಾನೇಶ್ವರ ಅಥವಾ ಜ್ಞಾನದೇವನೆಂದು ಹೆಸರಿಟ್ಟರು. ಮೂರನೆಯ ಮಗನು ಸಾಕ್ಷಾತ್ ಬ್ರಹ್ಮದೇವನು. ಅವನ ಹೆಸರು ಸೋಪಾನದೇವ. ನಾಲ್ಕನೆಯ ಸಂತತಿಯು ಹೆಣ್ಣು ಆಯಿತು. ಆಕೆಯು ಸಾಕ್ಷಾತ್ ಆದಿಮಾಯೆಯು. ಆಕೆಗೆ ಮುಕ್ತಾಬಾಯಿಯೆಂದು ಹೆಸರಿಟ್ಟರು. ಹೀಗೆ ಚೈತನ್ಯ-ರಖಮಾಯಿಗಳೆಂಬ ದಂಪತಿಗಳು ಭಗವದವತಾರಕ್ಕೆ ಸ್ಥಾನವಾಗಿ ಕೃತಕೃತ್ಯರಾದರು. ಅವರಿಂದ ೪೨ ಕುಲಗಳ ಉದ್ಧಾರವಾಯಿತು.

ಈ ಮೇರೆಗೆ ಬ್ರಹ್ಮ-ವಿಷ್ಣು-ಮಹೇಶ್ವರರೂ ಆದಿಮಾಯೆಯೂ ಅವತರಿಸಿದರು. ಬ್ರಾಹ್ಮಣರು ಅಜ್ಞಾನದಿಂದ ಅವರನ್ನು ಬಹಳವಾಗಿ ನಿಂದಿಸಹತ್ತಿದರು. ಸಂನ್ಯಾಸಿಯ ಮಕ್ಕಳಾದ್ದರಿಂದ ಇವರ ಮೋರೆಯನ್ನು ನೋಡಲಾಗದೆಂದು ಜರೆಯಹತ್ತಿದರು. ಹುಡುಗರು ದೊಡ್ಡವರಾದದ್ದನ್ನು ನೋಡಿ ತಾಯಿ-ತಂದೆಗಳು ಚಿಂತಿಸಹತ್ತಿದರು. ರಖಮಾಯಿಯು ಪತಿಯನ್ನು ಕುರಿತು—ಸ್ವಾಮಿ, ಹುಡುಗರು ದೊಡ್ಡವಾದವು, ಬ್ರಾಹ್ಮಣರನ್ನು ಕೇಳಿ ಮುಂಜೆಯನ್ನು ಮಾಡಬೇಕು, ಎಂದು ಹೇಳಿದಳು. ಆಗ ಚೈತನ್ಯನು ಬ್ರಾಹ್ಮಣರ ಸಭೆಯನ್ನು ನೆರಿಸಿ, ಸಭೆಗೆ ಸಾಷ್ಟಾಂಗವಾಗಿ ವಂದಿಸಿ. ಕೈಜೋಡಿಸಿಕೊಂಡು—ಸ್ವಾಮೀ, ನಮ್ಮ ಅಪರಾಧಗಳನ್ನು ಕ್ಷಮಿಸಿ, ನನ್ನ ವಿನಂತಿಗೆ ಚಿತ್ತ ಕೊಡಬೇಕು. ನಮ್ಮ ಹುಡುಗರು ದೊಡ್ಡವಾದವು. ಅವರ ಉಪನಯನ ಮಾಡಬೇಕಾಗಿದೆ. ಶಾಸ್ತ್ರನೋಡಿ ನಮಗೆ ಪ್ರಾಯಶ್ಚಿತ್ತವನ್ನುಕೊಟ್ಟು ಶುದ್ಧ ಮಾಡಬೇಕು, ಎಂದು ಪ್ರಾರ್ಥಿಸಿ ಮತ್ತೊಮ್ಮೆ ಬ್ರಹ್ಮಸಭೆಗೆ ವಂದಿಸಿದನು. ಇತ್ತ ಹಿರಿಯಮಗನಾದ ನಿವೃತ್ತಿಯೂ ಬ್ರಾಹ್ಮಣರನ್ನು ಸಾಷ್ಟಾಂಗವಾಗಿ

ವಂದಿಸಿ—ಸ್ವಾಮಿ, ನಿಮ್ಮ ದರ್ಶನದಿಂದ ನಾವು ಆರು ಮಂದಿಯೂ ಮುಕ್ತ ರಾದೆವು ಈಗ ತಾವು ನಮಗೆ ಆರುಮಂದಿಗೂ ಪ್ರಾಯಶ್ಚಿತ್ತವನ್ನು ಹೇಳಬೇಕು. ಎಂದು ಪ್ರಾರ್ಥಿಸಿದನು. ಆಗ ಶಾಸ್ತ್ರವನ್ನು ಬಲ್ಲ ಬ್ರಾಹ್ಮಣರು ಗ್ರಂಥವನ್ನು ಶೋಧಿಸಿ ಚೈತನ್ಯನಿಗೆ ದೇಹಾಂತ ಪ್ರಾಯಶ್ಚಿತ್ತದ ಹೊರತು ಬೇರೆ ಪ್ರಾಯಶ್ಚಿತ್ತವಿಲ್ಲೆಂದು ಹೇಳಿದರು. ಅದನ್ನು ಕೇಳಿ ಚೈತನ್ಯನಿಗೆ ಪಶ್ಚಾತ್ತಾಪವಾಯಿತು. ಆತನು ಬ್ರಾಹ್ಮಣರನ್ನು ನಮಸ್ಕರಿಸಿ ಮನೆಮಾರುಗಳನ್ನೂ, ಹೆಂಡಿರುಮಕ್ಕಳನ್ನೂ ಬಿಟ್ಟು, ದೇಶಾಂತರಕ್ಕೆ ತೆರಳಿದನು. ತಿರುಗಿ ಅವರನ್ನು ಕಣ್ಣೆತ್ತಿ ನೋಡಲಿಲ್ಲ. ಇದನ್ನು ನೋಡಿ ಬ್ರಾಹ್ಮಣರಿಗೆ ಬಹಳ ಆಶ್ಚರ್ಯವಾಯಿತು. ಅವರು ತಮ್ಮ ತಮ್ಮೊಳಗೆ—ಇದೇನಾಶ್ಚರ್ಯವು! ಇವನು ಅನುತಾಪ ತೀರ್ಥದಲ್ಲಿ ಸ್ನಾನಮಾಡಿ, ತನ್ನ ಪಾಪಗಳನ್ನು ಸುಟ್ಟುಬಿಟ್ಟನು. ಅನುತಾಪಕ್ಕಿಂತಲೂ ಹೆಚ್ಚಿನದಾದ ಎರಡನೆಯ ಯಾವ ಪ್ರಾಯಶ್ಚಿತ್ತವನ್ನೂ ಶಾಸ್ತ್ರವು ಹೇಳಿರುವದಿಲ್ಲ. ಇವನು ಸದ್ಗುರುಕೃಪೆಯಿಂದ ಶುಚಿರ್ಭೂತನಾದನು, ಎಂದು ಮಾತಾಡತೊಡಗಿದರು.

ಇತ್ತ ನಿವೃತ್ತಿನಾಥರು ಬ್ರಾಹ್ಮಣರನ್ನು ಕುರಿತು—ಸ್ವಾಮಿ, ನಮ್ಮ ತಂದೆಯಂತು ಪಶ್ಚಾತ್ತಾಪದಿಂದ ಹೊರಟು ಹೋದನು. ಮುಂದೆ ನಮ್ಮ ಗತಿ ಯೇನು? ಶಾಸ್ತ್ರಗಳ ಆಜ್ಞೆಯಿಂದ ನಮಗೆ ಯಾವ ಶಿಕ್ಷೆಯು ವಿಧಿಸಲ್ಪಡುವದು? ಎಂದು ಕೇಳಿಕೊಂಡರು. ಅದಕ್ಕೆ ಬ್ರಾಹ್ಮಣರು—ಪೈಠಣಕ್ಕೆ ಹೋಗಿ ಶುದ್ಧಿಪತ್ರವನ್ನು ತಕ್ಕೊಂಡು ಬರ್ರಿ, ಎಂದು ಹೇಳಲು, ನಿವೃತ್ತಿನಾಥರು—ಸ್ವಾಮಿ, ಪೈಠಣದ ಬ್ರಾಹ್ಮಣರಿಗೆ ನಾವು ಯಾವ ಜಾತಿಯವರೆಂದು ಹೇಳೋಣ? ಯಾವ ಕುಲದವರೆಂದು ಉಸುರೋಣ? ನಮಗೆ ಜಾತಿ ಕುಲಗಳೇ ಇಲ್ಲವು. ನಾವು ಬ್ರಾಹ್ಮಣ ಕ್ಷತ್ರಿಯ ವೈಶ್ಯರಲ್ಲಿ ಯಾವ ವರ್ಣಕ್ಕೂ ಹೊಂದಿದವರಲ್ಲ; ನಮ್ಮ ಸ್ವರೂಪವು ಯಾವಾಗಲೂ ಅವಿನಾಶಿಯೂ, ಪುರಾತನವೂ, ನಿಜಬೋಧವೂ ಆಗಿರುವದು. ನಾವು ಪೃಥಿವ್ಯಾದಿ ಪಂಚಭೂತಗಳಲ್ಲ; ವಿರಾಟಸ್ವರೂಪವಲ್ಲ; ನಮಗೆ ನಾಮವಿಲ್ಲ; ನಾವು ದೇವತೆಗಳಲ್ಲ; ಯಕ್ಷರಲ್ಲ; ಕಿನ್ನರರಲ್ಲ; ಋಷಿಗಳಲ್ಲ; ನಿಶಾಚರರಲ್ಲ. ನಾವು ಸಗುಣರಲ್ಲ; ನಿರ್ವಿಕಾರರಲ್ಲ; ನಿರಾಕಾರರೂ ಅಲ್ಲ, ಎಂದು ನುಡಿದು ಜ್ಞಾನದೇವರಿಗೆ—ಜ್ಞಾನದೇವಾ, ನಮ್ಮ ಪರಂಪರೆಯು ಹೀಗಿರಲು, ಪೈಠಣಕ್ಕೆ ಹೋಗಿ ಬ್ರಾಹ್ಮಣಶ್ರೇಷ್ಠರಿಗೆ ನಾವು ಏನೆಂದು ಹೇಳೋಣ? ಎನ್ನಲು, ಅದಕ್ಕೆ ಜ್ಞಾನದೇವರು—ನಿವೃತ್ತಿನಾಥರೇ, ಸಥಿಯಿಂದ ನಾನು ಆಡುವ ಮಾತು

ಗಳನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವೆನು. ಶಾಸ್ತ್ರವಿರುದ್ಧವಾಗಿ ನಡೆಯು ವವನಿಗೆ ದೋಷವು ಒದಗುವದೆಂದು ಶಾಸ್ತ್ರವು ಹೇಳುತ್ತದೆ. ಜೀವನ್ಮುಕ್ತನಾ ದರೂ ವಿಹಿತಧರ್ಮವನ್ನು ಬಿಡಬಾರದು. ಸಾಧುಜನರು ತಮ್ಮ ಆಚರಣೆಯಿಂದ ಜನರಿಗೆ ಸನ್ಮಾರ್ಗವನ್ನು ತೋರಿಸಬೇಕು. ಶಾಸ್ತ್ರವಿರುದ್ಧವಾಗಿ ಆಚರಿಸುವದು ಪರಮ ನಿಂದ್ಯವು. ಸ್ವಧರ್ಮದಂತೆ ನಡೆಯಬೇಕೆಂದು ವೇದಸ್ವರೂಪವಾದ ನಾರಾಯಣನು ಹೇಳಿರುವನು, ಎಂದರು.

ಜ್ಞಾನದೇವರಾಡಿದ ಈ ಮಾತುಗಳನ್ನು ಕೇಳಿ ಸೋಪಾನದೇವರು— ಕುಲ ವಾಗಲಿ ಆಶ್ರಮವಾಗಲಿ ಏನು ಮಾಡುವದು? ಭಕ್ತಿಯಿಲ್ಲದಿದ್ದರೆ ಶ್ರೀಹರಿಯ ಚರಣವು ಎಷ್ಟು ಮಾತ್ರವೂ ದೊರೆಯುವದಿಲ್ಲವು. ದೂರ್ವಾಸ, ವಸಿಷ್ಠ, ಗೌತಮ ವ್ಯಾಸ, ವಾಲ್ಮೀಕಿ, ಅಗಸ್ತ್ಯ, ಪಾಂಡವರು ಇವರ ಕುಲವು ಉತ್ತಮವೆಂದು ಯಾವ ಶಾಸ್ತ್ರವು ಹೇಳುತ್ತದೆ? ಉತ್ತಮ ಕುಲದಲ್ಲಿ ಹುಟ್ಟಿ, ಸಂಪೂರ್ಣ ವೇದಾ ಧ್ಯಯನ ಮಾಡಿದಾಗ್ಯೂ, ಭಕ್ತಿಯೊಂದು ಇಲ್ಲದಿದ್ದರೆ ವ್ಯರ್ಥವಾಗುವದು. ಅಂಥವನು ಶಾಸ್ತ್ರದಲ್ಲಿ ವಂದ್ಯನಾಗಿರುವದಿಲ್ಲ. ಭಕ್ತಿಯಿಂದ ಭಗವಂತನನ್ನು ಒಲಿಸಿಕೊಂಡವನಿಗೆ ಉತ್ತಮ ಕುಲವು ಯಾತಕ್ಕೆ ಬೇಕು? ಎಂದು ನುಡಿದರು.

ಈ ಮೇರೆಗೆ ಪರಸ್ಪರರು ವಾದಮಾಡಿ, ಉತ್ತರ ಪ್ರತ್ಯುತ್ತರಗಳನ್ನು ಕೊಟ್ಟು ಬ್ರಾಹ್ಮಣರನ್ನು ನಮಸ್ಕರಿಸಿ, ತಡಮಾಡದೆ ಅಲ್ಲಿಂದ ಹೊರಟರು. ಅವರು ಗೋದಾವರಿಯತೀರಕ್ಕೆ ಹೋಗಿ, ತೀರ್ಥಯಾತ್ರೆಗಳನ್ನು ತೀರಿಸಿಕೊಂಡು ಪೈಠಣ ನಗರವನ್ನು ಹೊಕ್ಕರು. ಅಲ್ಲಿ ಬ್ರಾಹ್ಮಣರ ದೊಡ್ಡ ಸಭೆಯು ಇತ್ತು. ನಿವೃತ್ತಿನಾಥರೇ ಮೊದಲಾದವರು ಆ ಬ್ರಾಹ್ಮಣರ ಸಭೆಯನ್ನು ಹೊಕ್ಕು, ತಮ್ಮ ವೃತ್ತಾಂತವನ್ನು ಇದ್ದಕ್ಕಿದ್ದಹಾಗೆ ಹೇಳಿ ಪತ್ರವನ್ನು ಕೊಟ್ಟರು. ಬ್ರಾಹ್ಮಣ ಸಭೆಯಲ್ಲಿ ಪತ್ರವನ್ನು ಓದಲು, ಈ ನಾಲ್ವರು ಸಂನ್ಯಾಸಿಯ ಮಕ್ಕಳೆಂದು ತಿಳಿ ಯಿತು. ಆಗಲವರು—ಯತಿಯ ಮಕ್ಕಳಿಗೆ ಪ್ರಾಯಶ್ಚಿತ್ತವಿಲ್ಲವು. ಶೂದ್ರನಿಗೆ ಗಂಗಾಸ್ನಾನವನ್ನು ಮಾಡಿಸಿದರೆ, ಶುದ್ಧ ಬ್ರಾಹ್ಮಣನಾಗುವನೋ? ಚಿಪ್ಪಿಗೆ ಪರ ಸುಗಲ್ಲನ್ನು ಮುಟ್ಟಿಸಿದರೆ, ಬಂಗಾರವಾಗುವದೋ? ಹುರಿದ ಬೀಜವನ್ನು ಬಿತ್ತಿ ದರೆ, ಮೊಳಕೆಯು ಒಡೆಯುವದೋ? ಆಯುಷ್ಯ ತೀರಿದವನಿಗೆ ಔಷಧದಿಂದ ಪ್ರಯೋಜನವಾಗುವದೋ? ಅದರಂತೆ ತೀರ್ಥ-ವ್ರತ-ಪ್ರಾಯಶ್ಚಿತ್ತಗಳಿಂದ ಇವರು ಎಂದೂ ಶುದ್ಧರಾಗಲಾರರು. ಆದರೆ ಇವರ ಶುದ್ಧೀಕರಣಕ್ಕೆ ಒಂದೇ ಉಪಾಯವಿರುವದು. ಅದಕ್ಕೆ ಶಾಸ್ತ್ರಸಮ್ಮತಿಯು ಇರುತ್ತದೆ. ಅದರಂತೆ ಇವರು

ನಡೆದರೆ ಶುದ್ಧರಾಗುವರು. ಇವರು ಶ್ರೀಹರಿಗೆ ಶರಣುಹೋಗಿ, ಪ್ರಾಣಿಮಾತ್ರ ಗಳನ್ನು ಭಜಿಸಬೇಕು. ಆಕಳು, ಕತ್ತೆ, ಆನೆ, ನಾಯಿ, ಹಂದಿ, ಚಾಂಡಾಲರು ಇವರನ್ನು ಸಮಬುದ್ಧಿಯಿಂದ ನೋಡುತ್ತ, ಬ್ರಹ್ಮಭಾವನೆಯನ್ನು ವಹಿಸಿ, ಪ್ರೀತಿ ಯಿಂದ ಎಲ್ಲವನ್ನು ನಮಿಸಬೇಕು, ಎಂದು ಹೇಳಿದರು.

ಬ್ರಾಹ್ಮಣರ ಕಡೆಯ ನಿರ್ಣಯವನ್ನು ಕೇಳಿ ನಿವೃತ್ತಿನಾಥರಿಗೆ ಬಹಳ ಸಂತೋಷವಾಯಿತು. ಜ್ಞಾನದೇವರೂ ಸೋಪಾನದೇವರೂ ಪರಮಾನಂದ ಬಟ್ಟರು. ಮನಸ್ಸಿನಲ್ಲಿದ್ದ ಹಾಗೆಯೇ ಧರ್ಮನೀತಿಯು ಹೊರಟಿತೆಂದು ಅವರು ಹಿಗ್ಗಿದರು. ಬ್ರಾಹ್ಮಣರ ಈ ಮಾತುಗಳು ಮುಕ್ತಾಬಾಯಿಗೂ ಒಪ್ಪಿಗೆಯಾದವು. ಆಕೆಯು ಸಂತೋಷಬಟ್ಟಳು. ಈ ನಾಲ್ವರ ಹೆಸರುಗಳನ್ನು ಕೇಳಿದ ಮಾತ್ರ ದಿಂದ ಬ್ರಾಣರಿಗೆ ಬಹಳ ಆಶ್ಚರ್ಯವಾಯಿತು, ಅವರು ಜ್ಞಾನದೇವರಿಗೆ— ಏನಯ್ಯಾ, ನಾವು ನಿನಗೆ ಜ್ಞಾನದೇವನೆಂದು ಯಾಕೆ ಕರೆಯಬೇಕು? ನೀನೇನು ವೇದಾಧ್ಯಯನವನ್ನು ಮಾಡಿರುವೆಯಾ? ಪುರಾಣವ್ಯುತ್ಪತ್ತಿಯು ನಿನಗಿರುವದೇ? ಕರ್ತೃತ್ವಶಕ್ತಿಯಿಲ್ಲದೆ ಸುಮ್ಮನೆ ದೊಡ್ಡವನೆನಿಸಿಕೊಳ್ಳುವದರಲ್ಲಿ ಅರ್ಥವೇನು? ಉಪ್ಪಿಲ್ಲದ ಅನ್ನವು ರುಚಿಯಾಗದಂತೆ, ಪುರುಷಾರ್ಥವಿಲ್ಲದವನ ದೊಡ್ಡ ಹೆಸರು ಒಪ್ಪುವದಿಲ್ಲ. ಅಗೋ, ಅಲ್ಲಿ ನೀರು ಹೇರಿಕೊಂಡು ಒಂದು ಕೋಣವು ಬರುತ್ತ ದಲ್ಲ, ಅದರ ಹೆಸರನ್ನೂ ಜ್ಞಾನದೇವನೆಂದು ಇಟ್ಟರಾಯಿತು, ಎಂದು ನುಡಿದರು.

ಬ್ರಾಹ್ಮಣರ ಈ ಮಾತುಗಳನ್ನು ಕೇಳಿ ಜ್ಞಾನದೇವರು ಕೈ ಜೋಡಿಸಿ— ಸ್ವಾಮಿಗಳಾ, ನನ್ನ ಮಾತನ್ನು ಲಾಲಿಸಬೇಕು. ತಾವಾಡುವ ಮಾತು ಸುಳ್ಳಲ್ಲ. ವಿಚಾರ ಮಾಡಿದರೆ, ಕೋಣನಿಗೂ ನಮಗೂ ಲೇಶವಾದರೂ ಭೇದವಿಲ್ಲ. ವ್ಯಾಪಕ ನಾದ ಆತ್ಮನು ಪ್ರಾಣಿಮಾತ್ರಗಳಲ್ಲಿ ಸಮಾನವಾಗಿರುವನು. ಒಂದೇ ಬಂಗಾರ ದಿಂದ ಭಿನ್ನಭಿನ್ನವಾದ ಅಲಂಕಾರಗಳು ಆಗುವಂತೆಯೂ, ಒಬ್ಬನೇ ಸೂರ್ಯನು ಬೇರೆಬೇರೆ ಕೊಡಗಳಲ್ಲಿ ಬೇರೆಬೇರೆಯಾಗಿ ಪ್ರತಿಬಿಂಬಿಸುವಂತೆಯೂ ಒಬ್ಬನೇ ಶ್ರೀ ಹರಿಯು ಭೂತಮಾತ್ರಗಳಲ್ಲಿ ಸರಿಯಾಗಿದ್ದಾನೆ. ಎನ್ನಲು, ಬ್ರಾಹ್ಮಣರು— ಅಯ್ಯಾ, ಬರಿಯ ಬಾಯಿಂದ ಬ್ರಹ್ಮವನ್ನು ಉಚ್ಚರಿಸಿದರೆ ಆಗಲಿಲ್ಲ, ಎಂದು ತಿರ ಸ್ಕರಿಸಿದರು. ಅಷ್ಟರಲ್ಲಿ ಕೋಣವನ್ನು ಸಿಟ್ಟಿನಿಂದ ಹೊಡೆಯಲು, ಜ್ಞಾನದೇ ವರು ನಡುಗಹತ್ತಿದರು. ಅವರ ಮೈಮೇಲೆ ಬಾಸಾಳಗಳು ಮೂಡಿದವು. ಅದನ್ನು ನೋಡಿ ಬ್ರಾಹ್ಮಣರು—ನಿನಗೂ ಕೋಣನಿಗೂ ಭೇದವಿಲ್ಲೆಂದು ನುಡಿ ಯುವೆಯಲ್ಲ, ಹಾಗಿದ್ದರೆ, ಕೋಣನ ಬಾಯಿಂದ ವೇದವನ್ನು ಅನ್ನಿಸು, ಅಂದರೆ

ನಿನ್ನ ಅಭೇದ ವಾಣಿಯನ್ನು ಒಪ್ಪುತ್ತೇವೆ, ಎಂದರು.

ಕೂಡಲೆ ಜ್ಞಾನದೇವರು ಕೋಣನ ಸಮೀಪಕ್ಕೆ ಹೋದರು. ಅವರು ಕೋಣನ ತಲೆಯ ಮೇಲೆ ತಮ್ಮ ವರದ ಹಸ್ತವನ್ನು ಇಟ್ಟು—ಎಲೈ ಮಹಿಷೀ ಪುತ್ರನೇ, ಈ ಬ್ರಾಹ್ಮಣರ ಸಂತೋಷಕ್ಕಾಗಿ ಋಗ್ವೇದವನ್ನು ಉಚ್ಚರಿಸು, ಎಂದರು. ಕೂಡಲೆ ಆಶ್ಚರ್ಯಕರವಾದ ಸಂಗತಿಯು ವರ್ತಿಸಿತು. ಆ ಕೋಣವು ನ್ಯಾಸಪೂರ್ವಕವಾಗಿ ನಾಲ್ಕೂ ವೇದಗಳನ್ನು ಅಂದು ಬ್ರಾಹ್ಮಣರನ್ನು ಸಂತೋಷಗೊಳಿಸಿತು. ಇಂಥ ಕೌತುಕವು ಮೃತ್ಯುಲೋಕದಲ್ಲಿ ಒದಗಿದ್ದನ್ನು ಯಾರೂ ನೋಡಿಯೂ ಇದ್ದಿಲ್ಲ, ಕೇಳಿಯೂ ಇದ್ದಿಲ್ಲ. ಕುರುಡನಿಗೆ ಸೂರ್ಯ ಪ್ರಸನ್ನನಾದ ಬಳಿಕ ಏನು ಕಾಣಲಿಕ್ಕಿಲ್ಲ? ಮೂಕನಿಗೆ ಸರಸ್ವತಿಯು ಒಲಿದು ವರವನ್ನು ಕೊಟ್ಟರೆ, ಏನು ಬರಲಿಕ್ಕಿಲ್ಲ? ಪಾರ್ವತಿಯ ಸಹವಾಸ ಮಾಡುವವನಿಗೆ ಅಷ್ಟಾಂಗಯೋಗವು ಯಾಕೆ ಸಾಧಿಸಲಿಕ್ಕಿಲ್ಲ? ಅದರಂತೆ ಜ್ಞಾನದೇವರ ವರದ ಹಸ್ತದ ಪ್ರಭಾವದಿಂದ ಕೋಣವು ವೇದವನ್ನು ಅಂದದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಬ್ರಾಹ್ಮಣರು ಜ್ಞಾನದೇವರ ಈ ಅಗಾಧ ಕೃತಿಯನ್ನು ನೋಡಿ ಪಶ್ಚಾತ್ತಾಪಪಟ್ಟರು. ಅವರು ಪರಮಾಶ್ಚರ್ಯಪಟ್ಟು ತಮ್ಮ ತಮ್ಮೊಳಗೆ—ನಾವು ಉಪನಿಷದವೇ ಮೊದಲಾದ ಸಕಲ ವೇದಾಂತ ಶಾಸ್ತ್ರವನ್ನು ಕಲಿತೆವು; ಆದರೂ ಇಂಥ ಅದ್ಭುತವಾದ ಸಾಮರ್ಥ್ಯವನ್ನು ಈಶ್ವರನು ನಮಗೆ ಕೊಡಲಿಲ್ಲ! ನೋಡದ್ದನ್ನೂ, ಕೇಳದ್ದನ್ನೂ ಈ ದಿನ ಪ್ರತ್ಯಕ್ಷ ನೋಡಿದೆವು. ಬ್ರಹ್ಮನಿಗೂ ಅಸಾಧ್ಯವಾದ ಕೃತಿಯು ಸೃಷ್ಟಿಯಲ್ಲಿ ಈ ದಿವಸ ಒದಗಿತು. ಇವರು ಸಾಮಾನ್ಯರಲ್ಲ; ಈ ಮೂವರು ಸಾಕ್ಷಾತ್ ತ್ರಿಮೂರ್ತಿಗಳ ಅವತಾರವಾಗಿದ್ದಾರೆ. ಈ ಮುಕ್ತಾಬಾಯಿಯು ಸಾಕ್ಷಾತ್ ಆದಿಮಾಯೆಯು. ಇವರಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಎಲ್ಲಿಯಾದರೂ ಭಾಗೀರಥಿಗೆ ಮೈಲಿಗೆಯುಂಟೇ? ನಾವು ಮಂದಿಗೆ ಬೇಕಾದದ್ದನ್ನು ಬೋಧಿಸಬಲ್ಲೆವು; ಆದರೆ ನಾವು ಮಾತ್ರ ಹಾಗೆ ಆಚರಿಸಲಾರೆವು. ಜನರಲ್ಲಿ ಧನವನ್ನೂ ಮಾನವನ್ನೂ ಇಚ್ಛಿಸುತ್ತ ವ್ಯರ್ಥವಾಗಿ ಆಯುಷ್ಯವನ್ನು ಕಳಕೊಂಡೆವು. ಇವರಂಥ ಶ್ರೇಷ್ಠ ಪದಾರ್ಥವನ್ನು ಸೃಷ್ಟಿಯಲ್ಲಿ ನೋಡಲಿಕ್ಕಿಲ್ಲ. ಇವರ ತಾಯಿ-ತಂದೆಗಳು ಧನ್ಯರು! ಅವರು ಎಂಥ ಪುಣ್ಯವನ್ನು ಆಚರಿಸಿದ್ದರೋ ತಿಳಿಯದು!

ಈ ಮೇರೆಗೆ ಆಶ್ಚರ್ಯಪಡುತ್ತ ಬ್ರಾಹ್ಮಣರು ಸುಮ್ಮನಾದರು ಆಗ ಜ್ಞಾನದೇವರು—ಸ್ವಾಮಿ, ಇದೆಲ್ಲ ನಿಮ್ಮ ಸಾಮರ್ಥ್ಯವು. ನಾವು ನಿಜವಾಗಿ

ಅಜ್ಞಾನಿಗಳು. ತಮ್ಮ ಚರಣಪ್ರತಾಪವೇ ಈ ಅಗಾಧವಾದ ಕೃತಿಯನ್ನು ಮಾಡಿಸಿತು, ಎಂದರು. ಪೈಠಣದ ಜನರು ಬಹು ಪ್ರೇಮದಿಂದ ಅವರನ್ನು ಸುತ್ತುಗಟ್ಟುವರು. ಸಂಸಾರದಲ್ಲಿಯು ಅವರ ವೈರಾಗ್ಯವನ್ನೂ, ವಿಷ್ಣುಭಕ್ತಿಯನ್ನೂ ನೋಡಿ ಆಶ್ಚರ್ಯಬಡುವರು. ಅವರು ದಿನಾಲು ಮುಂಜಾವಿನಲ್ಲಿ ಎದ್ದು ಗಂಗಾಸ್ನಾನವನ್ನು ಮಾಡಿ ಜ್ಞಾನದೇವರ ಪುರಾಣವನ್ನೂ, ವೇದಾಂತವ್ಯಾಖ್ಯಾನವನ್ನೂ ಕೇಳುವರು. ರಾತ್ರಿಯಲ್ಲಿ ಆಗುವ ಹರಿಕೀರ್ತನವನ್ನು ಭಕ್ತಿಯಿಂದ ಆಲಿಸುವರು. ಒಟ್ಟಿಗೆ ಜ್ಞಾನದೇವರ ಅದ್ಭುತ ಸಾಮರ್ಥ್ಯಕ್ಕಾಗಿ ಪೈಠಣದ ಜನರೆಲ್ಲ ಅವರನ್ನು ಬಹಳವಾಗಿ ಮನ್ನಿಸುತ್ತಿದ್ದರು.

---

## ೩ನೆಯ ಪ್ರಕರಣ:—ಭಗವಲ್ಲೀಲೆಗಳು.



ಕೋಣನ ಮುಖದಿಂದ ವೇದವೆನಿಸಿದ್ದನ್ನು ನೋಡಿ ಪೈಠಣದ ಜನರೆಲ್ಲ ಜ್ಞಾನದೇವರನ್ನು ಮನ್ನಿಸುತ್ತಿದ್ದರು. ಹೀಗೆ ಬಹುದಿವಸಗಳಾಗಲು, ಮತ್ತೊಂದು ಅದ್ಭುತವು ವರ್ತಿಸಿತು. ಜ್ಞಾನದೇವ-ನಿವೃತ್ತಿನಾಥರೇ ಮೊದಲಾದವರು ಇರುತ್ತಿದ್ದ ಮನೆಯ ಯಜಮಾನನಲ್ಲಿ ಪಿತೃಶ್ರಾದ್ಧವು ಬಂದಿತು. ಯಜಮಾನನು ಊರೊಳಗಿನ ಬ್ರಾಹ್ಮಣರಿಗೆ ಔತನ ಹೇಳಲಿಕ್ಕೆ ಹೋಗಲು, ಅವರು—ನೀನು ಯತಿಯ ಮಕ್ಕಳಿಗೆ ಆಶ್ರಯವನ್ನು ಕೊಟ್ಟಿರುವದರಿಂದ ನಿನ್ನ ಮನೆಗೆ ಊಟಕ್ಕೆ ಬರುವದಿಲ್ಲೆಂದು ಹೇಳಿದರು. ಈ ಮಾತುಗಳನ್ನು ಕೇಳಿ ಯಜಮಾನನು ಚಿಂತೆ ಮಾಡುತ್ತ ಕುಳಿತುಕೊಂಡನು. ಜ್ಞಾನದೇವರು ಚಿಂತೆಯ ಕಾರಣವನ್ನು ಕೇಳಲು, ಆತನು ಎಲ್ಲ ವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿ ಜ್ಞಾನದೇವರು—ನೀವು ಅಸಮಾಧಾನಪಡಬೇಡಿರಿ. ಸಾಕ್ಷಾತ್ ಪಿತೃಗಳೇ ಇಲ್ಲಿಗೆ ಊಟಕ್ಕೆ ಬರುವರು. ಸ್ವಸ್ಥ ಮನಸ್ಸಿನಿಂದ ಅಡಿಗೆಯನ್ನು ಮಾಡಿಸಿರಿ, ಎಂದು ಹೇಳಿದರು.

ಇದನ್ನು ಕೇಳಿ ಯಜಮಾನನಿಗೆ ಬಹಳ ಆಶ್ಚರ್ಯವಾಯಿತು. ಅನಂತರ ಆತನು ಸ್ನಾನ-ಸಂಧ್ಯೆಗಳನ್ನು ತೀರಿಸಿಕೊಂಡು, ಶುಚಿಷ್ಮಂತನಾಗಿ ನಾನಾತರದ ಪಕ್ವಾನ್ನಗಳನ್ನು ಮಾಡಿಸಿ, ಎಲೆಗಳನ್ನು ಬಡಿಸಿ ಸಿದ್ಧಮಾಡಿದನು. ಜ್ಞಾನದೇ

ವರು ಅಕ್ಷತೆಗಳನ್ನು ಒಗೆದು ಸಾಕ್ಷಾತ್ ಪಿತೃಗಳನ್ನು ಕರತಂದು ಪಾದಪೂಜಾ ದಿಗಳನ್ನು ತ್ವರೆಯಿಂದ ಮಾಡಿ, ಮುಖ್ಯಾಸನಗಳ ಮೇಲೆ ಕೂಡ್ರಿಸಿದರು. ವಸ್ತ್ರ ಭೂಷಣ, ತುಲಸೀಪತ್ರ, ಪುಷ್ಪ-ಹಾರ, ದ್ವಾದಶನಾಮಗಳು, ಸುಂದರವಾದ ಯಜ್ಞೋಪವೀತ, ಇವೆಲ್ಲವುಗಳಿಂದ ಪೂಜಿಸಿ, ಯಜಮಾನನು ಸುವರ್ಣ ದಕ್ಷಿಣೆ ಯನ್ನು ಕೊಟ್ಟನು. ಬಳಿಕ ಧೂಪದೀಪಗಳಾದವು. ಇದನ್ನೆಲ್ಲ ನೋಡಿ ಬ್ರಾಹ್ಮ ಣರಿಗೆ ಸೋಜಿಗವಾಯಿತು. "ಪಿತೃಸ್ವರೂಪೀ ಜನಾರ್ದನ" ಇತ್ಯಾದಿ ಮಂತ್ರ ವನ್ನು ಅಂದು ಉದಕ ಬಿಟ್ಟಕೂಡಲೆ ಪಿತೃಗಳು ಭೋಜನ ಮಾಡಹತ್ತಿದರು. ತಮ್ಮ ಮನಸ್ಸಿಗೆ ಬಂದದ್ದನ್ನು ಪ್ರೀತಿಯಿಂದ ಸೇವಿಸಿ, ಸಕಲರೂ ತೃಪ್ತರಾದರು. ಹಸ್ತಪ್ರಕ್ಷಾಲನಕ್ಕೆ ನೀರುಕೊಟ್ಟು, ತಾಂಬೂಲ ದಕ್ಷಿಣೆಗಳನ್ನು ಅರ್ಪಿಸಿದರು. ಸ್ವಸ್ಥಾನದಲ್ಲಿ ವಾಸಮಾಡಬೇಕೆಂಬ ಮಂತ್ರವನ್ನು ಉಚ್ಚರಿಸಿದ ಕ್ಷಣವೇ, ಪಿತೃ ಗಳು ಅದೃಶ್ಯರಾದರು.

ಪೈಠಣದ ಬ್ರಾಹ್ಮಣರು ಇದನ್ನೆಲ್ಲ ನೋಡಿ—"ಜ್ಞಾನದೇವರು ಅದ್ಭುತ ಕಾರ್ಯವನ್ನು ಮಾಡಿದರು. ಸಾಕ್ಷಾತ್ ಪಿತೃಗಳನ್ನೇ ಕರೆದು ಉಣಿಸಿದರು. ನಾವು ಇಂಥ ಕೃತಿಯನ್ನು ಕಣ್ಣಿನಿಂದ ನೋಡಿದ್ದಿಲ್ಲ, ಕಿವಿಗಳಿಂದ ಕೇಳಿದ್ದಿಲ್ಲ. ನಾವು ಮಾತ್ರ ಕರ್ಮಠತನದ ಅಭಿಮಾನದಿಂದ ಆಮಂತ್ರಣವನ್ನು ಧಿಃಕ್ಕರಿಸಿ ಬಿಟ್ಟೆವು. ಪಿತೃಗಳು ಮೂರ್ತಿಮಂತವಾಗಿ ಬಂದು ಉಂಡು, ದಕ್ಷಿಣೆಯನ್ನು ತಕ್ಕೊಂಡು ಹೋದರು. ನಿವೃತ್ತಿ ಜ್ಞಾನೇಶ್ವರರು ಧನ್ಯರು" ಎಂದು ತಮ್ಮೊ ಳಗೆ ಮಾತಾಡಿದರು. ಬಳಿಕ ಅವರು—"ನಿವೃತ್ತಿ-ಜ್ಞಾನದೇವ-ಸೋಪಾನ- ಮುಕ್ತಾಬಾಯಿ ಇವರೆಲ್ಲರು ಮೂರ್ತಿಮಂತ ದೇವರ ಅವತಾರಿಕರು. ಇವರಿಗೆ ಪ್ರಾಯಶ್ಚಿತ್ತ ನಡೆಯುವದಿಲ್ಲ. ಇವರು ದೇಹಾತೀತರಾದ ಸದ್ಗುರುಗಳೇ ಇರುವರು." ಎಂದು ಪತ್ರವನ್ನು ಬರೆದು ಸೋಪಾನದೇವರ ಕೈಯೊಳಗೆ ಕೊಟ್ಟರು. ಆ ಪತ್ರದೊಳಗೆ ಜ್ಞಾನದೇವರು ತೋರಿಸಿದ ಅಘಟಿತಘಟನೆಯ ಚಮತ್ಕಾರಗಳನ್ನೂ ಬರೆದಿದ್ದರು.

ಕಬ್ಬಿಣದ ಗಟ್ಟಿಗೆ ಪರಸುಗಲ್ಲು ಹತ್ತಿದ ಕೂಡಲೆ ಅದು ಬಂಗಾರವಾಗು ವಂತೆ, ಜ್ಞಾನದೇವರ ಕೃಪೆಯನ್ನು ಹೊಂದಿದ ಆ ಕೋಣವು ಹಗಲುರಾತ್ರಿ ವೇ ದಾಂತ ಜ್ಞಾನವನ್ನು ಮಾತಾಡುತ್ತಿತ್ತು. ಇದನ್ನು ತಿಳಿದು ಜ್ಞಾನೇಶ್ವರರು ನಿವೃತ್ತಿಯನ್ನು ಕುರಿತು—'ಕೋಣದ ಜ್ಞಾನವು ಅನಿವಾರವಾಯಿತು. ಇದು ಕರ್ಮಮಾರ್ಗವನ್ನು ಮುಣುಗಿಸುವದು. ಶ್ರುತಿಗಳ ಗರ್ಭಾರ್ಥವು ಗುಪ್ತವಿರು

ವದು. ಈ ಕೋಣವು ಜನರಿಗೆ ಅದನ್ನು ಒಡೆದು ಹೇಳುವದು. ಅದರಿಂದ ಕರ್ಮಠರ ಭ್ರಾಂತಿಯು ನಾಶವಾಗಿ ಹೋಗಿ, ಯಜ್ಞಮಾರ್ಗವು ನಿಲ್ಲುವದು.' ಎಂದು ಆಲೋಚನೆ ಮಾಡಿದರು. ತರುವಾಯ ಜ್ಞಾನೇಶ್ವರರು ಆ ಬ್ರಾಹ್ಮಣರನ್ನು ನಮಸ್ಕರಿಸಿ, ಕೋಣವನ್ನು ಅವರ ಕಡೆಯಿಂದ ಇಸುಕೊಂಡರು. ನಿವೃತ್ತಿ-ಜ್ಞಾನೇಶ್ವರರೆಲ್ಲರೂ ಬ್ರಾಹ್ಮಣರ ನಿರೂಪ ತೆಗೆದುಕೊಂಡು, ಪುನಃ ಆಳಂದಿಗೆ ಹೊರಟರು. ಬ್ರಾಹ್ಮಣರು, ಜ್ಞಾನೇಶ್ವರ ಮೊದಲಾದವರು ತಮ್ಮನ್ನು ಅಗಲುವದನ್ನು ನೋಡಿ, ಕಣ್ಣುಗಳಲ್ಲಿ ನೀರು ತಂದು, ಸದ್ಗದಕಂಠದಿಂದ—'ಇಷ್ಟು ದಿವಸ ನಾವು ಜ್ಞಾನೇಶ್ವರರ ಸಂಗಡ ಉತ್ತಮ ರೀತಿಯಿಂದ ಕಾಲಕ್ರಮಣ ಮಾಡಿದೆವು' ಎಂದು ನುಡಿದು, ಅವರನ್ನು ಊರಹೊರಗೆ ಕಳಿಸುತ್ತ ಅರ್ಧಹರದಾರಿ ಹೋದರು. ಜ್ಞಾನದೇವರು ತಿರುಗಿ ಹೋಗಲಿಕ್ಕೆ ಅಪ್ಪಣೆ ಕೊಟ್ಟಬಳಿಕ ಕಳಿಸಲಿಕ್ಕೆ ಹೋದ ಹೆಂಗಸರೂ ಗಂಡಸರೂ ತಿರುಗಿದರು.

ಇತ್ತ ನಿವೃತ್ತಿ-ಜ್ಞಾನದೇವ-ಸೋಪಾನ ಮುಕ್ತಾಬಾಯಿಯುವರು ಮುಖದಿಂದ ಹರಿನಾಮ ಸಂಕೀರ್ತನಮಾಡುತ್ತ, ಆನಂದಭರಿತರಾಗಿ ಮಾರ್ಗಕ್ರಮಣ ಮಾಡಿದರು. ಅವರು ಮಹಾಲಯಕ್ಷೇತ್ರಕ್ಕೆ ಬಂದಿಳಿದರು. ಆ ಸ್ಥಾನದಲ್ಲಿ ವಾಸಮಾಡಿ, ಪ್ರವರಾ ತೀರದಲ್ಲಿ ಸ್ನಾನಮಾಡಿ ಮೋಹಿನೀ ರಾಜನ ದರ್ಶನ ತೆಗೆದುಕೊಂಡರು. ಜ್ಞಾನೇಶ್ವರರು ಆ ಕ್ಷೇತ್ರದಲ್ಲಿರುವಾಗ ಶ್ರೀ ಭಗವದ್ಗೀತೆಯ ಮೇಲೆ ಜಡಮೂಢರಿಗೂ, ಅಜ್ಞಾನಿಗಳಿಗೂ ಸುಲಭ ಮಾರ್ಗವನ್ನು ತೋರಿಸುವದಕ್ಕಾಗಿ ಮಹಾರಾಷ್ಟ್ರಭಾಷೆಯಲ್ಲಿ ಟೀಕೆಯನ್ನು ಬರೆದರು. ಮೊದಲೇ ಉಜ್ವಲವಾದ ಬಂಗಾರವು, ಅದಕ್ಕೆ ರತ್ನದ ಕುಂದಣವನ್ನು ಕೂಡ್ರಿಸಿದ ಮೇಲೆ ಕೇಳುವದೇನು? ಸುವರ್ಣದ ಅಲಂಕಾರಗಳು ಸುಂದರವಾದ ಶರೀರಕ್ಕೆ ಶೋಭಿಸುವಂತೆಯೂ, ಸೂಕ್ಷ್ಮ ಬೀಜವು ಪಲ್ಲವ ಫಲಗಳಿಂದ ಶೋಭಿಸುವಂತೆಯೂ, ಕಲ್ಪತರುವಿನ ಗುಪ್ತಮಹಿಮೆಯು ಕಲ್ಪನೆಗಳಿಂದ ಪ್ರಕಟವಾಗುವಂತೆಯೂ ಆ ಭಗವದ್ಗೀತೆಯು ಟೀಕೆಯಿಂದ ಒಪ್ಪಿತು. ಗೀತೆಯ ಗಹನವಾದ ಅರ್ಥವು ಅಜ್ಞಾನಿಗಳಿಗೂ, ಪ್ರೇಮದ ಭಾವಿಕ ಜನರಿಗೂ ತಿಳಿಯುವದಕ್ಕಾಗಿ ಶ್ರೀ ಜ್ಞಾನದೇವರು ಪ್ರಾಕೃತಭಾಷೆಯಲ್ಲಿ ಟೀಕೆಯನ್ನು ಬರೆದರು. ಆಗ ಸದ್ಗುರುಗಳಾದ ನಿವೃತ್ತಿನಾಥರು ಜ್ಞಾನದೇವರಿಗೆ "ನೀನು ಗೀತಾ ವ್ಯಾಖ್ಯಾನಮಾಡಿದ್ದನ್ನು ನೋಡಿ ನಮಗೆ ಬಹು ಸಂತೋಷವಾಯಿತು. ಸ್ವಂತಬುದ್ಧಿಯ ಸತ್ವದಿಂದ 'ಅಮೃತಾನುಭವ'ವನ್ನು ಮಾಡು" ಎಂದು ಆಜ್ಞಾಪಿಸಿದರು. ಜ್ಞಾನದೇವರು ಸದ್ಗುರು

ನಾಥನ ಆಜ್ಞೆಯನ್ನು ಶಿರಸಾವಹಾನ್ಯಮಾಡಿ ಸದ್ಗುರು ಚರಣಗಳಮೇಲೆ ಮಸ್ತಕ ವನ್ನಿಟ್ಟು, ಬುದ್ಧಿಯ ಬಲದಿಂದ 'ಅಮೃತಾನುಭವ'ವೆಂಬ ಗ್ರಂಥವನ್ನು ಬರೆದರು, ಬ್ರಹ್ಮದೇವರ ಅಭಿಮಾನವನ್ನು ಕತ್ತರಿಸುವದಕ್ಕಾಗಿ ಶ್ರೀಕೃಷ್ಣನು ಆಕಳುಗ ಳನ್ನೂ ಕರುಗಳನ್ನೂ ನಿರ್ಮಿಸಿದಂತೆ ಜ್ಞಾನದೇವರು ಅಹಂಭಾವವುಳ್ಳವರ ಹಾಗು ಪಾಖಂಡಿಗಳ ಬಡಬಡಿಸುವಿಕೆಯನ್ನು ನಿಲ್ಲಿಸುವದಕ್ಕೆ ಅಮೃತಾನುಭವ ವನ್ನು ರಚಿಸಿದರು. ಅನಂತರ ಆದಿಶಕ್ತಿಯಾದ ಮ್ಹಾಲಸೆಯನ್ನು ಪ್ರೇಮದಿಂದ ವಂದಿಸಿ, ಅವರೆಲ್ಲರೂ ಆ ಕ್ಷೇತ್ರದಿಂದ ಸ್ವದೇಶಕ್ಕೆ ಹೊರಟರು.

ಮಾರ್ಗಕ್ರಮಣ ಮಾಡುವಾಗ, ನಾಲ್ಕೂ ಜನರು ಪ್ರೇಮದಿಂದ ಹರಿ ನಾಮಸ್ಮರಣ ಮಾಡುತ್ತಿದ್ದರು, ರಾತ್ರಿಯಾದ ಕೂಡಲೆ, ಊರೊಳಗೆ ಉಳ ಕೊಂಡು ಹರಿಕೀರ್ತನವನ್ನು ಮಾಡುವರು. ಮಾಯಾಮಮತೆಗಳನ್ನೂ, ಮಾನಾಪಮಾನಗಳನ್ನೂ, ದೇಹಾಭಿಮಾನವನ್ನೂ ತ್ಯಜಿಸಿ, ಅವರು ಇರುವೆಯಿಂದ ಬ್ರಹ್ಮದ ವರೆಗೆ ಸಮದೃಷ್ಟಿಯಿಂದ ನೋಡುತ್ತಿದ್ದರು. ಇದೇ ಅವತಾರಿಕರಾದ ಜ್ಞಾನಿಗಳ ಲಕ್ಷಣವು. ಹಾದಿಯಲ್ಲಿ ಒಂದಾನೊಂದು ದಿನ, ಅವರೆಲ್ಲರೂ ಆಳಂದಿಯ ತೋಟದೊಳಗೆ ಇಳಿದರು. ಅಲ್ಲಿ ಮುಖದಿಂದ ವೇದಗಳನ್ನು ನುಡಿದ ಕೋಣವು ದೇಹವನ್ನು ಬಿಟ್ಟಿತು. ಆ ಮಹಾತ್ಮರು ಅದಕ್ಕೆ ಸಾಯುಜ್ಯಪದವಿಯನ್ನು ಕೊಟ್ಟರು. ಕೃಪಾಸಾಗರರಾದ ಸಂತರು ಯಾವಾಗಲೂ ದಯಾಪೂರ್ಣರಾದ್ದ ರಿಂದ, ಎಲ್ಲರಿಗೂ ಅಭಯವನ್ನು ಕೊಡುವರು. ಆ ಬಳಿಕ ಜ್ಞಾನದೇವರು ಸತ್ತ ಕೋಣದ ಸಮಾಧಿಯನ್ನು ಕಟ್ಟಿ, ಅದರ ಪೂಜೆಯನ್ನು ಮಾಡಿ, ಅದಕ್ಕೆ ಸಿಂಧೂರಲೇಪನವನ್ನು ಮಾಡಿದರು. 'ಮ್ಹಸೋಬಾ' ಎಂಬ ಹೆಸರಿನ ಆ ಸ್ಥಾ-ನವು ಇನ್ನೂ ವರೆಗೆ ಪ್ರಸಿದ್ಧವದೆ.

ಅನಂತರ ನಿವೃತ್ತಿ-ಜ್ಞಾನದೇವ-ಸೋಪಾನದೇವ-ಮುಕ್ತಾಬಾಯಿ ಈ ನಾಲ್ವರು ಅಲ್ಲಿಂದ ಅಲಕಾವತಿಗೆ ಹೋಗಲಿಕ್ಕೆ ಸಿದ್ಧರಾದರು. ಆದರೆ ಮುಕ್ತಾ ಬಾಯಿಯು ತನಗೆ ತವರಮನೆಯನ್ನು ನೋಡುವ ಇಚ್ಛೆಯಾಗಿದೆ, ಎಂದು ನಿವೃ ತ್ತಿನಾಥರ ಮುಂದೆ ಹೇಳಿದಳು. ಆ ಮೇರೆಗೆ ನಾಲ್ವರೂ ಆಳಂದಿಗೆ ಬಂದರು. ಆಳಂದಿಯ ಎಲ್ಲ ಜನರಿಗೂ ಆನಂದವಾಯಿತು, ಜನರು ಪ್ರೇಮಭಾವದಿಂದ ಆ ಮಹಾನುಭಾವರಿಗೆ ನಮಸ್ಕರಿಸಿ, ಕ್ಷೇಮಾಲಿಂಗನವನ್ನು ಕೊಟ್ಟರು. ಪೈಠಣ ದಲ್ಲಿ ನಡೆದ ವೃತ್ತಾಂತವು ಆಳಂದಿಯ ಜನರಿಗೆ ಮೊದಲೇ ಗೊತ್ತಾಗಿತ್ತು. ಸೋಪಾನದೇವರು, ಪೈಠಣದ ಬ್ರಹ್ಮಸಭೆಯ ಜನರು ಬರೆದುಕೊಟ್ಟ ಪತ್ರವನ್ನು

ತೋರಿಸಿದ ಬಳಿಕಂತೂ, ಆಳಂದಿಯ ಜನರು ವಿಸ್ಮಿತರಾದರು. 'ಈ ಮೂವರು ಮಹಾತ್ಮರು, ದೇವರ ಅವತಾರಗಳೆ'ಂದು ಆ ಪತ್ರದಲ್ಲಿ ಸ್ಪಷ್ಟವಾಗಿ ಬರೆದದ್ದನ್ನು ನೋಡಿ, ಬ್ರಾಹ್ಮಣರೆಲ್ಲರೂ ತಟಸ್ಥರಾದರು. ಪೈಠಣದ ಪತ್ರವನ್ನು ನೋಡಿ ಎಲ್ಲ ಬ್ರಾಹ್ಮಣರೂ ಅವರನ್ನು ಮನ್ನಿಸಿದರು. ಬೃಹಸ್ಪತಿಯ ವಚನದಂತೆ ಇಂದ್ರಾದಿ ದೇವತೆಗಳು ವರ್ತಿಸುವಂತೆಯೂ, ವ್ಯಾಸರ ಪುರಾಣಗಳನ್ನು ಪಂಡಿತರು ಪ್ರಮಾಣವೆಂದು ತಿಳಿಯುವಂತೆಯೂ, ಸಚ್ಛಿಷ್ಯನು ಗುರ್ವಾಜ್ಞೆಯಿಂದ ಅಧ್ಯಾತ್ಮಜ್ಞಾನವನ್ನು ಅಭ್ಯಾಸಿಸುವಂತೆಯೂ, ಮನಸ್ಸಿನ ಚಟಗಳನ್ನು ಅನುಸರಿಸಿ ಇಂದ್ರಿಯಗಳು ವರ್ತಿಸುವಂತೆಯೂ, ಸೂರ್ಯನು ತಿರುಗಿದಹಾಗೆ ಗಿಡಗಳ ನೆರಳು ತಿರುಗುವಂತೆಯೂ, ಪ್ರವಾಹದ ಮಾರ್ಗವನ್ನು ಹಿಡಿದು ನೀರು ಓಡುವಂತೆಯೂ ಪೈಠಣದ ಜನರ ಅನುಮತಿಯಂತೆ ಆಳಂದಿಯ ಎಲ್ಲ ಜನರು ನಿವೃತ್ತಿನಾಥರೇ ಮೊದಲಾದವರನ್ನು ಮನ್ನಿಸಹತ್ತಿದರು. ನಮ್ಮನ್ನು ಉದ್ಧರಿಸಲಿಕ್ಕೆ ತ್ರಿಮೂರ್ತಿಗಳು ಸತ್ಯವಾಗಿ ಅವತರಿಸಿರುವರೆಂದು ಜನರು ತಮ್ಮ ತಮ್ಮೊಳಗೆ ಮಾತಾಡಹತ್ತಿದರು. ಜ್ಞಾನದೇವರು ಹರಿಕೀರ್ತನವನ್ನು ಮಾಡುವಾಗ್ಗೆ ಎಲ್ಲ ಜನರೂ ಶ್ರವಣ ಮಾಡಲಿಕ್ಕೆ ಬರುವರು. ಆಗ ಅವರು ಪ್ರೇಮದಿಂದ ಆನಂದದಿಂದ ಮುಗ್ನರಾಗಿ, ಇವರು ನಮ್ಮಗೋಸ್ಕರ ಸದ್ಗುರುರೂಪದಿಂದ ಅವತರಿಸಿರುವದು ಸತ್ಯವೆಂದು ನುಡಿಯುವರು.

ಹೀಗಿರುತ್ತಿರಲು, ಆಳಂದಿಯಲ್ಲಿ 'ವಿಸೋಬಾಚಾಟೀ' ಎಂಬ ದುಷ್ಟಬ್ರಾಹ್ಮಣನು, ಈ ನಾಲ್ವರು ಮಹಾನುಭಾವರನ್ನು ನಿಂದಿಸುತ್ತಿದ್ದನು. 'ಇವರು ಸಂನ್ಯಾಸಿಯ ಮಕ್ಕಳು; ಇವರ ಮೋರೆಯನ್ನು ಸಹ ನೋಡಬಾರದು,' ಎಂದು ಹಗಲು ರಾತ್ರಿ ತನ್ನ ಮನಸ್ಸಿನಲ್ಲಿ ಬಡಬಡಿಸುತ್ತಿದ್ದನು. ಪತಂಗವು ಸ್ವಾಭಾವಿಕವಾಗಿ ದೀಪವನ್ನು ನಂದಿಸುವಂತೆಯೂ, ಪ್ರಹ್ಲಾದನನ್ನು ನೋಡಿ ಹಿರಣ್ಯಕಶಿಪುವು ಮನಸ್ಸಿನಲ್ಲಿ ಪಟಪಟಿಸಿದಂತೆಯೂ, ಧರ್ಮರಾಜನ ಕೀರ್ತಿಯನ್ನು ಕೇಳಿ, ದುರ್ಯೋಧನನು ಮನಸ್ಸಿನಲ್ಲಿ ಸಂತಾಪಗೊಂಡಂತೆಯೂ, ರಾಮಪ್ರತಾಪವನ್ನು ಕೇಳಿ ರಾವಣನು ಸಂತಾಪಗೊಂಡಂತೆಯೂ, ಪ್ರಾಕೃತ ಗ್ರಂಥವನ್ನು ನೋಡಿ, ಪಂಡಿತರು ದ್ವೇಷದಿಂದ ನಿಷೇಧಿಸುವಂತೆಯೂ ವಿಸೋಬಾಚಾಟಿಯು ಆ ಮಹಾನುಭಾವರನ್ನು ಕ್ರೋಧದೃಷ್ಟಿಯಿಂದ ನೋಡುತ್ತಿದ್ದನು. ಅವರನ್ನು ಕಣ್ಣೆದುರಿಗೆ ಕಂಡಾಗ್ಗೆ ಅವನಿಗೆ ಸಂಕಟವಾಗುತ್ತಿತ್ತು. 'ಇವರು ಸಂನ್ಯಾಸಿಯ ಮಕ್ಕಳಾದ್ದರಿಂದ ಇವರ ಮುಖಾವಲೋಕನವನ್ನು ಮಾಡಬಾರದು. ಇವರು ದೃಷ್ಟಿಗೆ ಬಿದ್ದಕೂಡಲೆ,

ತಮ್ಮಂತೆ ನಮ್ಮನ್ನೂ ಮಾಡುವರು,' ಎಂದು ಅನ್ನುವನು.

ಹೀಗಿರಲು ದೀಪಾವಳಿಯ ಹಬ್ಬವು ಬಂದಿತು. ಆಗ ನಿವೃತ್ತಿನಾಥರು ತಮ್ಮ ತಂಗಿಯಾದ ಮುಕ್ತಾಬಾಯಿಗೆ—'ಮುಕ್ತಾಬಾಯಿ, ನಮಗೆ ಉತ್ತಮವಾದ ಮಂಡಿಗೆಗಳನ್ನು ಮಾಡಿ ಊಟಕ್ಕೆ ಬಡಿಸು' ಎಂದು ಅಂದರು. ಅದಕ್ಕೆ ಆಕೆಯು ಯಾಕಾಗಲೊಲ್ಲದು, ಎಂದು ನುಡಿದು ಅಂಗಡಿಯಿಂದ ಬೇಕಾದ ಸಾಹಿತ್ಯಗಳನ್ನು ತಂದಳು. ಮಂಡಿಗೆಯ ಗಡಿಗೆಯು ಬೇಕಾದ್ದರಿಂದ ಅದನ್ನು ತರುವದಕ್ಕಾಗಿ ಕುಂಬಾರನ ಮನೆಗೆ ಹೋಗುತ್ತಿರಲು, ಹಾದಿಯಲ್ಲಿ ವಿಸೋಬಾಚಾಟಿಯು ಅವಳ ದೃಷ್ಟಿಗೆ ಬಿದ್ದನು. ಅವನನ್ನು ನೋಡಿ ಮುಕ್ತಾಬಾಯಿಯು ಭಯದಿಂದ ನಡು ಗುತ್ತ ಒಂದು ಕಡೆಗೆ ಅಡಗಿಕೊಂಡು ನಿಂತಳು. ವಿಸೋಬನು ಓಡುತ್ತ ಬಂದು ಅವಳನ್ನು ಕುರಿತು—"ನೀನು ಯಾವ ಕಾರಣದ ಸಲುವಾಗಿ ಇಷ್ಟು ಅವಸರ ದಿಂದ ಹೋಗುವೆ? ನನಗೆ ಬೇಗನೆ ಹೇಳು," ಎಂದು ಕೇಳಿದನು. ಆನೆಯನ್ನು ನೋಡಿ ಕಮಲಗಳು ಭಯಪಡುವಂತೆಯೂ, ನೀರು ಹುಡುಕುವ ಚಿಗರೆಯು ದೂರಿಂದ ಬೇಟೆಗಾರನನ್ನು ನೋಡಿ ಅಂಜುವಂತೆಯೂ, ಆಕಳು ಹುಲಿಯನ್ನು ನೋಡಿ ನಡುಗುವಂತೆಯೂ ಮುಕ್ತಾಬಾಯಿಯು ಆ ನಿಂದಕನನ್ನು ಕಂಡು ನಡು ಗಿದಳು. ಮತ್ತು ಅವನಿಗೆ—"ನಿವೃತ್ತಿನಾಥರು ಮಂಡಿಗೆಗಳನ್ನು ಮಾಡಲಿಕ್ಕೆ ನನಗೆ ಆಜ್ಞಾಪಿಸಿರುವರು. ಅದಕ್ಕೋಸ್ಕರ ನಾನು ಕುಂಬಾರನ ಮನೆಗೆ ಗಡಿಗೆ ಯನ್ನು ತರುವದಕ್ಕೆ ಹೋಗುತ್ತೇನೆ," ಎಂದು ಉತ್ತರವನ್ನು ಕೊಟ್ಟಳು. ಆಗ ವಿಸೋಬನು ಧಿಃಕರಿಸಿ ನಕ್ಕು, ಮುಕ್ತಾಬಾಯಿಯನ್ನು ಹೊಡೆದನು. ಅವನು ಹಾಗೆಯೇ ಕುಂಬಾರನ ಮನೆಗೆಹೋಗಿ ಅವನಿಗೆ—"ನೀನು ಈಕೆಗೆ ಗಡಿಗೆಯನ್ನು ಕೊಟ್ಟರೆ, ನಿನಗೆ ನಾನು ಶಿಕ್ಷೆಯನ್ನು ಮಾಡುವೆನು. ನಿನ್ನ ಮೇಲಿದ್ದ ನನ್ನ ಸಾಲದ ಹಣವನ್ನು ನಾನು ಈಗಲೇ ಬೇಡುವೆನು" ಎಂದು ಹೇಳಿದನು. ವಿಸೋ ಬನ ಈ ಮಾತುಗಳನ್ನು ಕೇಳಿ, ಕುಂಬಾರನು ಚಿಂತಾತುರನಾದನು. ಸಂಸಾರ ದಲ್ಲಿ ನಮಗೆ ಸಂಪಾದನೆಯು ಇಲ್ಲದ್ದರಿಂದ ಮುಂದಿಯಿಂದ ಸಾಲ ತರಬೇಕಾ ಯಿತು. ಇದೊಂದು ನಮಗೆ ಭಯಂಕರ ರೋಗಹತ್ತಿದಹಾಗಾಗಿದೆ. ಇದು ಈಶ್ವ ರನ ಕ್ಷೋಭವೇ ಸರಿ. ಗೃಹಸ್ಥಾಶ್ರಮದಲ್ಲಿ ಬಡತನ ಬರುವದು, ಮುಪ್ಪಿನಲ್ಲಿ ಪುತ್ರಶೋಕವಾಗುವದು, ಪೂಜ್ಯಸ್ಥಾನವನ್ನು ಜನರು ನಿಂದಿಸುವದು, ಜನ್ಮದಲ್ಲೆಲ್ಲ ಅಭ್ಯಾಸ ಮಾಡಿದಾಗ್ಯೂ ಸಮಯಕ್ಕೆ ಪ್ರತ್ಯುತ್ತರ ಕೊಡುವದಕ್ಕೆ ಗೊತ್ತಾಗ ದಿರುವದು, ಮನಸ್ಸಿಗೆ ವಿಕಲ್ಪಗಳು ಹುಟ್ಟುವದು ಇವಕ್ಕೆಲ್ಲ ಈಶ್ವರಕ್ಷೋಭವೇ

ಕಾರಣವು. ಹೀಗೆ ವಿಚಾರಮಾಡುತ್ತ ಕುಂಬಾರನು ವಿಸೋಬನ ಮಾತುಗಳನ್ನು ಕೇಳಿ ಸುಮ್ಮನಾದನು. ಅಷ್ಟರೊಳಗೆ ಮುಕ್ತಾಬಾಯಿಯು ಬಂದು, ಮಂಡಿಗೆಯ ಗಡಿಗೆಯನ್ನು ಕೊಡು, ಎಂದು ಬೇಡಿದಳು. ಆಗ ಕುಂಬಾರನು 'ಅವ್ವಾ ನಮ್ಮಲ್ಲಿ ಗಡಿಗೆಗಳಿಲ್ಲ. ಇನ್ನೂ ನಾವು ಅವನ್ನು ಸುಟ್ಟಿಲ್ಲ. ಸುಟ್ಟನಂತರ ತೆಗೆದುಕೊಂಡು ಹೋಗು,' ಎಂದು ಅಂದನು. ಇದನ್ನು ಕೇಳಿ ಮಾಯಾವತಾರವಾದ ಮುಕ್ತಾಬಾಯಿಯು ಮನೆಗೆ ತಿರುಗಿ ಬಂದು, ಚಿಂತಾಕ್ರಾಂತಳಾಗಿ ಕರುಣಾಸ್ವರದಿಂದ ಅಳುತ್ತ ಕೂತಳು.

ಇಷ್ಟರಲ್ಲಿ ಜ್ಞಾನೇಶ್ವರರು ಸ್ನಾನವನ್ನು ಮಾಡಿ ಮಠಕ್ಕೆ ಬರಲು, ಮುಕ್ತಾಬಾಯಿಯ ಕರುಣಾಸ್ವರವು ಆಕಸ್ಮಿಕವಶಗಿ ಅವರ ಕಿವಿಗೆ ಬಿದ್ದಿತು. ಆಗ ಜ್ಞಾನದೇವರು ಆಕೆಯನ್ನು ಅಪ್ಪಿಕೊಂಡು ಮೋರೆಯ ಮೇಲೆ ಕೈಯಾಡಿಸಿ—ತಂಗೀ, ಯಾಕೆ ಸಂಕಟಪಡುತ್ತಿರುವೆ.? ಕಾರಣವೇನು ನನಗೆ ಹೇಳು, ಎಂದು ಕೇಳಲಾಗಿ, ಮುಕ್ತಾಬಾಯಿಯು ಎಲ್ಲ ವೃತ್ತಾಂತವನ್ನು ಸಾದ್ಯಂತವಾಗಿ ಹೇಳಿದಳು. ವಿಸೋಬಾಚಾಟಿಯು ಕಿಡಿಕೆಯೊಳಗಿಂದ ಎಲ್ಲ ವರ್ತಮಾನವನ್ನು ಕೇಳುವದಕ್ಕಾಗಿ ಹೊರಗೆ ಕುಳಿತಿದ್ದನು, ಅನಂತರ ಜ್ಞಾನದೇವರು—ಮುಕ್ತಾಬಾಯೀ, ನೀನು ಯಾಕೆ ಸುಮ್ಮನೆ ಚಿಂತೆಯನ್ನು ಮಾಡುತ್ತಿರುವೆ? ಅವನ ಸ್ವಭಾವಕ್ಕೆ ನಾವು ಯಾವ ಉಪಾಯವನ್ನು ಮಾಡಬೇಕು? ಎಂದು ನುಡಿದು, ಯೋಗಧಾರಣವನ್ನು ಮಾಡಿ, ಪಂಚಾಗ್ನಿಯನ್ನು ಹೊತ್ತಿಸಿದರು. ಆಗ ಅವರ ಮುಖದಿಂದ ಉರಿಯು ಹೊರಗೆ ಬರುತ್ತಿತ್ತು; ಕಣ್ಣುಗಳು ಕೆಂಪಗಾಗಿದ್ದವು. ಬೆನ್ನು ಕಾದು ಚೊಕ್ಕ ಬಂಗಾರದಂತೆ ಕೆಂಪಾಗಿ ಕಾದಿತ್ತು. ಈ ಕೌತುಕವನ್ನು ವಿಸೋಬನು ಹೊರಗಿನಿಂದ ನೋಡುತ್ತ ಕುಳಿತಿದ್ದನು. ಆಗ ಮುಕ್ತಾಬಾಯಿಗೆ ಜ್ಞಾನದೇವರು ಮಂಡಿಗೆಯನ್ನು ಮಾಡೆಂದು ಹೇಳಲು, ಮುಕ್ತಾಬಾಯಿಯು ಸಾಹಿತ್ಯಗಳನ್ನು ತಂದು, ಉರುಳಿಗಳನ್ನು ಲಟ್ಟಿಸಿ, ಒಂದು ಕ್ಷಣದೊಳಗೆ ಮಂಡಿಗೆಗಳನ್ನು ಸಿದ್ಧಮಾಡಿದಳು. ಇಷ್ಟಾದ ಬಳಿಕ ಜ್ಞಾನದೇವರು ಜಠರಾಗ್ನಿಯನ್ನು ಶಾಂತಮಾಡಿದರು. ಬಳಿಕ ಸ್ವಾನಂದವೆಂಬ ತಳಿಗೆಯೊಳಗೆ ಸಪ್ರೇಮಭಕ್ತಿಯೆಂಬ ಹಾಲನ್ನು ಹಾಕಿ, ಅದರಲ್ಲಿ ಶಾಂತಿಸುಖವೆಂಬ ಅನುಪಮ ಮಧುರವಾದ ಸಕ್ಕರೆಯನ್ನು ಬೆರಸಿದಳು. ಈ ಹಾಲು ಸಕ್ಕರೆಗಳೊಳಗೆ ಸ್ವಾನುಭವವೆಂಬ ಮಂಡಿಗೆಯನ್ನು ಕಲಿಸಿ, ನಿವೃತ್ತಿ, ಜ್ಞಾನದೇವ, ಸೋಪಾನ, ಮುಕ್ತಾಬಾಯಿ ಈ ನಾಲ್ವರು ಕೂಡಿ ಊಟಕ್ಕೆ ಕುಳಿತರು. ಬಳಿಕ ಶ್ರೀಹರಿಯು

ಭೋಕ್ತಾರನೆಂದು ತಿಳಿದು ಅವನ ನಾಮವನ್ನು ಉಚ್ಚರಿಸುತ್ತ ತುತ್ತು ಹಾಕು ವರು. ವಿಸೋಬನು ಹೊರಗೆ ನಿಂತು ಈ ಕೌತುಕವನ್ನು ನೋಡುತ್ತಿದ್ದನು. ಅವನ ಮನಸ್ಸಿನಲ್ಲಿ ಪಶ್ಚಾತ್ತಾಪವು ಹುಟ್ಟಿತು; ಆಗ ಅವನು—ಇವರು ಕೇವಲ ಈಶ್ವರನ ಮೂರ್ತಿಗಳು. ನಾನು ಇವರಿಗೆ ವಿಚಾರ ಮಾಡದೆ ವ್ಯರ್ಥವಾಗಿ ತ್ರಾಸಕೊಟ್ಟೆನು. ಶ್ರೇಷ್ಠವಾದ ವಜ್ರವು ನನಗೆ ಸಿಗಲು, ದುರ್ದೈವದಿಂದ ಅದು ಕಾಜಿನ ಮಣಿಯಂತೆ ನನಗೆ ತೋರಿತು. ವಿಕಲ್ಪವೆಂಬ ಕಾಮುಣೆಯಿಂದ ನಾನು ಚಿಂತಾಮಣಿಯನ್ನು ಬೀಸಿ ಒಗೆದೆನು. ಶಿಸೆಯೊಳಗೆ ಗಂಗಾಜಲವನ್ನು ಹಾಕಿದರೂ ಉನ್ಮತ್ತನಿಗೆ ಮದ್ಯದಹಾಗೆ ತೋರುವಂತೆಯೂ, ಶ್ರೀಕೃಷ್ಣನು ಪರಬ್ರಹ್ಮನ ಅವತಾರವಿದ್ದಾಗ್ಯೂ ದುರ್ಯೋಧನನಿಗೆ ಬೀಗನಾಗಿ ತೋರಿ ದಂತೆಯೂ ನನಗೆ ಇವರು ಮನುಷ್ಯರಾಗಿ ತೋರಿದರು. ನಾನು ಮನಸ್ಸಿನಲ್ಲಿ ವಿಕಲ್ಪಗಳನ್ನು ತಂದು ಇವರನ್ನು ಛಲಿಸಿದೆನು. ಎಂದು ಪುನಃಪುನಃ ಪಶ್ಚಾತ್ತಾ ಪಪಟ್ಟನು. ತರುವಾಯ ಅವನು ಆ ಮಹಾನುಭಾವರಿಗೆ ಶರಣು ಹೋಗಿ, ಅವರ ಉಚ್ಛಿಷ್ಟವನ್ನು ಭಕ್ಷಿಸಬೇಕೆಂತಲೂ ಅದರಿಂದ ತನ್ನ ಹಿತವನ್ನು ಮಾಡಿಕೊಳ್ಳಬೇಕೆಂತಲೂ ಆಲೋಚಿಸಿದನು. ಬಳಿಕ ಅವನು ಅವರೆಲ್ಲರೂ ಊಟಕ್ಕೆ ಕೂತ ಆಶ್ರಮಕ್ಕೆ ಬಂದನು. ಆಗ ಜ್ಞಾನದೇವರು ತಳಿಗೆಯನ್ನು ಬಚ್ಚಿ ಟ್ಟರು. ಆದರೂ ವಿಸೋಬನು ಜಪ್ಪುಹಾಕಿ ಒಂದು ತುತ್ತನ್ನು ಕಸುಕೊಂಡನು. ತುತ್ತನ್ನು ಬಾಯೊಳಗೆ ಹಾಕಿಕೊಂಡ ಕೂಡಲೆ ಜ್ಞಾನೇಶ್ವರರು ಜಪ್ಪುಹಾಕಲಿಕ್ಕೆ ನೀನೇನು ಹಕ್ಕಿಯೋ, ಎಂದು ನುಡಿದರು. ಈ ವಾಣಿಯನ್ನು ಕೇಳಿ ವಿಸೋಬನು ಇದೇ ಉಪದೇಶವೆಂದು ತಿಳಿದನು. ಆತನು ಗುರೂಪದೇಶದಿಂದ ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕುವಿಧವಾದ ವಾಣಿಗಳ ಆಚೆಗೆ ಹೋದನು. ಈ ನಾಲ್ಕು ವಾಣಿಗಳು ಯಾವದರಲ್ಲಿರುವವೋ ಅದರಲ್ಲಿಯೇ ಇವನು ಸಮರಸವಾಗಿ ಕೂಡಿದನು. ಅಂದರೆ ಅವನು ಬ್ರಹ್ಮಸ್ವರೂಪವಾದನು. ಅವನ ಅಜ್ಞಾನವೆಂಬ ಕತ್ತಲೆಯು ನಿರ್ಮೂಲವಾಯಿತು. ಯಾವ ಗಂಟೆಯಿಂದ ನಾದವು ಹೊರಟಿತ್ತೋ ಅದೇ ಗಂಟೆಯಲ್ಲಿ ನಾದವು ಲೀನವಾಗುವಂತೆ ಸ್ವರೂ ಪದಲ್ಲಿ ಸಮರಸನಾಗಿ, ಅಭೇದಸ್ವರೂಪವಾದನು. ಅನಂತರ ವಿಸೋಬನು ಎರಡೂ ಕೈಗಳನ್ನು ಜೋಡಿಸಿ ನಿಂತುಕೊಂಡು, ಜ್ಞಾನದೇವರ ಚರಣಗಳಮೇಲೆ ಮಸ್ತಕವನ್ನಿಟ್ಟು ನಮಸ್ಕರಿಸಿದನು. ಜ್ಞಾನದೇವರು ಅವನ ಅಂತರಂಗವನ್ನು ತಿಳಿದು ಅಭಯವನ್ನು ಕೊಟ್ಟರು. ನಾರದರ ದರ್ಶನವಾದ ಕೂಡಲೆ ವಾಲ್ಮೀ

ಕಿಯುಳ್ಳ ತಾಮಸಗುಣವನ್ನು ಬಿಟ್ಟಂತೆ ಜ್ಞಾನದೇವರ ಸಂಗತಿಯಿಂದ ವಿಸೋಬನು ತಾಮಸಗುಣವನ್ನು ಬಿಟ್ಟು ಸಾತ್ವಿಕನಾದನು. 'ಹಕ್ಕಿಯಂತೆ ಜಪ್ಪುಹಾಕುವೆ' ಎಂದು ಜ್ಞಾನದೇವರು ಅಂದದ್ದರಿಂದ, ಅವತ್ತಿನಿಂದ ವಿಸೋಬನಿಗೆ 'ವಿಸೋಬಾಖೇಚರ, ಎಂಬ ಹೆಸರು ಬಿದ್ದಿತು.

---

## ೪ನೆಯ ಪ್ರಕರಣ—ಸತ್ಪುರುಷರ ಸಮ್ಮೇಲನ.

---

ಒಂದಾನೊಂದು ದಿನ ಜ್ಞಾನದೇವರು ಪಂಢರಪುರಕ್ಕೆ ಬಂದರು. ಅಲ್ಲಿ ನಾಮದೇವನ ದರ್ಶನವನ್ನು ತೆಗೆದುಕೊಳ್ಳುವ ಇಚ್ಛೆಯು ಅವರಿಗೆ ಹುಟ್ಟಿತು. ಅವರು ಕೂಡಲೆ ವಿಠ್ಠಲನ ಮಂದಿರವನ್ನು ಪ್ರವೇಶಿಸಲು, ನಾಮದೇವನು ಜ್ಞಾನದೇವರನ್ನು ದೂರದಿಂದಲೇ ನೋಡಿ, ಸಾಷ್ಟಾಂಗನಮಸ್ಕಾರವನ್ನು ಹಾಕಿ ಪ್ರೇಮದಿಂದ ಭೆಟ್ಟಿಯಾದನು. ಆ ನಂತರ ಜ್ಞಾನದೇವರನ್ನು ಯಥೋಪಚಾರ ಪೂಜಿಸಿ ನಾಮದೇವನು—'ಈವೊತ್ತಿನ ದಿನ ನನ್ನ ಭಾಗ್ಯದ ಉದಯವಾದ್ದರಿಂದಲೇ ಜ್ಞಾನಿಗಳ ರಾಜನು, ದಯವಿಟ್ಟು ನನ್ನ ಆಶ್ರಮಕ್ಕೆ ಬಂದಿರುವನು. ಸಂಸಾರ ಕರ್ಮಗಳಲ್ಲಿ ಸಿಕ್ಕವರ ಪೂರ್ವಪುಣ್ಯವು ಫಲಿತವಾಗಿ ಸಾಕ್ಷಾತ್‌ಪಾಂಡುರಂಗನ ದರ್ಶನವಾದಂತೆ ಆಯಿತು. ಮೋಹಕ್ಕೆ ಸಿಕ್ಕ ಜಡಜೀವಿಗಳನ್ನು ಉದ್ಧರಿಸುವದಕ್ಕಾಗಿ ಸ್ವಾಮಿಯು ಅವತಾರವನ್ನು ತೆಗೆದುಕೊಂಡಿರುವನು.'' ಎಂದು ನುಡಿದು ಪುನಃ ಸಾಷ್ಟಾಂಗನಮಸ್ಕಾರವನ್ನು ಹಾಕಿದನು. ಆಗ ಜ್ಞಾನದೇವರು ನಾಮದೇವರಿಗೆ—'ನಿನಗೆ ಹೃಷಿಕೇಶನ ಸನ್ನಿಧಿಯು ಅಖಂಡವಾಗಿದ್ದದರಿಂದ ನಿನ್ನ ಭಾಗ್ಯಕ್ಕೆ ಪಾರವಿಲ್ಲ. ಪ್ರೇಮಸುಖದ ಮಾಧುರ್ಯವು ನಿನಗೆ ಸಿಕ್ಕದೆ. ನಿನ್ನ ಆಶೆಯೂ ನಷ್ಟವಾಗಿದೆ. ನೀನು ಹುಟ್ಟಿದ ವಂಶವು ಪವಿತ್ರವಾಯಿತು. ನಾಮದೇವಾ, ನನ್ನದೊಂದು ಜೀವದ ಗುಟ್ಟು ಅದೆ. ನೀನು ಕೇಳಿದರೆ ಹೇಳುವೆನು'' ಎಂದು ಮಾತಾಡುತ್ತ, ನಾಮದೇವನ ಕೈಹಿಡಿದುಕೊಂಡು, ಆತನನ್ನು ಲೀಲೆಯಿಂದ ಅಂತರ್ಮಂದಿರಕ್ಕೆ ಕರೆದೊಯ್ದರು.

ತರುವಾಯು ಜ್ಞಾನದೇವರು ''ತಮ್ಮಾ, ಜೀವನ್ಮುಕ್ತನಾಗಿ ಪಾವನನಾದರೂ, ಮನುಷ್ಯನು, ಗುರು, ದೇವ, ತೀರ್ಥ, ಭಜನೆ ಇವುಗಳನ್ನು ಬಿಡಬಾರದು. ನಿನ್ನ ಸಂಗತಿಯಲ್ಲಿದ್ದು, ಭೂಮಂಡಲದ ಮೇಲಿರುವ ಎಲ್ಲ ತೀರ್ಥಗಳನ್ನು ನೋಡಬೇಕೆಂಬ ಇಚ್ಛೆಯಿಂದ ನಿನ್ನ ಭೆಟ್ಟಿಗೆ ನಾನು ಬಂದಿರುವೆನು. ನನ್ನ

ಮನೋರಥವು ಪೂರ್ಣವಾಗುವದೋ ಇಲ್ಲವೋ ನನಗೆ ಹೇಳು'' ಎಂದು ನಾಮದೇವನನ್ನು ಕೇಳಿದರು, ನಾಮದೇವನು ಈ ಮಾತುಗಳನ್ನು ಕೇಳಿ ಮನಸ್ಸಿನಲ್ಲಿ ದುಃಖಪಟ್ಟು "ಮಹಾತ್ಮನೆ, ಪಂಢರೀಕ್ಷೇತ್ರವನ್ನು ಬಿಟ್ಟು ಎರಡನೇ ತೀರ್ಥಕ್ಷೇತ್ರಗಳನ್ನು ಯಾಕೆ ತಿರುಗಬೇಕು? ಸಧಾರಸವನ್ನು ತ್ಯಜಿಸಿ ಮನೆಮನೆಗೆ ಭಿಕ್ಷೆಬೇಡುವದುಂಟೇನು? ಸಾಮಗಾಯನವನ್ನು ಧಿಕ್ಕರಿಸಿ ಯಾರಾದರು ಡಬ್ಬಿನಮೇಲೆ ಹಾಡುವ್ಯಲಾವಣಿಗಳನ್ನು ಕೇಳುವರೋ? ಕಾಮಧೇನುವನ್ನು ಅಲಕ್ಷಿಸಿ, ಆಡನ್ನು ಯಾರಾದರೂ ಮನೆಗೆ ತರುವರೇನು?'' ಎಂದುನಾಮದೇವನು ಮನಸ್ಸಿನಲ್ಲಿ ಅಂದುಕೊಂಡು ಜ್ಞಾನದೇವರಿಗೆ,—ನಾನು ನಿಮಗೆನಮಸ್ಕಾರಮಾಡಿ ಹೇಳುತ್ತೇನೆ. ನಾನು ಸ್ವತಂತ್ರನಲ್ಲ. ಯಾವನು ನನ್ನನ್ನು ಲಾಲಿಸಿ ಪಾಲಿಸಿ ಬೆಳಿಸಿರುವನೋ, ಯಾವನು ಪುಂಡಲೀಕನಿಗೆ ವರವನ್ನು ಕೊಡಲಿಕ್ಕೆ ನಿಂತಿರುವನೋ, ಯಾವನು ರುಕ್ಮಿಣಿಯ ಪ್ರಿಯನಿರುವನೋ, ಅಂಥಪಾಂಡುರಂಗನ ವಶದಲ್ಲಿ ತ್ರಿಕರಣಪೂರ್ವಕವಾಗಿ ನಾನು ಇರುವೆನು. ಆ ಪಾಂಡುರಂಗನು ನನಗೆ ಅಪ್ಪಣೆಯನ್ನು ಕೊಟ್ಟರೆ ನಿಮ್ಮ ಅಪ್ಪಣೆಯನ್ನು ಪಾಲಿಸುವೆನು.'' ಎಂದು ನುಡಿದನು. ಆಗ ಜ್ಞಾನದೇವರು 'ನಾಮದೇವಾ, ನಿನ್ನ ಮನೋಭಾವವು ನನಗೆ ತಿಳಿಯಬಂತು. ನೀನು ಚತುರನೂ, ಸರ್ವಜ್ಞನೂ, ಉದಾರನೂ, ಭಕ್ತಿಜ್ಞಾನಗಳ ಖನಿಯೂ ಇರುವಿ.' ಎಂದು ಮಾತಾಡಿ ನಾಮದೇವನನ್ನು ಆಲಿಂಗಿಸಿ ಅವನ ಕೈಯನ್ನು ಹಿಡಿದು 'ನಡೆ, ದೇವರ ಗುಡಿಗೆಹೋಗಿ ತ್ವರೆಯಿಂದ ಪಾಂಡುರಂಗನ ಆಜ್ಞೆಯನ್ನು ಬೇಡಿಕೊಂಡು ಬರುವಾ' ಎಂದು ತತ್‌ಕ್ಷಣವೇ ಹೊರಟರು.

ಜ್ಞಾನದೇವರು ಮಹಾದ್ವಾರಕ್ಕೆ ಬಂದು ಗರುಡನ ಕಟ್ಟೆಗೆ ಪ್ರೇಮಭಾವದಿಂದ ನಮಸ್ಕರಿಸಿ, ಗರ್ಭಗುಡಿಯೊಳಗೆ ಪ್ರವೇಶಿಸಿ, ಇಟ್ಟಂಗಿಯ ಮೇಲೆ ನಿಂತಿರುವ ನಾರಾಯಣನನ್ನು ನೋಡಿದರು. ಅವರು ದೇವರನ್ನು ಆಲಿಂಗಿಸಿ ಸದ್ಭಾವದಿಂದ ಆತನ ಚರಣಗಳಿಗೆ ನಮಸ್ಕರಿಸಿ, ಮನಸ್ಸಿನಲ್ಲಿಯ ಗುಟ್ಟಿನ ಮಾತನ್ನು ಹೇಳಿದರು. ಜ್ಞಾನದೇವರ ಈ ಮಾತುಗಳನ್ನು ಕೇಳಿ ಜಗನ್ನಾಯಕನು ನಕ್ಕು— 'ಜ್ಞಾನದೇವನೇ, ನೀನು ಕೇವಲ ಚಿದ್ರೂಪನೂ, ಸ್ಫಟಿಕದಂತೆ ನಿರ್ಮಲನೂ, ಸರ್ವಸಂಗದಿಂದ ಅಲಿಪ್ತನೂ ಇರುವಿ. ನೀನು ಸಾಕ್ಷಾತ್ ಆತ್ಮರೂಪನಿರುತ್ತಿರಲು, ನಿನಗೆ ತೀರ್ಥಾಟನವೇತಕ್ಕೆಬೇಕು? ಸೂರ್ಯನ ಶರೀರಕ್ಕೆ ಲೇಪನವನ್ನು ಹಚ್ಚುವದೇಕೆ? ಚಂದ್ರನಿಗೆ ಶೀತೋಪಚಾರಮಾಡುವದೂ, ಕ್ಷೀರಸಾಗರಕ್ಕೆ

ಅತಿಥಿಯ ಉಪಚಾರವನ್ನು ಮಾಡುವದೂ, ಸರಸ್ವತಿಗೆ ೬೪ ವಿದ್ಯೆಗಳನ್ನು ಕಲಿಸುವದೂ ವ್ಯರ್ಥವಲ್ಲವೇ? ಅಪ್ರಯೋಜಕದ ವಿಚಾರಗಳನ್ನು ಮನಸ್ಸಿನಲ್ಲಿ ತಂದು ಯಾಕೆ ತಿರುಗುತ್ತೀ?'' ಎಂದು ನುಡಿದನು. ಅದಕ್ಕೆ ಜ್ಞಾನದೇವರು—''ನಾರಾಯಣಾ, ನೀನು ಹೇಳುವದು ಸತ್ಯವು. ಆದರೆ ನಾಮದೇವನಂಥ ಪ್ರೇಮಲ ಭಕ್ತನ ಸಂಗತಿಯು ನನಗೆ ಸಿಗಬೇಕು. ಇವನ ಸಮಾಗಮಸುಖದಿಂದ ನನ್ನ ದೇಹವನ್ನು ಸಾರ್ಥಕವಾಗಿ ಮಾಡಿಕೊಳ್ಳಬೇಕು ಎಂದು ನಾನು ಇಚ್ಛಿಸುತ್ತೇನೆ'' ಎಂದು ಮಾತಾಡುತ್ತ ಪಾಂಡುರಂಗನ ಚರಣಗಳಮೇಲೆ ಪ್ರೀತಿಯಿಂದ ಮಸ್ತಕವನ್ನಿಟ್ಟರು. ಆಗ ಪಂಢರೀನಾಥನು ನಕ್ಕು ನಾಮದೇವನ ಕಡೆಗೆ ತಿರುಗಿ, ''ನಾಮಾ, ಮೂರ್ತಿಮಂತ ಪರಬ್ರಹ್ಮನಾದ ಜ್ಞಾನದೇವನು ನಿನ್ನ ಸಂಗತಿಯನ್ನು ಬಯಸುತ್ತಿರುವನು. ನೀನು ಆತನ ಸಂಗಡ ಹೋಗಿ, ಅವನ ಮನಸ್ಸಿನಂತೆ ವರ್ತಿಸಿ ತಿರುಗಿಬಾ. ಆದರೆ ಕುಳಿತಿರುವಾಗಲೂ ಮಲಗಿಕೊಳ್ಳುವಾಗಲೂ ನಡೆಯುವಾಗಲೂ ನನ್ನನ್ನು ಮರೆಯಬೇಡ. ನನ್ನ ಜೀವದ ಜೀವವಾದ ನಾಮಾ, ನನ್ನ ಮೇಲೆ ಲೋಭವಿರಲಿ'' ಎಂದು ನುಡಿಯುವಾಗ, ಪಾಂಡುರಂಗನ ಕುತ್ತಿಗೆಯ ಶಿರಗಳು ಉಬ್ಬಿಹೋಗಿ ಕಂಠವು ಗದ್ಗದಿತವಾಯಿತು.

ಬಳಿಕ ಭಗವಂತನು ಜ್ಞಾನದೇವರನ್ನು ಕುರಿತು—''ನೀನು ಸರ್ವಜ್ಞನೂ, ಸುಖ ಮೂರ್ತಿಯೂ ಇರುವದು ನಿಜವು. ಆದರೆ ನಿನ್ನ ಹತ್ತರ ನಾನೊಂದು ಬೇಡುವೆನು. ಅದು ನಿನ್ನ ಸ್ಮರಣದಲ್ಲಿರಲಿ. ನಾಮದೇವನು ನನ್ನ ಕೃಪೆಯಿಂದಲೇ ಬೆಳೆದಿರುವ ಕಾರಣ, ಅವನ ಮೇಲೆ ನನ್ನ ಪ್ರೀತಿಯು ಬಹಳ. ಒಂದು ವೇಳೆ ಲಕ್ಷ್ಮಿಯು ನನ್ನ ಕಣ್ಣೆದುರಿಗಿಲ್ಲದಿದ್ದರೂ, ಅವಳ ವಿಯೋಗವನ್ನು ಸಹಿಸುವೆನು. ನೀನು ನನ್ನನ್ನು ಸಂಕಟದಲ್ಲಿ ಹಾಕಿ ಕೇಳಿದ್ದರಿಂದ, ನಿನ್ನ ವಚನವನ್ನು ಮೀರಲಾರೆನು. ನಾಮನ ಹೊರತು ನನಗೆ ಯಾವದೂ ಪ್ರಿಯವಿಲ್ಲ.'' ಎಂದು ನುಡಿದನು; ಮತ್ತು ಆತನು ನಾಮದೇವನ ಕೈಯನ್ನು ಜ್ಞಾನದೇವರ ಕೈಯಲ್ಲಿ ಕೊಟ್ಟು ಅಂದದ್ದೇನಂದರೆ—ರಾತ್ರಿ ಹಗಲು ಇವನನ್ನು ಮರೆಯಬೇಡ, ಪ್ರೀತಿಯಿಂದ ರಕ್ಷಿಸು. ನನ್ನ ಕುತ್ತಿಗೆಗೆ ಶೋಭಿಸುವ ಉತ್ತಮವಾದ ರತ್ನವೆಂದರೆ ನಾಮನೇ ಸರಿ. ನಾಮನು ಹುಟ್ಟಿದಂದಿನಿಂದ ನಾನು ಅವನನ್ನು ಅಗಲಿರುವದಿಲ್ಲ. ನಿನ್ನ ಆ ಗ್ರಹದ ದೆಸೆಯಿಂದ ಅವನನ್ನು ಈವೊತ್ತು ಕಳಿಸುತ್ತೇನೆ.'' ಹೀಗೆ ಮಾತಾಡುತ್ತಿರುವಾಗ ರಮಾಕಾಂತನ ಕಂಠವು ಗದ್ಗದಿತವಾಗಿ ಕಣ್ಣುಗಳು ನೀರಿನಿಂದ ತುಂಬಿದವು. ಅನಂತರ ಜ್ಞಾನದೇವರು ಪಾಂಡು

ರಂಗನ ಚರಣಗಳ ಮೇಲೆ ಮಸ್ತಕವನ್ನಿಟ್ಟು ನಮಸ್ಕರಿಸಿ, ನಾಮದೇವನ ಕೈಯನ್ನು ಹಿಡಕೊಂಡು ಚಂದ್ರಭಾಗದ ತೀರಕ್ಕೆ ಬಂದರು. ಇಬ್ಬರೂ ಸ್ನಾನ ಮಾಡಿ, ಪುಂಡರೀಕನಿಗೆ ಪ್ರದಕ್ಷಿಣೆ ಹಾಕಿ, ಚರಣಗಳಿಗೆ ನಮಸ್ಕರಿಸಿ ಆಜೆಯ ದಂಡೆಗೆ ಹೋದರು.

ಇತ್ತ ನಾಮದೇವನನ್ನು ಕಳಿಸಿ ವಿಠ್ಠಲನು ಗುಡಿಗೆ ತಿರುಗಿ ಬಂದನು. ಅಷ್ಟರಲ್ಲಿ ರುಕ್ಮಿಣಿಯು ಬಂಗಾರದ ಪಾತ್ರೆಯನ್ನು ತೆಗೆದುಕೊಂಡು, ಶ್ರೀಪತಿಯ ಚರಣಗಳನ್ನು ತೊಳೆಯುಲಿಕ್ಕೆ ಬಂದಳು. ರುಕ್ಮಿಣಿಯು ಶ್ರೀಕಾಂತನ ಮುಖ ವನ್ನು ದಿಟ್ಟಿಸಿ ನೋಡುವಷ್ಟರೊಳಗೆ, ಅವನ ಕಣ್ಣುಗಳು ಅಶ್ರುಗಳಿಂದ ತುಂಬಿ ಹೋಗಿದ್ದವು. ಮೈಯೆಲ್ಲಾ ಬೆವತು ನೀರಾಗಿತ್ತು. ಇದನ್ನು ನೋಡಿ, ಆ ಜಗ ನ್ಮಾತೆಗೆ ಆಶ್ಚರ್ಯವಾಯಿತು. ಆಗ ರುಕ್ಮಿಣಿಯು ಪಾಂಡುರಂಗನ ಚರಣಕ್ಕೆ ರಗಿ—ಈವೊತ್ತಿನ ದಿವಸ ನಿಮ್ಮ ಅವಸ್ಥೆಯು ಹೀಗೆ ಯಾಕೆ ವಿಪರೀತವಾಗಿದೆ? ತಮ್ಮ ಸ್ಥಿತಿಯನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ' ಎಂದು ಕೇಳಿದಳು. ರುಕ್ಮಿಣಿಯ ಈ ಮಾತುಗಳನ್ನು ಕೇಳಿ, ಜಗಜ್ಜೀವನನಾದ ವಿಠ್ಠಲನು—ನಾಮ ದೇವನ ವಿಯೋಗದಿಂದ ನನ್ನ ಹೃದಯವು ಇಬ್ಭಾಗವಾಗಿದೆ. ಅವನ ಮೇಲೆ ನನ್ನ ಪ್ರೀತಿಯು ಬಹಳವಾದ್ದರಿಂದ ಮನಸ್ಸಿಗೆ ವ್ಯಸನವಾಗಿರುವದು. ಬೇರೆ ಯಾವ ಸುಖದಿಂದಲೂ ನನ್ನ ಬುದ್ಧಿಯು ಸ್ಥಿರವಾಗಲೊಲ್ಲದು. ನಾಮದೇವನಿಗೆ ನನ್ನ ಹೊರತು ಇಷ್ಟಮಿತ್ರರೂ, ಸಜ್ಜನರೂ, ಬಾಂಧವರೂ ಇಲ್ಲ. ಅಂದಬಳಿಕ ನನ್ನನ್ನು ಅಗಲಿ ಅವನು ತನ್ನ ಪ್ರಾಣವನ್ನು ಹ್ಯಾಗೆ ರಕ್ಷಿಸಿಕೊಳ್ಳುವನೆಂಬ ದೊಡ್ಡ ಚಿಂತೆಯು ನನಗೆ ಉತ್ಪನ್ನವಾಗಿದೆ. ಭಕ್ತಿಯ ನಿಧಿಯಾದ ನಾಮದೇವನು ಕೃಪಣನಾದ ನನ್ನ ಸೊತ್ತಾಗಿರುವನು. ಜ್ಞಾನದೇವನು ಯಾಚಕನಾಗಿ ಬಂದು, ಅವನನ್ನೇ ದಾನ ತೆಗೆದುಕೊಂಡು ಹೋದನಲ್ಲ! ಮುಪ್ಪಿನಲ್ಲಿ ಹುಟ್ಟಿದ ಹುಡು ಗನ ಮೇಲೆ ತಂದೆಯು ಪ್ರೀತಿಮಾಡುವಂತೆ, ನಾನು ನಾಮನ ಮೇಲೆ ಯಾವಾ ಗಲೂ ಪ್ರೀತಿ ಮಾಡುತ್ತಿದ್ದೆನು. ಅವನನ್ನು ಜ್ಞಾನದೇವನು ತೀರ್ಥಾಟನಕ್ಕೋ ಸ್ಕರ ಬಲಾತ್ಕಾರದಿಂದ ಕಸಕೊಂಡು ಹೋದನಲ್ಲ! ನಾನು ಜಗದಾಕಾರವೃಕ್ಷವು, ನಾಮದೇವನು ಆ ವೃಕ್ಷದ ಬೇರುಗಳಿಗೆ ನೀರು ಇದ್ದಹಾಗೆ ಇದ್ದನು; ಜ್ಞಾನದೇ ವನೆಂಬ ಹೊಸನೀರು ಜಲಸ್ವರೂಪದಿಂದ ಇದ್ದ ಆ ನಾಮದೇವನನ್ನು ಆಕರ್ಷಣ ಮಾಡಿತಲ್ಲ! ಎಂದು ಮಾತಾಡಿದನು.

ಭಗವಂತನ ಈ ಮಾತುಗಳನ್ನು ಕೇಳಿ ರುಕ್ಮಿಣಿಯು—ಯಾರ ಮುಖ

ದಲ್ಲಿ ನಿಮ್ಮ ನಾಮೋಚ್ಚಾರವು ನಡೆಯುತ್ತಿರುವದೋ ಅವರಿಗೆ ಶೋಕ-ದುಃಖ-ಮೋಹಗಳು ಬಾಧಿಸುವದಿಲ್ಲ' ಎಂದು ನುಡಿದಳು. ಅದಕ್ಕೆ ಜಗಜ್ಜೀವನನು—“ನಿನ್ನ ಮಾತು ನಿಜ. ಆದರೆ ಭಕ್ತರ ಹೊರತು ನನಗೆ ಒಂದು ಕ್ಷಣವಾದರೂ ವಿಶ್ರಾಮವಾಗುವದಿಲ್ಲ. ನಾನು ಅವ್ಯಕ್ತನೂ ನಿರಾಕಾರನೂ ಇದ್ದಾಗ್ಯೂ, ನನ್ನ ನಿಜಭಕ್ತರ ಸಲುವಾಗಿ ಸಗುಣನಾದೆನು. ನನ್ನ ಭಕ್ತರು ಕೂಡುವ ದಕ್ಕಾಗಿಯೇ ವೈಕುಂಠವನ್ನು ನಿರ್ಮಿಸಿದೆನು. ನನ್ನ ಭಾಗ್ಯದಲ್ಲಿ ಪಾಲುಗಾರರಾದ ನನ್ನ ನಿಜಭಕ್ತರೇ ಅಧಿಕಾರಿಗಳು. ಅವರ ಜೀವದ ಗುಟ್ಟನ್ನು ನಾನೊಬ್ಬನೇ ಬಲ್ಲೆನು. ನನ್ನ ಜೀವದಗುಟ್ಟು, ಭಕ್ತರ ಹೊರತು ಅನ್ಯರಿಗೆ ಗೊತ್ತಾಗುವದಿಲ್ಲ” ಎಂದು ಮಾತಾಡುತ್ತಿರುವಾಗ, ಆ ರಮಾಕಾಂತನ ಕಂಠವು ಗದ್ಗದಿತವಾದರೂ ಪುನಃ ಆತನು ರುಕ್ಮಿಣಿಯ ಮುಂದೆ—“ಅಹಂಕಾರವನ್ನು ಸಂಪೂರ್ಣವಾಗಿ ತ್ಯಜಿಸಿ, ನನ್ನಲ್ಲಿ ಸಮರಸವಾಗಿ ಕೂಡಿದ ಭಕ್ತರು, ದೀಪವೂ ಪ್ರಕಾಶವೂ ಭೇದರಹಿತವಾಗಿರುವಂತೆಯೂ, ಕಿರಣಗಳೂ ಸೂರ್ಯನೂ ಏಕತ್ರವಾಗಿರುವಂತೆಯೂ, ಬಂಗಾರವೂ ಕಾಂತಿಯೂ ಕೂಡಿ ಇರುವಂತೆಯೂ ಇರುವರು. ನಾಮದೇವನು ಇಂಥ ವಿಜ್ಞಾನಿಗಳಾದ ಭಕ್ತರಾಜರ ಚರಣಧೂಳಿಯು. ಅವನ ವಿಯೋಗವು ಈವೊತ್ತಿನ ದಿನ ಆಗಿರುವದೆಂದು ನನಗೆ ದುಃಖವಾಗುತ್ತದೆ.” ಎಂದು ನುಡಿದು, ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು.

ಇದನ್ನು ಕಂಡು ಜಗಜ್ಜನನಿಯಾದ ರುಕ್ಮಿಣಿಯೂ ದುಃಖಪಟ್ಟಳು. ಕೂಡಲೆ ಆ ಮಾತೆಯು ಸಮಾಧಾನವನ್ನು ತಾಳಿ, ಆ ದೇವಶ್ರೇಷ್ಠನನ್ನು ಎಬ್ಬಿಸಿದಳು. ಅನಂತರ ಭಕ್ತಜನರನ್ನು ಕರೆದು ಆಕೆಯು—“ಭಕ್ತಶ್ರೇಷ್ಠರೇ, ಚಕ್ರಪಾಣಿಯಾದ ದೇವನು ಒಮ್ಮಿಂದೊಮ್ಮೆಲೆ ಮೂರ್ಛಿತನಾಗಿ ಬಿದ್ದಿರುವನು. ನೀವು ಯಾವ ಉಪಾಯವನ್ನಾದರೂ ಮಾಡಿ, ಕಾರಣವನ್ನು ಕೇಳಿರಿ,” ಎಂದು ಹೇಳಿಕೊಂಡಳು. ಆಗ ಭಕ್ತಜನರು ತಮ್ಮ ಧೋತರಗಳ ಸೆರಗುಗಳಿಂದ ದೇವನಿಗೆ ಗಾಳಿಯನ್ನು ಹಾಕುತ್ತ—“ಕೃಪಾಸಾಗರನೇ, ಜಗದುದ್ಧಾರನೇ, ಈ ದಿನ ನೀನು ಏಕೆ ಇಷ್ಟು ವ್ಯಾಕುಲಪಟ್ಟಿರುವೆ?” ಎಂದು ಪಾಂಡುರಂಗನನ್ನು ಕೇಳಿದರು. ಭಕ್ತರ ವಚನಗಳನ್ನು ಕೇಳಿ, ಜಗಜ್ಜೀವನನು ಧೈರ್ಯದಿಂದ ತನ್ನ ಪ್ರಾಣವನ್ನು ಸಾವರಿಸಿಕೊಂಡು, ಎಚ್ಚತ್ತನು, ಮತ್ತು ಸದ್ಗದನಾಗಿ—“ನಾಮನ ಹೊರತು ನನಗೆ ಯಾವ ಅನ್ಯ ಪದಾರ್ಥವೂ ಸೇರುವದಿಲ್ಲ. ಅವನಿಗೆ ಆಲಿಂಗನವನ್ನು ಕೊಟ್ಟು, ಎದೆಗೆ ಅವಚಿಕೊಳ್ಳಬೇಕೆಂಬ ಹಾಗೆ ಆಗಿದೆ. ನಾನು ಯಾವಾಗಲೂ

ಭಕ್ತರ ಕಾರ್ಯವನ್ನು ಮಾಡುತ್ತೇನೆಂದು ಹೇಳುವದಕ್ಕೂ ನನಗೆ ನಾಚಿಕೆಯಾಗುತ್ತದೆ; ಯಾಕಂದರೆ, ನಾಮದೇವನು ನನಗೆ ಸಂಕಟಗಳನ್ನು ಎಂದೂ ಹಾಕಲಿಲ್ಲ. ನಾನು ಅವನಿಗೆ ಧರ್ಮಾರ್ಥ-ಕಾಮ-ಮೋಕ್ಷಗಳನ್ನೂ ಕೊಟ್ಟಿರುವದಿಲ್ಲ. ಅವನು ಜನ್ಮದಾರಭ್ಯ ನನ್ನ ಸೇವೆಯನ್ನು ಮಾಡಿ, ಆ ಸೇವೆಯ ಋಣವನ್ನು ನನ್ನ ಮೇಲೆ ಕಟ್ಟಿಟ್ಟು ಹೊರಟು ಹೋದನು. ಕಾಮ-ಕ್ರೋಧ-ಮದ-ಮತ್ಸರಗಳೆಂಬ ದುರ್ಧರವಾದ ವೈರಿಗಳನ್ನು ನಾಶಮಾಡಿ, ತನ್ನ ಪುರುಷಾರ್ಥದಿಂದ ಸಂಸಾರವನ್ನು ಅವನು ಗೆದ್ದನು. ಲೋಭ-ದಂಭಗಳಿಂದ ಬಹು ದೂರವಿದ್ದು, ಮಹಾ ವೈರಿಗಳಾದ ಮಾಯಾ-ಮೋಹಗಳನ್ನು ದಾಟಿದನು. ನಾನಾ ದೈವತಗಳ ಮಹತ್ವವು ಅವನ ಮನಸ್ಸಿನಲ್ಲಿ ಬರಲಿಲ್ಲ. ಇಂಥ ನನ್ನ ಭಕ್ತನಾದ ನಾಮನು ಹಾದಿಯು ನಡೆದು ದಣದಿರಬಹುದಲ್ಲವೇ? ಅವನ ಹಸಿವೆ ನೀರಡಿಕೆಗಳನ್ನು ಯಾರಾದರೂ ಕೇಳುವರೊ, ಎಂಬ ಚಿಂತೆಯು ನನ್ನ ಮನಸ್ಸಿನಲ್ಲಿ ಉಂಟಾಗುತ್ತದೆ'' ಎಂದು ಆ ಭಕ್ತರ ಮುಂದೆ ಹೇಳಿದನು. ಹೀಗೆ ಶಾಂರ್ಙ್ಗಧರನು ಮಾತಾಡುತ್ತಿರುವಾಗ, ಭಕ್ತರು ಜಯಜಯಕಾರ ಶಬ್ದಗಳನ್ನುಚ್ಚರಿಸಿ, ಪ್ರೇಮದಿಂದ ಪ್ರಭುವಿನ ಚರಣಕ್ಕೆ ಸಾಷ್ಟಾಂಗವೆರಗಿ ಆನಂದಭರಿತರಾದರು. ಅಲ್ಲಿಂದ ಆ ಭಗವದ್ಭಕ್ತರು ಗರುಡನ ಕಟ್ಟೆಗೆ ಬಂದು, ಆನಂದದಿಂದ ಕುಣಿದು ಪುನಃಪುನಃ ದಂಡವತ್ ನಮಸ್ಕಾರಗಳನ್ನು ಹಾಕಿದರು. ಈ ಪ್ರಕಾರ ಭಕ್ತರ ಆನಂದವನ್ನು ನೋಡಿ, ಭಗವಂತನಿಗೆ ಸಮಾಧಾನವಾಗಿ ಆತನು ಸಾವಧಾನದಿಂದ ಎದ್ದು ಕುಳಿತನು.

ಇತ್ತ ನಾಮದೇವನು ಕ್ಷಣಕ್ಷಣಕ್ಕೆ ಹಿಂದಕ್ಕೆ ತಿರುಗಿ ನೋಡಿ—"ದೇವನೇ, ನನ್ನನ್ನು ಬಿಟ್ಟು ನಡೆದೆಯಾ! ನನ್ನನ್ನು ಕಳಿಸಲಿಕ್ಕೆ ನೀನು ಸಂಗಡ ಬರುವದಿಲ್ಲವಲ್ಲ!! ಎಂದು ಮಾತಾಡುತ್ತ ಆಗಾಗ್ಗೆ ಮೂರ್ಛೆಬಂದು ಬೀಳುತ್ತಿದ್ದನು. ತಾಯಿಯ ವಿಯೋಗವಾದ ಕೂಡಲೆ ಬಾಲಕನು ಆಕ್ರೋಶದಿಂದ ಅಳುವಂತೆಯೂ, ಚಿಗರಿಯಮರಿಯು ತನ್ನ ತಾಯಿಯಿಂದ ತಪ್ಪಿಸಿಕೊಂಡು ದಿಕ್ಕುಗೆಟ್ಟು ತಿರುಗುವಂತೆಯೂ, ಹಸಿವೆ-ನೀರಡಿಕೆಗಳಿಂದ ತಳಮಳಿಸುವವರು ಅನ್ನ ನೀರು ಹುಡುಕುವಂತೆಯೂ, ಬೇಸಿಗೆಕಾಲದಲ್ಲಿ ಮೀನಗಳು ನೀರುಬಿಟ್ಟು ತಳಮಳಿಸುವಂತೆಯೂ, ಆವೆಯ ಮರಿಗೆ ಹಸಿವೆ ಆದಾಗ್ಗೆ ತಾಯಿಯು ಅದರ ಕಣ್ಣಿಗೆ ಬೀಳದೆ ಇರುವಂತೆಯೂ, ನಾಮದೇವನು ಪಾಂಡುರಂಗನ ವಿಯೋಗದಿಂದ ತಳಮಳಿಸಿದನು. ಆಗ ನಾಮದೇವನು ಕರುಣಾಯುಕ್ತಶಬ್ದಗಳಿಂದ—ದೇವಾ,

ನಾನು ಅಡವಿಯಲ್ಲಿ ಚಿಂತಾಕ್ರಾಂತನಾಗಿ ಬಿದ್ದಿರುವೆನು. ಚಕ್ರಪಾಣಿಯೇ, ನನಗೆ ಈ ಸಮಯದಲ್ಲಿ ಯಾವ ಮಿತ್ರರೂ ಇರುವದಿಲ್ಲ, ನೀನೇ ನನ್ನ ಇಷ್ಟ-ಮಿತ್ರನು, ನೀನೇ ನನ್ನ ಬಂಧುಬಳಗವು, ಹೇ ಪಂಢರಿನಾಥಾ, ನೀನೇ ನನ್ನ ಕುಲದೈವತವು. ಅನಾಥನಾಥಾ, ಶ್ರೀ ವಿಠ್ಠಲಾ, ನೀನೇ ನನ್ನ ಮೋಕ್ಷಸಾಧನವು. ನೀನು ಅಂತಸ್ಸಾಕ್ಷಿಯಾಗಿ ಚೈತನ್ಯಘನನಾಗಿರುತ್ತೀ. ಸತ್ಯಾಸತ್ಯಗಳನ್ನು ತಿಳಿಯುವವನು ನೀನೇ. ಕೃಪಾಸಾಗರಾ, ಜಗತ್ತಿನ ಒಡೆಯನೇ, ನಾಮನು ನಿನ್ನ ಹೊರತು ಕಷ್ಟದಿಂದ ಬಳಲುತ್ತಿರುವನು. ಅವನ ಮೇಲೆ ಕೃಪಾದೃಷ್ಟಿಯನ್ನಿಟ್ಟು ಆ ಪಾಮರನ ಹೃದಯದಲ್ಲಿ ನೀನು ಇರಬೇಕು.'' ಎಂದು ನುಡಿದು ತಳಮಳಿಸುತ್ತಿದ್ದನು.

ಆಗ ಜ್ಞಾನದೇವರು ನಾಮದೇವನನ್ನು ಕುರಿತು—''ಎಲೈ ನಾಮದೇವಾ, ಪ್ರೇಮದ ಮೂಲವೇ ನಿನ್ನ ಹೃದಯದಲ್ಲಿರುತ್ತಿರುವಾಗ್ಗೆ ನೀನು ಯಾಕೆ ಇಷ್ಟು ದುಃಖಿಸುತ್ತೀ? ನಿನ್ನ ಹೃದಯದಲ್ಲಿ ಸಾಕ್ಷಾತ್ ಜಗನ್ನಾಯಕನಿರುವಾಗ ನೀನು ಕಷ್ಟದಿಂದ ತಳಮಳಿಸಬಾರದು. ಭಕ್ತಶ್ರೇಷ್ಠನೇ, ನೀನೇ ವಿಚಾರಮಾಡಿ ನೋಡು. ನಿನ್ನ ಹೃದಯದಲ್ಲಿಯೇ ನಿನ್ನ ಆನಂದವದೆ. ಸಾಕ್ಷಾತ್ ಸಗುಣದೇವನ ಜ್ಯೋತಿಯು ನೀನೇ ನಿಶ್ಚಯವಾಗಿರುವಿ? ಕಸ್ತೂರಿಮೃಗವು ತನ್ನ ಹೊಕ್ಕಳಲ್ಲಿಯೇ ಸುಗಂಧವನ್ನಿಟ್ಟುಕೊಂಡು, ಅದರ ಸಲುವಾಗಿ ಅಡವಿಯನ್ನೆಲ್ಲ ತಿರುಗುವಂತೆ ನೀನು ಆತ್ಮಸ್ವರೂಪವನ್ನು ತಿಳಿಯದೆ, ವಿಯೋಗ ದುಃಖದಿಂದ ಶ್ರಮಬಡುತ್ತಿರುವಿ? ದುರ್ದೈವಿಯಾದವನ ಮನೆಯಲ್ಲಿ ಅಗಣಿತವಾದ ದ್ರವ್ಯವು ಹೂಳಿಟ್ಟಿರಲು, ಅದನ್ನು ಕಾಣದೆ ಅವನು ಉಪವಾಸ ಮಾಡುವಂತೆ ನಿನ್ನ ಸ್ಥಿತಿಯಾಗಿದೆ,'' ಎಂದು ಮಾತಾಡಿದನು.

ಈ ಮಾತುಗಳನ್ನು ಕೇಳಿ ನಾಮದೇವನು—ಜ್ಞಾನೇಶ್ವರರೇ, ಇಟ್ಟಂಗಿಯ ಮೇಲೆ ಎರಡೂ ಚರಣಗಳನ್ನು ಸಮನಾಗಿ ಜೋಡಿಸಿಕೊಂಡು ನಿಂತಿರುವ ಸಾಕ್ಷಾತ್ ಸಗುಣ ಪರಬ್ರಹ್ಮನನ್ನು ನನಗೆ ತೋರಿಸಿರಿ. ಯಾರನ್ನು ನಾರದತುಂಬರರು ಪ್ರೇಮದಿಂದ ರಾತ್ರಿ-ಹಗಲು ಹಾಡಿ ಸುತ್ತಿಸುವರೋ, ಯಾವನು ಪುಂಡರೀಕನಿಗೆ ವರವನ್ನು ಕೊಡುವದಕ್ಕಾಗಿ ನಿಂತಿರುವನೋ, ಯಾವನನ್ನು ಸನಕಾದಿಕರು ನಿರಂತರ ಧ್ಯಾನಮಾಡುವರೋ, ಯಾವಾತನು ಕರಿಗೊರಲನಾದ ಪರಮೇಶ್ವರನ ಪ್ರಿಯಭೂಷಣನಿರುವನೋ, ಯಾವನು ಪೀತಾಂಬರ ಧಾರಿಯಾಗಿ ಟೊಂಕದ ಮೇಲೆ ಎರಡೂ ಕೈಗಳನ್ನು ಇಟ್ಟುಕೊಂಡಿರುವನೋ, ಆ ಭಕ್ತ

ಕೈವಾರಿಯಾದ ರುಕ್ಮಿಣೀಕಾಂತನನ್ನು ನನಗೆ ಈಗ ತೋರಿಸಿರಿ. ಜ್ಞಾನದೇವರೇ, ನನಗೆ ಯೋಗ-ಯುಕ್ತಿ-ಸಾಧನಗಳು ಗೊತ್ತಿರುವದಿಲ್ಲ. ನನ್ನ ವಿಶ್ರಾಂತಿಸ್ಥಾನವಾದ ಜಗಜ್ಜೀವನನನ್ನು ನೋಡದೆ, ನನ್ನ ಪ್ರಾಣಗಳು ಹೋಗಹತ್ತಿವೆ.'' ಎಂದು ಅಂದನು.

ಆಗ ಜ್ಞಾನದೇವರು—''ಪ್ರಿಯಭಕ್ತನೇ, ಭಗವಂತನ ಹೊರತು ಯಾವ ಸ್ಥಳವೂ ಪೂರ್ಣವಾಗಿ ತುಂಬಿಕೊಳ್ಳದೆ ಇರುವದಿಲ್ಲ. ಅವನು ಎಲ್ಲಿಯಾದರೂ ತುಂಬಿರುವನು. ನೀನು ಭೇದಭಾವವನ್ನು ಬಿಟ್ಟು ಹೃದಯದಲ್ಲಿ ಅದ್ವೈತವನ್ನು ತಿಳಿದುಕೋ'' ಎಂದು ಹೇಳಲು, ಅದಕ್ಕೆ ನಾಮದೇವನು—''ಚಾತಕಪಕ್ಷಿಯು ನದಿಯ ನೀರನ್ನು ಸೇವಿಸದೆ, ಆಕಾಶದಿಂದ ಸುರಿಯುವ ಹನಿಗಳನ್ನೇ ಪ್ರೀತಿಯಿಂದ ಕುಡಿಯುವಂತೆಯೂ, ಪತಿವ್ರತೆಯು ಪತಿಯ ಸಂಬಂಧವಾದ ಮಾತುಗಳ ಹೊರತಾಗಿ ಬೇರೆ ಮಾತುಗಳನ್ನು ಕೇಳದೆ ಇರುವಂತೆಯೂ, ವಿಶ್ವದಲ್ಲೆಲ್ಲಾ ನಾರಾಯಣನು ತುಂಬಿರುವನೆಂಬ ವಚನವನ್ನು ನಾನು ಕೇಳಲಾರೆನು. ಅದು ನನಗೆ ಸುಳ್ಳೇ ಕಾಣಿಸುವದು,'' ಎಂದು ಉತ್ತರ ಕೊಟ್ಟನು. ಇದಕ್ಕೆ ಜ್ಞಾನದೇವರು ''ಅಕ್ಷರವೂ, ಅದ್ವೈತವೂ ಆದ ಯಾವ ವಸ್ತುವನ್ನು ಜ್ಞಾನಿಗಳು ನಿತ್ಯದಲ್ಲಿಯೂ ಉಪಾಸಿಸುವರೋ, ಅಂಥ ಸದ್ವಸ್ತುವು ನಿನ್ನ ಹೃದಯದಲ್ಲಿಯೇ ಇರುವದು,'' ಎಂದು ಅನ್ನಲು, ನಾಮದೇವನು—''ನನಗೆ ಸಗುಣರೂಪವೇ ಸೇರುವದು. ಆ ರೂಪವನ್ನು ನೋಡಿದ ಕ್ಷಣವೇ ನನ್ನ ಕಣ್ಣುಗಳು ಆನಂದವನ್ನು ಹೊಂದುವವು. ಅದೇ ರೂಪದ ಕೀರ್ತನವನ್ನು ಕೇಳಿ ಕಿವಿಗಳು ಸುಖಪಡುವವು.'' ಎಂದು ಉತ್ತರ ಕೊಟ್ಟನು.

ನಾಮದೇವನ ಈ ತರದ ನಿಶ್ಚಯವನ್ನು ನೋಡಿ ಜ್ಞಾನದೇವರು—ನಿನ್ನ ಶುದ್ಧಭಾವವು ಧನ್ಯವಾದದ್ದು, ಎಂದು ಅಂದರು. ಇದರಂತೆಯೇ ಆ ಇಬ್ಬರು ಭಗವದ್ಭಕ್ತರು ನಿತ್ಯಾನಿತ್ಯವಸ್ತುಗಳ ಅನುಭವವನ್ನು ಒಬ್ಬರಿಗೊಬ್ಬರು ಹೇಳುತ್ತಿದ್ದರು. ಅವರಿಬ್ಬರು ಪ್ರೇಮಸುಖದ ಮಾತುಗಳನ್ನು ಅನುಭವವೆಂಬ ಒರಗಲ್ಲಿಗೆ ಹಚ್ಚುವಾಗ ಸುಖವೃಷ್ಟಿಯು ಅತಿಶಯವಾಗಿ, ಆನಂದವು ಹೊಟ್ಟೆಯೊಳಗೆ ಹಿಡಿಸದಂತಾಗುತ್ತಿತ್ತು. ಜ್ಞಾನದೇವರು ಕೈಜೋಡಿಸಿಕೊಂಡು ನಾಮದೇವನಿಗೆ—ನೀನು ಹೃಷಿಕೇಶನನ್ನು ಸ್ವಾಧೀನಪಡಿಸಿಕೊಂಡಂಥ ಭಕ್ತಿಮಾರ್ಗವನ್ನು ನನಗೆ ವಿಸ್ತಾರವಾಗಿ ಹೇಳು. ಭಜನೆಯನ್ನು ಹ್ಯಾಗೆ ಮಾಡಬೇಕು? ಶ್ರವಣ ಮನನಗಳನ್ನು ಹ್ಯಾಗೆ ಸಾಧಿಸಬೇಕು? ನಿಧಿಧ್ಯಾಸವು ಹ್ಯಾಗಿರುವದು? ಧೃತಿ

ಧಾರಣವೆಂದರೇನು? ವಿಶ್ರಾಂತಿಯೆಂದು ಯಾತಕ್ಕೆ ಅನ್ನಬೇಕು? ಇವುಗಳನ್ನೆಲ್ಲ ನನಗೆ ವಿಸ್ತಾರವಾಗಿ ಹೇಳು. ನಿನಗೆ ಈ ಮಾತುಗಳನ್ನು ಕೇಳಬೇಕೆಂದು ನಾನು ಬಹುದಿವಸಗಳಿಂದ ಎದುರು ನೋಡುತ್ತಿದ್ದೆನು. ಈವೊತ್ತಿನವರೆಗೆ ನಿನಗಾಗಿರುವ ಅನುಭವವನ್ನೂ, ಅದನ್ನು ಸಾಧಿಸುವ ಉಪಾಯುಗಳನ್ನೂ ನನಗೆ ಹೇಳು, ಎಂದು ಬೇಡಿಕೊಂಡನು.

---

## ೧೮ನೆಯ ಪ್ರಕರಣ—ಭಕ್ತನ ಕೀರ್ತನವು.

ಜ್ಞಾನದೇವರ ವಚನಗಳನ್ನುಕೇಳಿ, ನಾಮದೇವನು ಅವರ ಪಾದಗಳನ್ನು ಗಟ್ಟಿಯಾಗಿ ಹಿಡಿದು, ಗದ್ಗದಿತ ಕಂಠದಿಂದ, "ಮಹಾತ್ಮರೇ, ನನಗೆ ವ್ಯುತ್ಪತ್ತಿಯ ಜ್ಞಾನವೇನೂ ಇರುವದಿಲ್ಲಾದ್ದರಿಂದ, ರುಕ್ಮಿಣೀಪತಿಯಾದ ಪಾಂಡುರಂಗನು ನನ್ನ ಕೈಯನ್ನು ನಿಮ್ಮ ಕೈಯಲ್ಲಿ ಕೊಟ್ಟಿರುವನು. ಲೋಭಿಯ ಮನೆಗೆ ಕಲ್ಪತರುವು ಯಾಚನೆ ಮಾಡಲಿಕ್ಕೆ ಬರುವಂತೆ, ಜ್ಞಾನಿಗಳಾದ ನೀವು ಅಜ್ಞಾನಿಯಾದ ನನಗೆ ಅಧ್ಯಾತ್ಮಜ್ಞಾನವನ್ನು ಕೇಳುತ್ತೀರಿ. ಹಿಮಾಲಯವು ತನಗೆ ಸೆಕೆಯಾಗುವದೆಂದು ಎಲೆಗಳಿಂದ ಗಾಳಿಯನ್ನು ಬೀಸಹೇಳುವಂತೆಯೂ, ಸೂರ್ಯನು ತನ್ನ ಮನೆಯಲ್ಲಿ ದೀಪಗಳನ್ನು ಹಚ್ಚ ಹೇಳುವಂತೆಯೂ, ಆಕಾಶವು ತನ್ನ ಸಲುವಾಗಿ ಸ್ಥಳವನ್ನು ಕೊಡುವದಕ್ಕೆ ಕೇಳಿಕೊಳ್ಳುವಂತೆಯೂ ಪೃಥ್ವಿಯು ಅರಸನ ಹತ್ತಿರ ಇನಾಮುಗಳ ಸನದು ಬೇಡುವಂತೆಯೂ, ಕಾಮಧೇನುವು ಬಂಜೆಯಾದ ಆಕಳ ಹತ್ತಿರ ಹಾಲನ್ನು ಯಾಚಿಸುವಂತೆಯೂ ನೀವು ಹುಡುಗತನವನ್ನು(ಅಜ್ಞಾನವನ್ನು) ಮೈಮೇಲೆ ಹಾಕಿಕೊಂಡು, ನನಗೆ ಅಧ್ಯಾತ್ಮಜ್ಞಾನವನ್ನು ಕೇಳುತ್ತೀರಿ" ಎಂದು ಪ್ರಾರ್ಥಿಸಿದನು. ಅದಕ್ಕೆ ಜ್ಞಾನದೇವರು—ನಾಮದೇವಾ, ನಿನ್ನ ಮನಸ್ಸಿನೊಳಗೆ ಯಾವ ಸಂಶಯುವನ್ನೂ ಬರಗೊಡಬೇಡ. ದ್ವೈತಭಾವದ ರೀತಿಯನ್ನು ಬಿಟ್ಟು ಅನುಭವಜ್ಞಾನದ ಮಾತುಗಳನ್ನೇ ಹೇಳು. ನಿನ್ನ ರಸಯುಕ್ತ ವಾಣಿಯು ಸಮುದ್ರಕ್ಕಿಂತಲೂ ಗಹನವಾದದ್ದು. ಯಾಕಂದರೆ, ಅದರೊಳಗೆ ನಿತ್ಯದಲ್ಲಿ ಸ್ವಾನಂದದ ಸುಶೀತಲವಾದ ಜಲವು ಹೊಸ ಹೆಸದಾಗಿ ತುಂಬುತ್ತಿರುವದು. ಆದ್ದರಿಂದ ನಿನ್ನ ಅನುಭವಾನಂದದ ಮಾತುಗಳನ್ನಾಡಿ ನನ್ನ ಕ್ಷುಧಾತುರವಾದ ಕಿವಿಗಳ ಮೇಲೆ ಅಮೃತವೃಷ್ಟಿಯನ್ನು ಶೀಘ್ರವಾಗಿ ಕರೆ. ನೀನು ವಿಶ್ರಾಂತಿಯ ಸ್ಥಾನವಾದ್ದರಿಂದಲೇ ನಿನ್ನ ಸಂಗವನ್ನು ಮಾಡಿಕೊಂಡಿದ್ದೇನೆ.

ನಾಮದೇವಾ, ನೀನು ಪರಮಭಕ್ತನಿರುತ್ತೀ. ನಿನ್ನ ಅಂತರಂಗ—ಭಕ್ತಿಯಿಂದ ಶ್ರೀರಂಗನನ್ನು ನಿನ್ನ ಆಧೀನಮಾಡಿಕೊಂಡಿರುವೆ. ಪ್ರೇಮರಸವಿಲ್ಲದಿದ್ದರೆ, ಗಹನವಾದ ಜ್ಞಾನವೂ ನಿಷ್ಪ್ರಯೋಜಕವಾಗುವದು. ಯಾವದು ನಕ್ಷತ್ರಗಳೊಳಗೆ ದೊಡ್ಡ ಪದವಿಯನ್ನು ಹೊಂದಿರುವದೋ, ಯಾತರ ಸುತ್ತುಮುತ್ತು ದೊಡ್ಡ ದೊಡ್ಡ ನಕ್ಷತ್ರಗಳೂ ತಿರುಗುತ್ತಿರುವವೋ ಅಂಥ ಧ್ರುವನಕ್ಷತ್ರವು ಸಣ್ಣದಾಗಿ ಕಂಡರೂ, ಅದು ಅಕ್ಷಯವಾಗಿ ತನ್ನ ಸ್ಥಾನದಲ್ಲಿ ನಿಶ್ಚಲವಾಗಿರುವದು. ಅದರಂತೆ ನಿನ್ನ ಜ್ಞಾನವು ಅಲ್ಪವೆಂದು ಅನ್ನಲಾಗದು. ಅಗ್ನಿಯು ಅತಿಶಯವಾಗಿ ಪ್ರಜ್ವಲಿತವಾದರೂ, ಅದರಿಂದ ಮನೆಯಲ್ಲಿ ನಿರ್ಮಲಪ್ರಕಾಶವು ಬೀಳಲಾರದು. ದೀಪದ ಯೋಗ್ಯತೆಯು ಅಗ್ನಿಗೆ ಹ್ಯಾಗೆ ಬರುವದು? ಸಿಂಹದದೇಹವು ಕೃಶವಾಗಿ ಕಂಡರೂ, ಅದರ ದರ್ಶನವನ್ನು ದೊಡ್ಡ ಆನೆಗಳು ತಾಳಲಾರವು. ಅದರಂತೆ ನಾಮದೇವಾ, ನಿನ್ನ ಜ್ಞಾನವು ಶ್ರೇಷ್ಠವಾದದ್ದು. ಅನೇಕ ಔಷಧಗಳು ಅಮೃತವನ್ನು ಸರಿಗಟ್ಟುವದಕ್ಕೆ ಅಸಮರ್ಥವಿರುವಂತೆ , ನಿನ್ನ ಜ್ಞಾನದ ಯೋಗ್ಯತೆಯನ್ನು ಶಾಸ್ತ್ರಾಧಿಕಾರಿಗಳೂ ಸರಿಗಟ್ಟಲಾರರು. ಗೊರಟೆಯ ಹೂವು ವಾಸನೆಯಿಲ್ಲದ್ದಾಗಿದ್ದರೂ, ಅದು ಶ್ರೀಮಂತರಿಗೂ ಬಡವರಿಗೂ ಕೂಡಿಯೇ ಭೂಷಣವಾಗಿರುವಂತೆ, ನಿನ್ನ ಜ್ಞಾನವು ವಿಶ್ವೋದ್ಧಾರಕವಾಗಿದೆ. ಇಂಥ ನಿನ್ನ ಜ್ಞಾನವನ್ನು ಕೇಳಬೇಕೆಂದು ನನ್ನ ಚಿತ್ತವು ಆತುರಪಡುತ್ತದೆ. ಆದ್ದರಿಂದ ನಾಮದೇವಾ, ಮೌನವನ್ನು ಬಿಟ್ಟು ಶೀಘ್ರವಾಗಿ ನನ್ನ ಇಚ್ಛೆಯನ್ನು ಪೂರ್ಣ ಮಾಡು, ಎಂದು ಬೇಡಿಕೊಂಡರು.

ಈ ಮಾತುಗಳನ್ನು ಕೇಳಿ ನಾಮದೇವನು—ಸ್ವಾಮೀ, ಜ್ಞಾನದೇವರೇ, ನನ್ನ ನಿಜವಾದ ಅನುಭವವನ್ನು ನಿಮಗೆ ಹೇಳುವೆನು. ಆದರದಿಂದ ಕೇಳಿರಿ. ಮನುಷ್ಯನ ಶರೀರದಲ್ಲಿ ಮೊದಲು ವೈರಾಗ್ಯಬಲವು ಅವಶ್ಯವಾಗಿ ಬೇಕು. ಸರ್ವಭೂತಗಳಲ್ಲಿಯೂ ದೃಢವಾದ ದಯವಿರಬೇಕು; ಅಹಂಕಾರವೂ, ಪ್ರಪಂಚದ ಚಿಂತೆಯೂ ಇರಬಾರದು. ಮನುಷ್ಯನಿಗೆ ಇಂಥ ಸ್ಥಿತಿಯು ಪ್ರಾಪ್ತವಾದಾಗ ಮಾತ್ರ ಅದಕ್ಕೆ ಶುದ್ಧ ಭಜನವೆಂದೆನ್ನಬೇಕು. ಮೇಲೆ ಹೇಳಿದ ಚಿಹ್ನಗಳು ಮನುಷ್ಯನ ದೇಹದಲ್ಲಿ ಕಂಡು ಬಾರದಿದ್ದರೆ, ಅವನು ಸಾಧನವನ್ನು ವ್ಯರ್ಥವಾಗಿ ಯಾಕೆ ಮಾಡಬೇಕು? ಅಂಥ ಸಾಧನದಿಂದ ಅವನಿಗೆ ಯಾವ ಪ್ರಯೋಜನವೂ ಆಗಲಾರದು. ಹೊರಗೆ ಒಬ್ಬನಿಗೆ ನಮಸ್ಕಾರ ಮಾಡಿ, ಅಂತರಂಗದಲ್ಲಿ ಅವನ ಗುಣದೋಷಗಳನ್ನು ಎಣಿಸುವದು, ನೊಣವು ಕೂಡಿದ ಪಕ್ವಾನ್ನವನ್ನು ಬಹು

ಆದರದಿಂದ ಉಂಡಂತೆ ಆಗುವದು. ಯಾವನೊಬ್ಬನಿಗೆ ನಮಸ್ಕರಿಸುವಾಗ ಅವನ ಉತ್ತಮ-ಮಧ್ಯಮ ಗುಣಗಳನ್ನು ಮನಸ್ಸಿನಲ್ಲಿ ಎಣಿಸಬಾರದು. ಹೀಗೆ ನಮಸ್ಕಾರ ಮಾಡುವದಕ್ಕೇ ಅಖಂಡ ನಮಸ್ಕಾರವೆಂದೆನ್ನಬೇಕು. ಯಾವನ ಅಂತರಂಗದಲ್ಲಿ ಸ್ವಾನಂದ-ಜಲವು ತುಂಬಿಕೊಂಡಿರುವದೋ, ಅವನ ಸ್ವಾನಂದಕ್ಕೆ ಭಂಗವು ಎಂದೆಂದಿಗೂ ಬರಲಾರದು. ವಿಶ್ವದೊಳಗೆಲ್ಲ ವಿಶ್ವಂಭರನಾದ ಪರಮಾತ್ಮನು ತುಂಬಿಕೊಂಡಿರುವನೆಂಬ ನಿಶ್ಚಲವಾದ ಬೋಧದಿಂದ ಮನಸ್ಸು ಸ್ಥಿರವಾಗಬೇಕು. ಇದಕ್ಕೇ ಆನಂದಘನವೂ ಅಕ್ಷಯವೂ ಆದ ಪರಮಾತ್ಮನ ಧ್ಯಾನವೆಂದು ಕರೆಯಬೇಕು. ಸ್ವಾಮಿಾ, ಇನ್ನು ತಾವು ಕೇಳಿದ ಶ್ರವಣ ಭಕ್ತಿಯನ್ನು ಹ್ಯಾಗೆ ಆಚರಿಸಬೇಕೆಂಬದನ್ನು ಹೇಳುವೆನು. ಜಿಗರಿಯು ನಾದಲುಬ್ಧವಾಗಿ ತನ್ನ ದೇಹಭಾವವನ್ನು ಮರೆತು ಬಿಡುವಂತೆ, ಮನುಷ್ಯನು ತಲ್ಲೀನ ಮನಸ್ಸಿನಿಂದ ಹರಿಕೀರ್ತನವನ್ನು ಕೇಳಬೇಕು. ಇದಕ್ಕೆ ಅನುಭವಿಗಳಾದ ಜ್ಞಾನಿಗಳು ಶ್ರವಣಭಕ್ತಿಯೆಂದು ಕರೆಯುವರು. ಕೃಪಣನು ವ್ಯವಹಾರದಲ್ಲಿ ಚಿತ್ತವನ್ನಿಟ್ಟು ದ್ರವ್ಯಸಂಚಯವನ್ನು ಮಾಡುವಂತೆ, ಮನುಷ್ಯನು ತನ್ನ ಸ್ವಹಿತವನ್ನೂ ಚಿಂತಿಸಬೇಕು. ಇದಕ್ಕೇಮನನವೆಂದು ನಿಶ್ಚಯವಾಗಿ ಕರೆಯಬೇಕು. ಇನ್ನು ನಿದಿಧ್ಯಾಸವೆಂದರೇನೆಂಬದನ್ನು ವಿವರಿಸುವೆನು. ಜಾರಿಣೀಸ್ತ್ರೀಯು ಪರಪುರುಷನ ಮೇಲೆ ಪ್ರೀತಿಯನ್ನಿಟ್ಟು, ತನ್ನ ಮನೆಯಲ್ಲಿ ಲೌಕಿಕಸ್ಥಿತಿಯನ್ನನುಸರಿಸಿ ವರ್ತಿಸುವಂತೆಯೂ, ಚಾತಕಪಕ್ಷಿಯು ಭೂಮಂಡಲದಲ್ಲಿದ್ದಾಗ್ಯೂ ತನ್ನ ಲಕ್ಷವನ್ನೆಲ್ಲ ಮೇಘಮಂಡಲದಲ್ಲಿಡುವಂತೆಯೂ, ಸರೋವರದಲ್ಲಿರುವ ಕಮಲಗಳು ಸೂರ್ಯನಲ್ಲಿಯೇ ತಮ್ಮ ಮನಸ್ಸನ್ನು ನಡಿಸಿರುವಂತೆಯೂ, ಪರ್ವತದ ಮೇಲೆ ಮೇಯುವ ಆಕಳು ತನ್ನ ಲಕ್ಷ್ಯವನ್ನೆಲ್ಲ ಮನೆಯಲ್ಲಿರುವ ಕರುವಿನಮೇಲೆ ಇಡುವಂತೆಯೂ, ಕೃಪಣನು ಪೇಟೆಯಲ್ಲಿ ತಿರುಗಾಡಿದಾಗ್ಯೂ ತನ್ನ ಚಿತ್ತವನ್ನೆಲ್ಲ ತನ್ನ ಗಂಟಿನಮೇಲೆ ಇಡುವಂತೆಯೂ, ಅಕ್ಕಸಾಲಿಗನು ಕಳವಿನಮೇಲೆ ಲಕ್ಷ್ಯವನ್ನಿಟ್ಟು ಅಲಂಕಾರಗಳನ್ನು ಮಾಡುವಂತೆಯೂ, ಬಹಿರಂಗದಲ್ಲಿ ಸಂಸಾರವನ್ನುಮಾಡಿ ಅಂತರಂಗದಲ್ಲಿ ಶ್ರೀಧರನಾದ ನಾರಾಯಣನಿಗೆ ಮನೆಮಾಡಿಕೊಡಬೇಕು. ಏಕೋಭಾವದಿಂದ ವಿಠ್ಠಲನನ್ನೇ ಮನಸ್ಸಿನಲ್ಲಿ ಸ್ಮರಿಸಬೇಕು. ಅವನ ರೂಪವನ್ನೇ ಎಲ್ಲ ಪ್ರಾಣಿಗಳಲ್ಲಿ ನೋಡಬೇಕು. ರಜಸ್ತಮೋಗುಣಗಳನ್ನು ಖಂಡಿತವಾಗಿ ತ್ಯಾಗಮಾಡಿ, ಮನಸ್ಸನ್ನು ಪ್ರೇಮದಿಂದ ತುಂಬಬೇಕು. ಅಸಂಗನಾಗಿಯೂ, ಏಕಾಕಿಯಾಗಿಯೂ, ಸತ್ಯಶೀಲನಾಗಿಯೂ, ಸಪ್ರೇಮಭಕ್ತಿಯಿಂದ ದೃಢನಿಶ್ಚಯ

ವುಳ್ಳವನಾಗಿಯೂ, ಏಕನಿಷ್ಠೆಯುಳ್ಳವನಾಗಿಯೂ, ಧೀರನಾಗಿಯೂ ಇರುವ ಜ್ಞಾನಿಯೇ ಶ್ರೇಷ್ಠನೆಂದು ತಿಳಿಯಬೇಕು. ಏಕಾಂತದಲ್ಲಿ ಕುಳಿತು ನಿತ್ಯನೇಮ ದಿಂದ ಹರಿಕೀರ್ತನವನ್ನು ಮಾಡಬೇಕು. ಇದರ ಹೊರತು ಮಾಡುವ ಬೇರೆ ಸಾಧನಗಳೆಲ್ಲ ಬಂಧನವೆಂದು ತಿಳಿಯತಕ್ಕದ್ದು. ತ್ರಿಕರ್ಣಪೂರ್ವಕವಾಗಿ ನನ್ನ ಅನುಭವವನ್ನು ತಮಗೆ ಹೇಳಿರುವೆನು. ಇದನ್ನಾದರೂ ರುಕ್ಮಿಣೀಪತಿಯಾದ ವಿಠ್ಠಲನು ನುಡಿಸಿರುವನು'' ಎಂದು ನುಡಿದನು.

ಹೀಗೆ ನಿತ್ಯದಲ್ಲಿಯೂ ಅವರಿಬ್ಬರು ಸ್ವಾನಂದಭರಿತವಾದ ಸಂವಾದವನ್ನು ಮಾರ್ಗದಲ್ಲಿ ಮಾಡುತ್ತಿದ್ದರು. ಮತ್ತು ತೀರ್ಥ-ಯಾತ್ರೆಗಳನ್ನು ಮಾಡುತ್ತ ಆಕಸ್ಮಿಕವಾಗಿ ಹಸ್ತಿನಾಪುರಕ್ಕೆ ಬಂದರು. ನಾಮದೇವನು ಪ್ರೇಮದಿಂದ ಶ್ರೀಹರಿಯ ಗುಣಗಳನ್ನು ಹಾಡುತ್ತ ನಗರದ ಸಮೀಪಕ್ಕೆ ಬರಲು, ಎಲ್ಲ ಜನರೂ ಆಶ್ಚರ್ಯದಿಂದ ಬಂದು, ಅದ್ಭುತವಾದ ಪ್ರೇಮಯುಕ್ತ ಕೀರ್ತನವನ್ನು ಕಿವಿಗ ಳಿಂದ ಕೇಳಿ, ನಾಮದೇವನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿದರು. ಮತ್ತು ತಾಳ, ತಂಬೂರಿ, ಮೃದಂಗಗಳನ್ನೆಲ್ಲ ತೆಗೆದುಕೊಂಡು, ಅವನೊಡನೆ ನಾಮಸಂಕೀರ್ತನ ಮಾಡುತ್ತ ಕುಣಿಯ ಹತ್ತಿದರು. ನಾಮದೇವನ ಕೀರ್ತನ ವನ್ನು ಕೇಳಿ, ಆಗ ಅಗಣಿತ ಜನರು ಕೂಡಿ ಭಜನೆಯ ಗುಂಪುಗಳನ್ನು ಮಾಡಿ, ಪತಾಕೆಗಳನ್ನು ತೆಗೆದುಕೊಂಡು ಸಮಾರಂಭವನ್ನಾರಂಭಿಸಿದರು. ಭೇರಿ, ಮೃದಂ ಗವಾದ್ಯಗಳು ದೊಡ್ಡ ದನಿಯಿಂದ ಬಾರಿಸಲ್ಪಟ್ಟವು. ಹಸ್ತಿನಾಪುರವೆಲ್ಲ ಜಯ ಜಯಕಾರಗಳಿಂದಲೂ, ನಾಮಘೋಷದಿಂದಲೂ ಆನಂದಪೂರ್ಣವಾಯಿತು.

ಇಷ್ಟರೊಳಗೆ ಆ ನಗರದ ಮುಸಲ್ಮಾನ ಅರಸನಿಗೆ ''ಪಂಢರಪುರದಿಂದ ನಾಮದೇವನೆಂಬ ಭಕ್ತನು ತೀರ್ಥಯಾತ್ರೆ ಮಾಡುತ್ತ ಇಲ್ಲಿಗೆ ಬಂದು, ಊರೊ ಳಗೆ ಕೀರ್ತನಗಳನ್ನು ಮಾಡಿ ನರನಾರಿಯರ ಚಿತ್ತವನ್ನು ಆಕರ್ಷಿಸಿರುವನು.'' ಎಂಬ ಸುದ್ದಿಯು ಗೊತ್ತಾಯಿತು. ಈ ವರ್ತಮಾನದಿಂದ ಅವನ ಮನಸ್ಸಿನಲ್ಲಿ ಕ್ರೋಧವು ಉತ್ಪನ್ನವಾಯಿತು. ಚಂದ್ರನ ಉದಯವಾಗಲು, ಕಳ್ಳರು ಮನಸ್ಸಿ ನಲ್ಲಿ ವ್ಯರ್ಥವಾಗಿ ಬಡಬಡಿಸುವಂತೆಯೂ, ಸೂರ್ಯನನ್ನು ನೋಡಿ ದೈತ್ಯರು ಸಂತಾಪವನ್ನು ಹೊಂದುವಂತೆಯೂ' ವೇದಾಂತಜ್ಞಾನವನ್ನು ಕೇಳಿ, ಭೇದವಾದಿ ಗಳು ಸುಮ್ಮನೆ ವಟವಟಿಸುವಂತೆಯೂ ಆ ರಾಜನು ನಾಮದೇವನ ವಿಷಯವಾಗಿ ಮನಸ್ಸಿನಲ್ಲಿ ಬಹಳ ದ್ವೇಷವನ್ನು ತಾಳಿದನು. ಆಗ ಅವನು—ನಾಮದೇವನ ಹರಿ ಕಥೆಯನ್ನು ನಾನು ಶೀಘ್ರವಾಗಿ ಕೇಳುವೆನು. ಅವನ ಹರಿಕೀರ್ತನವು ನಿಶ್ಚಯವಾಗಿ

ಪ್ರತೀತಿಗೆ ಬಾರದ ಪಕ್ಷದಲ್ಲಿ ಅದಕ್ಕೆ ಪಾಖಂಡಮತವೆಂದೆನ್ನಬೇಕು'' ಎಂದು ನುಡಿದು, ಆ ದುರಾಚಾರಿಯು ಕೀರ್ತನವು ನಡೆದಲ್ಲಿಗೆ ತ್ವರೆಯಿಂದ ಬಂದನು. ಬ್ರಹ್ಮಸಭೆಯೊಳಗೆ ಚಾಂಡಾಲನು ಬಂದು ಸೇರುವಂತೆಯೂ, ಬ್ರಾಹ್ಮಣರ ಪಾಕ ಶಾಲೆಯಲ್ಲಿ ಅನ್ನವನ್ನು ತಿನ್ನುವದಕ್ಕಾಗಿ ನಾಯಿಯು ಬರುವಂತೆಯೂ, ತಾರು ಣ್ಯದಲ್ಲಿ ಪಾರುಣವಾದ ಮಹಾರೋಗವು ಗಂಟುಬೀಳುವಂತೆಯೂ ಆ ದುರ್ಬು ದ್ಧಿಯುಳ್ಳ ಮುಸಲ್ಮಾನ ರಾಜನು ಅಕಸ್ಮಾತ್ತಾಗಿ ಕೀರ್ತನದ ಸ್ಥಳದಲ್ಲಿ ಬಂದು ಕುಳಿತನು. ಆಗ ನಾಮದೇವನು ಶ್ರೀಹರಿಯ ಗುಣಗಳನ್ನು ವರ್ಣಿಸುತ್ತ ಪ್ರೇಮಭರಿತನಾಗಲು, ತಾಳ, ಮೃದಂಗ, ತಂಬೂರಿಗಳ ಸುನಾದದಿಂದ ಆಕಾಶ ಮಂಡಲದಲ್ಲಿ ದುಮು ದುಮು ಶಬ್ದವು ತುಂಬಿತು. ಅದರೊಳಗಂತೂ ತಾಳ ಗಳ ಗರ್ಜನೆಯಿಂದ ಅಪಾರವಾದ ಶೋಭೆಯುಂಟಾಯಿತು.

ಕೀರ್ತನದ ಸಮಯದಲ್ಲಿ ಆ ಮುಸಲ್ಮಾನ ಅರಸನು ಒಂದು ಆಕಳನ್ನು ಕೊಂದು ನಾಮದೇವನಿಗೆ—''ನಾಮದೇವಾ, ಯಾಕೆ ಸುಮ್ಮನೆ ವಿರಸವಾಗಿ ಹಾಡುತ್ತೀ! ಈ ಆಕಳನ್ನು ನೀನು ಸಜೀವಗೊಳಿಸಿ ಎಬ್ಬಿಸಿದರೆ ನಿನ್ನ ಹರಿಗಾಯ ನವನ್ನು ಸತ್ಯವೆಂದು ತಿಳಿಯುವೆನು. ಇಲ್ಲದಿದ್ದರೆ ನಿನ್ನನ್ನು ನಾನು ನನ್ನ ಕೈಗ ಳಿಂದಲೇ ಕೊಲ್ಲುವೆನು.'' ಎಂದು ಹೇಳಿದನು. ಆ ದುರಾಚಾರಿಯಾದ ರಾಜ ನಾಡುವ ಮಾತುಗಳನ್ನು ಕೇಳಿ, ನರನಾರಿಯರು ಚಿಂತಾಕ್ರಾಂತರಾಗಿ ಕುಳಿತರು. ಎಲ್ಲರ ಮನಸ್ಸೂ ಚಂಚಲವಾದವು. ಪ್ರೇಮಭರವು ಕುಗ್ಗಿಹೋಯಿತು. ಪಾತ್ರೆ ಯಲ್ಲಿ ಪಕ್ವಾನ್ನವನ್ನು ಬಡಿಸಿದಾಗ ಅದರೊಳಗೆ ಅಕಸ್ಮಾತ್ತಾಗಿ ವಿಷಬೀಳುವಂ ತೆಯೂ, ಪುಸ್ತಕವನ್ನು ಓದುವ ಸಮಯದಲ್ಲಿ ಪತಂಗದ ಹುಳವು ದೀಪವನ್ನು ನಂದಿಸುವಂತೆಯೂ, ದರಿದ್ರನಿಗೆ ಗಂಟು ಸಿಕ್ಕಾಗ ಅದರೊಳಗೆ ಪಿಶಾಚಿಯು ಹುಟ್ಟುವಂತೆಯೂ, ಭರದಿಂದ ಬೆಳೆದ ಬೆಳೆಗೆ ಅಕಸ್ಮಾತ್ತಾಗಿ ಜಿಟ್ಟೆಗಳು ಹತ್ತು ವಂತೆಯೂ, ಮನೆಯಲ್ಲಿ ಮಂಗಲಕೃತ್ಯವು ನಡೆದಾಗ ಸೂತಕವು ಪ್ರಾಪ್ತವಾದಂ ತೆಯೂ, ಅಗಸ್ತಿಯು ಸಮುದ್ರವನ್ನು ಕುಡಿದಾಗ ಎಲ್ಲ ಜಲಚರಗಳು ದುಃಖಪ ಟ್ಟಂತೆಯೂ ಆ ಕೀರ್ತನವನ್ನು ಕೇಳುವ ಜನರ ಮನಸ್ಸಿನಲ್ಲಿ ದುಃಖವುಂಟಾ ಯಿತು. ಅವರು ಸುಮ್ಮನೆ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತಿದ್ದರು. ಆ ಯವನರಾಜನ ಮುಂದೆ ಒಬ್ಬನ ಆಟವೂ ನಡೆಯಲಿಲ್ಲ. ಆಗ ಆ ಅರಸನು ನಾಮ ದೇವನಿಗೆ—''ನೀನು ಎಂದು ಈ ಆಕಳನ್ನು ಎಬ್ಬಿಸಿ, ಪ್ರಮಾಣಪೂರ್ವಕವಾಗಿ ನನಗೆ ನಂಬಿಗೆಮಾಡಿಕೊಡುವೆಯೋ, ಅಂದು ನೀನು ನಿನ್ನ ಹರಿಯ ಗುಣಾನು

ವಾದವನ್ನು ಮಾಡು, ಎಂದು ಹೇಳಲು, ಆ ವೈಷ್ಣವ ವೀರನು ಅವನಿಗೆ—ಈ ಸತ್ತ ಆಕಳು ಏಳಲಿಕ್ಕೆ ಈವೊತ್ತಿನಿಂದ ನಾಲ್ಕು ದಿನಗಳು ಹತ್ತುವವು, ಎಂದು ಉತ್ತರವನ್ನು ಕೊಟ್ಟನು. ಇದನ್ನು ಕೇಳಿ ಅರಸನು ತನ್ನ ಮಂದಿರಕ್ಕೆ ಹೋದನು.

ಇತ್ತ ನಾಮದೇವನು ಶ್ರೀಹರಿಯನ್ನು ಮನಸ್ಸಿನಲ್ಲಿ ಸ್ಮರಿಸಿ ಅಟ್ಟಹಾಸದಿಂದ ಹರಿಯನ್ನು ಕರೆಯಹತ್ತಿದನು.—"ದೀನದಯಾಲುವೇ, ಪತಿತಪಾವನನೇ, ಭಕ್ತವತ್ಸಲನೇ, ಗೋವಿಂದಾ, ನಿನಗೆ ಜಯವಿರಲಿ. ನೀನು ಭಕ್ತಭೂಷಣನೂ, ಅಂತಸ್ಸಾಕ್ಷಿಯೂ, ಗುಣನಿಧಿಯೂ ಇರುವೆ. ಕ್ಷೀರಸಮುದ್ರವಾಸಿಯಾದ ವಿಷ್ಣುವೇ, ಸಗುಣಸ್ವರೂಪಿಯಾದ ಹೃಷೀಕೇಶನೇ, ಪುಂಡರೀಕವರದನೇ, ಅವಿನಾಶಿಯಾದ ಜಗದ್ಗುರುವೇ, ನಿನಗೆ ಜಯವಿರಲಿ. ಹೇ ರಾಘವಶ್ರೇಷ್ಠನಾದ ರಾಮನೇ, ನಂದಕಂದನೇ, ಕಂಸಚ್ಛೇದಕನೇ ನಿನಗೆ ಜಯವಿರಲಿ. ನೀನು ಕೌರವರ ಅಭಿಮಾನವನ್ನು ನಿರ್ಮೂಲಮಾಡಲಿಲ್ಲವೇ? ಪಾಂಡವರನ್ನು ಸಂರಕ್ಷಿಸಲಿಲ್ಲವೇ? ಹೇ ಆನಂದಘನನೇ, ನೀನು ದ್ರೌಪದಿಯ ಲಜ್ಜೆಯನ್ನು ನಿವಾರಣಮಾಡಲಿಲ್ಲವೇ? ಹೇ ಪಾಂಡುರಂಗಾ, ರುಕ್ಮಿಣೀರಮಣಾ, ನಿನಗೆ ಜಯವಿರಲಿ." ಹೀಗೆ ನಾಮನು ಪ್ರೇಮಭರಿತನಾಗಿ ಕೀರ್ತನದಲ್ಲಿ ಶೋಕವನ್ನು ಮಾಡುತ್ತಿರುವಾಗ, ಅವನ ಕಂಠವು ಗದ್ಗದಿತವಾಗಿ ನೇತ್ರಕಮಲಗಳಿಂದ ಅಶ್ರುಗಳು ಉದುರುತ್ತಿದ್ದವು. ಆಗ ಹರಿಕೀರ್ತನವನ್ನು ಕೇಳಲಿಕ್ಕೆ ಬಂದ ಜನರೆಲ್ಲರೂ ಶೋಕಮಾಡಹತ್ತಿದರು. ಎಲ್ಲರೂ ಒಂದು ದಿವಸದವರೆಗೆ ಕೂತಲ್ಲಿಯೇ ಕೂತಿದ್ದರು. ಪುನಃ ಸೂರ್ಯನು ಉದಯನಾದಕೂಡಲೆ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.

ಇತ್ತ ನಾಮದೇವನು ಆ ಆಕಳ ಮಸ್ತಕವನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು, ಅಳುತ್ತ—ಹೇ ಪಂಢರೀನಾಥನೇ, ಶ್ರೀಹರಿಯೇ, ನೀನು ಬೇಗನೆ ಪ್ರಾಪ್ತನಾಗು. ನೀನು ರುಕ್ಮಿಣಿಯ ಹತ್ತರ ನಿದ್ದೆ ಹೋದದ್ದರಿಂದ ತಡವಾಗಿರುವದೋ? ಎರಡನೆಯ ಯಾವ ಭಕ್ತರ ಕೀರ್ತನದಲ್ಲಿಯಾದರೂ ಮಗ್ನನಾಗಿ ಕೇಳುತ್ತ ಕೂತುಕೊಂಡಿರುವಿಯೋ? ನೀನು ಯೋಗಿಗಳ ಧ್ಯಾನದಲ್ಲಿ ಸಿಕ್ಕಿರುವಿಯೋ? ನಿನ್ನನ್ನು ಯಾರಾದರೂ ಸಂಕಟಕ್ಕೆ ಗುರಿಮಾಡಿರುವರೋ? ಸಗುಣೋಪಾಸಕನ ಪೂಜೆಯನ್ನು ತೆಗೆದುಕೊಳ್ಳುತ್ತ ಕುಳಿತಿರುವಿಯೋ? ಇಂದ್ರನು ನಿನ್ನನ್ನು ಅಮೃತಪಾನಮಾಡುವದಕ್ಕೆ ಕರೆದುಕೊಂಡು ಹೋಗಿರು

ವನೋ? ಪಂಢರಿಯ ಯಾತ್ರೆಯಲ್ಲಿ ನಿಜಭಕ್ತರು ನಿನ್ನ ದರ್ಶನಕ್ಕೆ ಬಂದಿರುವರೆಂದು ತಡವಾಗಿರುವದೋ? ಶ್ರೀಮಂತರು ನಾನಾಲಂಕಾರ-ವಸ್ತ್ರಗಳಿಂದ ನಿನ್ನನ್ನು ಪೂಜಿಸಿದ್ದರಿಂದ ಆ ಪೂಜೆಯೊಳಗೆ ತಲ್ಲೀನನಾಗಿ ನನ್ನನ್ನು ಮರೆತಿರುವೆಯಾ? ಆದದ್ದಾದರೂ ಏನು? ಎಂದು ಹಗಲು ರಾತ್ರಿ ಒಂದೇಸವನೇ ಶ್ರೀಹರಿಯನ್ನು ಕರೆಯುತ್ತ ಅಳುತ್ತ ಕುಳಿತನು. ಅವನ ಕಣ್ಣೀರುಗಳಿಂದ ಭೂಮಿಯಲ್ಲ ತೊಯ್ದು ಹೋಯಿತು. ಪುನಃ ನಾಮದೇವನು—ದೇವನೇ, ನೀನು ತ್ವರೆಯಿಂದ ಬಾ. ಈ ನಾಮದೇವನಿಗೆ ಮಹಾಮೃತ್ಯುವು ಮುಸುಕ ಹಾಕ ಹತ್ತಿರುವದು. ಮೀನಗಳಿಗೆ ನೀರು ಇಲ್ಲದಿದ್ದರೆ ವ್ಯಾಕುಲವಾಗುವಂತೆ, ನೀನು ಇಲ್ಲದ್ದರಿಂದ ನನಗೆ ಬಹು ದುಃಖವಾಗಹತ್ತಿದೆ.'' ಎಂದು ಕರುಣಾಯುಕ್ತ ಶಬ್ದಗಳಿಂದ ದೇವರನ್ನು ಕರೆದನು.

ಈ ವೈಷ್ಣವೋತ್ತಮನಾದ ನಾಮನ ಮಾತುಗಳನ್ನು ಕೇಳಿ ಚಕ್ರಪಾಣಿಯಾದ ವಿಠ್ಠಲನು ತತ್ಕಾಲದಲ್ಲಿ ಬಂದು, ನಾಮದೇವನ ಹೃದಯಭೂಮಿಯಲ್ಲಿ ಪ್ರಕಟನಾದನು. ಮತ್ತು ಕೂಡಲೆ ಸತ್ತ ಆ ಆಕಳನ್ನು ಎಬ್ಬಿಸಿ, ಶೋಕಗ್ರಸ್ತನಾದ ನಾಮದೇವನನ್ನು ಸಾವಧಾನಗೊಳಿಸಿದನು. ಆಗ ನಾಮದೇವನು ಶ್ರೀ ಪಾಂಡುರಂಗನ ಪಾದಕಮಲಗಳನ್ನು ಗಟ್ಟಿಯಾಗಿ ಹಿಡಿದು—ಹೇ ಅಧೋಕ್ಷಜನೇ, ನೀನು ಯಾವ ಕಾರ್ಯದಲ್ಲಿ ತೊಡಗಿದ್ದೀ? ನಾಲ್ಕು ದಿನಗಳವರೆಗೆ ನನ್ನ ಪರೀಕ್ಷೆಯನ್ನು ಮಾಡಿದೆಯಾ? ಎಂದು ಕೇಳಿದನು. ಅದಕ್ಕೆ ಶ್ರೀರಮಣನು—ನಾಮಾ, ಇದೇ ಕ್ಷಣದಲ್ಲಿ ಈ ಆಕಳನ್ನು ಎಬ್ಬಿಸುವೆನೆಂದು ನೀನು ಆ ಅರಸನ ಮುಂದೆ ಮಾತಾಡಿದ್ದರೆ, ಕೂಡಲೆ ನಾನು ನಿನ್ನ ಸಹಾಯಕ್ಕೆ ಓಡಿ ಬರುತ್ತಿದ್ದೆನು. ನಿನ್ನ ಸಂಕಲ್ಪವೇ ನಿನಗೆ ತಕ್ಕ ಫಲವನ್ನು ಕೊಟ್ಟಿತು. ನನ್ನ ಮೇಲೆ ವ್ಯರ್ಥವಾಗಿ ಯಾಕೆ ತಪ್ಪು ಹೊರಿಸುತ್ತೀ? ಅಧೋಕ್ಷಜನಾದ ನಾನು ನಿಮ್ಮಂಥ ಭಕ್ತರ ಆಧೀನನಾಗಿ ನಿಜವಾದ ಪ್ರೀತಿಯಿಂದ ನಡೆಯುವೆನು. ಭಕ್ತರ ಮುಖದ ವಚನಗಳು ನನಗೆ ಯಥಾರ್ಥವಾಗಿಯೇ ಕಾಣುವವು. ವಾಲ್ಮೀಕಿಯ ಭವಿಷ್ಯವನ್ನನುಸರಿಸಿ ನಾನು ರಾಮಾವತಾರದಲ್ಲಿ ನಡಕೊಂಡಂತೆ, ಈಗಾದರೂ ನಿನ್ನ ಸಂಗಡ ನಡಕೊಂಡಿರುವೆನು. ಕನ್ನಡಿಯೊಳಗೆ ನೋಡುವವರಿಗೆ ಅವರ ಮುಖವು ಇದ್ದ ಹಾಗೆಯೇ ಕಾಣುವಂತೆ, ಜನರು ನನ್ನನ್ನು ಯಾವ ಪ್ರಕಾರ ಭಾವಿಸುವರೋ ಅದರಂತೆ ಜಗದುದ್ಧಾರಕನಾದ ನಾನು ಅವರನ್ನು ಭಜಿಸುವೆನು. ಕಾಶ್ಮೀರಲಿಂಗದ ಮೇಲೆ ಇಟ್ಟ ವಸ್ತುವು ಅದೇ ಬಣ್ಣದ್ದಾಗುವಂತೆ, ಭಕ್ತಾಧೀನ

ನಾದ ನಾನು ಅವರವರ ಇಚ್ಛೆಯಿದ್ದಂತೆ ತೋರುವೆನು. ಎಂದು ನುಡಿದು ಶ್ರೀರಂಗನಾದ ಚಕ್ರಪಾಣಿಯು ಕೂಡಲೆ ಅದೃಶ್ಯನಾದನು.

ಇತ್ತ ನಾಮದೇವನು ಕಣ್ದೆರೆದು ನೋಡುವಷ್ಟರೊಳಗೆ ಆಕಳು ಸಜೀವ ವಾಗಿ ಎದ್ದು ನಿಂತಿತ್ತು. ಈ ಕೌತುಕವನ್ನು ನೋಡಿ ಜನರು ಆದ ಸಂಗತಿಯನ್ನು ರಾಜನಿಗೆ ತಿಳಿಸಿದರು. ರಾಜನೂ ಆ ಚಮತ್ಕಾರದ ಸುದ್ದಿಯನ್ನು ಕೇಳಿ ಕೌತುಕ ದಿಂದ ನೋಡಲಿಕ್ಕೆ ಬಂದನು. ಶಿರಚ್ಛೇದ ಮಾಡಿದ ಆಕಳನ್ನು ಎಬ್ಬಿಸಿದ್ದನ್ನು ನೋಡಿ ಆ ರಾಜನು ತತ್‌ಕ್ಷಣಕ್ಕೆ ನಾಮದೇವನಿಗೆ ನಮಸ್ಕಾರ ಮಾಡಿದನು. ಎಲ್ಲ ಜನರೂ ಆನಂದಪೂರ್ಣರಾಗಿ—ಮಹಾವೈಷ್ಣವನಾದ ನಾಮನು ಧನ್ಯನು! ಬ್ರಹ್ಮಾದಿದೇವತೆಗಳಿಗೂ ಇಂಥ ಭಕ್ತರ ಸಪ್ರೇಮ ಭಕ್ತಿಯನ್ನು ವರ್ಣಿಸುವದಾ ಗದು. ಎಂದು ನುಡಿದರು. ಕೂಡಿದ ಭಕ್ತಮಂಡಲವು ಆನಂದದಿಂದ ಚಪ್ಪಳೆ ಗಳನ್ನು ಬಾರಿಸಿ, ಜಯ ಜಯಕಾರವನ್ನು ಮಾಡಿದರು. ಕೂಡಲೆ ನಾಮದೇ ವನು ಎದ್ದು, ಭಕ್ತಿಯಿಂದ ವನಮಾಲಿಯಾದ ವಿಷ್ಣುವಿಗೆ ಆರತಿಯನ್ನು ಮಾಡಿ ದನು. ಆರತಿಯಾದ ಕೂಡಲೆ ಎಲ್ಲರೂ 'ಈ ವೈಷ್ಣವ ವೀರನು ಧನ್ಯನು! ಶಾರ್ಙ್ಗಧರನನ್ನು ತನ್ನ ಪ್ರೇಮಯುಕ್ತ ಭಕ್ತಿಯಿಂದ ವಶಮಾಡಿಕೊಂಡಿರು ವನು,' ಎಂದು ಪುನಃ ಜಯ ಜಯಕಾರಗಳನ್ನು ಮಾಡಿದರು.

ಬಳಿಕ ಜ್ಞಾನದೇವರು ಅಲ್ಲಿ ಕೂಡಿದ ಸಂತರನ್ನು ಕುರಿತು—ಸಂತರೇ, ಮಹಾ ವೈಷ್ಣವನಾದ ನಾಮದೇವನ ಸಂಗತಿಯು ನಿಮಗೆ ನಾಲ್ಕು ದಿನಗಳವರೆಗೆ ಲಭಿಸಿದ್ದರಿಂದ ನೀವು ಧನ್ಯರಾದಿರಿ! ಯಾವಾಗಲೂ ಇಂಥ ಭಾಗವತರ ಸಹವಾಸ ವನ್ನು ಸಂಪಾದಿಸಿಕೊಳ್ಳುವದರಿಂದ ನೀವು ಸಂಸಾರಸಮುದ್ರವನ್ನು ನಿಜವಾಗಿ ದಾಟುವಿರಿ. ಈಗ ನಾನು ನಿಮ್ಮ ಸಲುವಾಗಿ ವ್ಯಾಸರು ಭಾಗವತದಲ್ಲಿ ವರ್ಣಿಸಿ ರುವ ವೈಷ್ಣವನ ಲಕ್ಷಣಗಳನ್ನು ಸ್ವಲ್ಪದರಲ್ಲಿಯೇ ಹೇಳುವೆನು. ಉತ್ತಮನಾದ ಭಗವದ್ಭಕ್ತನು ಇಂದ್ರಿಯಗಳಿಂದ ವಿಷಯಗಳನ್ನು ಸೇವಿಸುವಂತೆ ಕಾಣಿಸುವನು. ಆದರೆ ಅವನು ತನಗೆ ಅಪ್ರಿಯವಾದ ವಸ್ತುಗಳನ್ನು ಕಂಡು ದ್ವೇಷಮಾಡುವದಿಲ್ಲ. ಮನಸ್ಸಿಗೆ ಪ್ರಿಯವಾದ ವಸ್ತುಗಳನ್ನು ಕಂಡು ಹರ್ಷಪಡುವದಿಲ್ಲ. ಈ ಜಗವೆಲ್ಲ ವಿಷ್ಣುವಿನ ಮಾಯೆಯೆಂದು ಅವನ ದೃಢ ನಂಬಿಗೆಯಾಗಿರುವದು. ಆದ್ದರಿಂದ ಸಂಸಾರ ಧರ್ಮಗಳಿಂದ ಅವನು ಮೋಹಿತನಾಗುವದಿಲ್ಲ. ಅವನು ಜಗತ್ತನ್ನೆಲ್ಲ ನಾರಾಯಣ ರೂಪವಾಗಿ ನೋಡಿ, ಕಂಡ ವಸ್ತುಗಳನ್ನು ನಮಸ್ಕರಿಸಿ, ಪ್ರಾ- ಕೃತ ಜನರಿಗೆ ಹುಚ್ಚನಂತೆ ಕಾಣುವನು. ಮುಖ್ಯವಾಗಿ ಲೀನತೆಯೇ ಅವನ

ಧರ್ಮವಿರುವದು.'' ಎಂದು ಉಪದೇಶಿಸಿದರು. ಸಂತರು ಜ್ಞಾನದೇವರ ವಚನಾಮೃತವನ್ನು ಕುಡಿದು, ಪುನಃ ಜಯಘೋಷವನ್ನು ಮಾಡಿ ಆನಂದದಿಂದ ಅವರನ್ನು ನಮಸ್ಕರಿಸಿದರು.

---

## ೧೮ನೆಯ ಪ್ರಕರಣ—**ಸತ್ಸಂಗದ ಮಹಿಮೆ.**



ಅನಂತರ ಜ್ಞಾನದೇವ-ನಾಮದೇವರು ಯವನ ರಾಜನ ಪಟ್ಟಣದಿಂದ ಹೊರಟರು. ಮಾರ್ಗಕ್ರಮಣಮಾಡುವಾಗ ಅವರು ಹರಿನಾಮಸ್ಮರಣವನ್ನು ಹಗಲು-ರಾತ್ರಿ ಮಾಡುತ್ತಲೇ ಇದ್ದರು. ಯಾವ ಯಾವ ದೇಶಗಳಲ್ಲಿಯ ತೀರ್ಥಗಳಿಗೆ ಆ ಮಹಾನುಭಾವರು ಹೋಗುವರೋ, ಆ ಆ ತೀರ್ಥಗಳ ಮೇಲೆ ಆ ಆ ದೇಶಗಳ ಭಾಷೆಗಳಲ್ಲಿ ಸುಂದರವಾದ ಕವಿತೆಗಳನ್ನು ರಚಿಸುವರು. ಮತ್ತು ತಮ್ಮ ಅಮೋಘವಾದ ವಾಣಿಯಿಂದ ಹರಿಯ ಅನಂತ ಗುಣಗಳನ್ನು ವರ್ಣಿಸುವರು. ಹೀಗೆ ಜ್ಞಾನದೇವರು ನಾನಾದೇಶಗಳಲ್ಲಿಯ ಅನೇಕ ತೀರ್ಥಗಳನ್ನು ನಾಮದೇವನಿಗೆ ತೋರಿಸುತ್ತ ತ್ವರಿತವಾಗಿ ಆ ಭಕ್ತನನ್ನು ಆನಂದವನಕ್ಕೆ (ಕಾಶಿಗೆ) ಕರಕೊಂಡು ಬಂದರು. ಅಲ್ಲಿ ಆ ಇಬ್ಬರು ಭಗವದ್ಭಕ್ತರು ಭಾಗೀರಥಿಯ ಸ್ನಾನಮಾಡಿ, ವಿಶ್ವೇಶ್ವರನ ದರ್ಶನ ತೆಗೆದುಕೊಂಡು ಕೃತಾರ್ಥರಾದರು. ಕಾಶೀವಾಸವು ಅವರ ಮನಸಿಗೆ ಬಹಳ ಆನಂದವನ್ನುಂಟು ಮಾಡಿದ್ದರಿಂದ ಆ ಸಂತರು ಅಲ್ಲಿಯೇ ನಾಲ್ಕು ತಿಂಗಳು ವಾಸ ಮಾಡಿದರು. ಆಗ ಆ ಕ್ಷೇತ್ರದಲ್ಲಿ ಒಂದು ಅದ್ಭುತವಾದ ಸಂಗತಿಯು ವರ್ತಿಸಿತು.

ಒಂದಾನೊಂದು ದಿನ ಮಹಾವಿರಕ್ತನಾದ ಕಬೀರನ ಮನೆಗೆ ಸಾಧುಸಂತರು ಪ್ರಾಪ್ತರಾದರು. ಆಗ ಮಧ್ಯರಾತ್ರಿಯಾಗಿತ್ತು. ನರನಾರಿಯರೆಲ್ಲರಿಗೆ ಗಾಢನಿದ್ರೆಯು ಹತ್ತಿತ್ತು. ಇಂಥ ಸಮಯದಲ್ಲಿಯೇ ಅಕಸ್ಮಾತ್ತಾಗಿ ವೈಷ್ಣವವೀರರು ಕಬೀರನ ದೃಷ್ಟಿಗೆ ಬಿದ್ದರು. ಆಗ ಕಬೀರನೂ ಅವನ ಹೆಂಡತಿಯೂ ಎದ್ದು ಆ ಸಂತರಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿದರು. ಕಬೀರನ ಮನೆಯು ಮುರುಕವಿದ್ದು, ಬಹುಜೀರ್ಣವಾಗಿತ್ತು. ಮನೆಯಲ್ಲಿ ಎಳ್ಳಷ್ಟಾದರೂ ಅನ್ನವಿಲ್ಲದ್ದರಿಂದ ಕಬೀರನ ಹುಡುಗರು-ಹುಪ್ಪಡಿಗಳು ಉಪವಾಸವಾಗಿ ಮಲಗಿಕೊಂಡಿದ್ದವು. ಕಬೀರನು ಆ ಹುಡುಗರು ಮಲಗಿದ ತಟ್ಟನ್ನೇ ಎಳಕೊಂಡು,

ಆ ಸಾಧುಜನರಿಗೆ ಕೂತುಕೊಳ್ಳುವದಕ್ಕೆ ಹಾಸಿದನು. ಬಳಿಕ ಆತನು ಏಕಾಂತ ದಲ್ಲಿ ತನ್ನ ಹೆಂಡತಿಯನ್ನು ಕರೆದು—ಈ ನಮ್ಮ ಬಂಧುಗಳಾದ ಸಜ್ಜನರಿಗೆ ಏನಾದರೂ ನೈವೇದ್ಯವನ್ನು ಮಾಡತಕ್ಕದ್ದು ನೀತಿಯು, ಎಂದು ನುಡಿದನು. ಇದನ್ನು ಕೇಳಿ ಕಬೀರಪತ್ನಿಯು ಮನಸ್ಸಿನಲ್ಲಿ—ನಮ್ಮ ಮನೆಯಲ್ಲಿ ಧಾನ್ಯವಿಲ್ಲ. ಊರೊಳಗೆ ನಮಗೆ ಯಾರೂ ಕಡವನ್ನು ಕೊಡುವದಿಲ್ಲ, ಎಂದು ಚಿಂತಿಸಿದಳು. ಆದರೂ ಆಕೆಯು ಮನಸ್ಸಿನಲ್ಲಿ ಧೈರ್ಯವನ್ನು ತಾಳಿ, ಮುಖದಿಂದ ರಾಮಭಜನೆಯನ್ನು ಮಾಡುತ್ತ ಒಬ್ಬಳೇ ಪೇಟೆಗೆ ಅತಿತ್ವರೆಯಿಂದ ಹೋದಳು. ಅವಳು ಹಾದಿಯಲ್ಲಿ—"ನಾನು ಪ್ರಯತ್ನ ಮಾಡಿವಾಗ್ಯೂ ಅನ್ನವು ಸಿಗದಿದ್ದರೆ, ನಮ್ಮ ಸತ್ವಹಾನಿಯಾಗುವದು." ಎಂದು ಯೋಚಿಸುತ್ತ ಬಣಜಿಗರ ಅಂಗಡಿಗಳ ಓಣಿಗೆ ಬಂದಳು. ಆ ಓಣಿಯ ಎಡಕ್ಕೂ ಬಲಕ್ಕೂ ನೋಡುವಷ್ಟರೊಳಗೆ ಅಕಸ್ಮಾತ್ತಾಗಿ ಒಂದು ಅಂಗಡಿಯಲ್ಲಿ ಒಬ್ಬ ವರ್ತಕನು ಇನ್ನೂ ಎಚ್ಚತ್ತಿದ್ದು, ಅಂಗಡಿಯ ಬಾಗಿಲವನ್ನು ತರ್ಕೈಂಡು ಕುಳಿತಿದ್ದನು. ಆಗ ಆ ಕಬೀರಪತ್ನಿಯು ಆ ವರ್ತಕನ ಬಳಿಗೆ ಹೋಗಿ, ಮಧುರವಚನಗಳಿಂದ—ಅಪ್ಪಾ, ಕೆಲವು ಸಾಧುಸಂತರು ತೀರ್ಥಾಟನ ಮಾಡುತ್ತ ಮಾಡುತ್ತ ನಮ್ಮ ಮನೆಗೆ ಈ ಸಮಯದಲ್ಲಿ ಅಕಸ್ಮಾತ್ತಾಗಿ ಬಂದಿರುವರು. ಅವರ ಸಲುವಾಗಿ ಅಡಿಗೆಯ ಸಾಮಾನಗಳು ಬೇಕಾಗಿವೆ. ನಮ್ಮ ಮನೆಯಲ್ಲಿ ಯಾವ ಸಾಮಾನಗಳೂ ಇಲ್ಲ. ಇಂಥ ಕಷ್ಟ ಕಾಲದಲ್ಲಿ ನಿಮ್ಮ ಬಳಿಗೆ ಬಂದಿರುವೆನು. ಅಡಿಗೆಗೆ ಬೇಕಾದ ಸಾಮುಗ್ರಿಗಳನ್ನು ತ್ವರೆಯಾಗಿ ಕೊಡಿರಿ; ಅವುಗಳಿಗೆ ತಾವು ಹೇಳಿದಷ್ಟು ಬೆಲೆ ಕೊಡುವೆನು, ಎಂದು ನುಡಿದಳು,

ಈ ಮಾತುಗಳನ್ನು ಕೇಳಿ ಬಣಜಿಗನು—ನೀನು ಯಾರ ಹೆಂಡತಿಯು, ಎಂದು ಕಬೀರಪತ್ನಿಯನ್ನು ಕೇಳಲು, ಅವಳು ಮಧುರವಚನಗಳಿಂದ—"ಯವನವಂಶದಲ್ಲಿ ಕಬೀರನೆಂಬ ಒಬ್ಬ ವೈಷ್ಣವವೀರನಿರುವನು. ಅವನೇ ನನ್ನ ಗಂಡನು. ಏಳು, ಸಾಮಾನುಗಳನ್ನು ಬೇಗನೆ ಕೊಡು. ಸಾಧು ಸಂತರಿಗೆ ಬಹು ಹಸಿವೆಯಾಗಿರುವದು," ಎಂದು ನುಡಿದಳು. ಕಬೀರನ ಹೆಂಡತಿಯ ಸುಂದರವಾದ ನುಡಿಗಳನ್ನು ಕೇಳಿ ವ್ಯಾಪಾರಸ್ಥನು ಮೋಹಿಸಿದನು. ಇಂದ್ರನು ಅಹಲ್ಯೆಯನ್ನು ನೋಡಿ ಮನಸ್ಸಿನಲ್ಲಿ ಅವಿಚಾರವನ್ನು ಮಾಡಿದಂತೆಯೂ, ಸುಂದರರೂಪವುಳ್ಳ ಲೋಕಮಾತೆಯಾದ ಪಾರ್ವತಿಯನ್ನು ನೋಡಿ ಭಸ್ಮಾಸುರನು ಕಾಮಮೋಹಿತನಾದಂತೆಯೂ, ವಿಶ್ವಜನನಿಯಾದ ಸೀತಾದೇವಿಯನ್ನು

ರಾವಣನು ಪಾಪದೃಷ್ಟಿಯಿಂದ ನೋಡಿದಂತೆಯೂ, ಪಾಂಡವರ ಪತ್ನಿಯಾದ ದ್ರೌಪದಿಯನ್ನು ನೋಡಿ ದುರ್ಯೋಧನನು ಪಾಪಬುದ್ಧಿಯನ್ನು ಮಾಡಿದಂತೆ-ಯೂ ಕಾಮಾತುರನಾದ ಆ ವರ್ತಕನು ಆ ಕಬೀರಪತ್ನಿಯ ವಿಷಯವಾಗಿ ಪಾಪ ಬುದ್ಧಿಯನ್ನು ಮಾಡಿ, ಅವಳಿಗೆ—"ನೀನು ನನ್ನ ಮನೋರಥವನ್ನು ಪೂರ್ಣ ಮಾಡಿದರೆ, ನಿನಗೆ ಬೇಕಾದ ಸಾಮುಗ್ರಿಗಳನ್ನೂ, ಬೇಕಾದರೆ ದ್ರವ್ಯ-ವಸ್ತ್ರ-ಭೂಷಣಗಳನ್ನೂ ಕೊಡುವೆನು. ಬಹಳ ಹೇಳುವದೇನು? ನೀನು ಬೇಡಿದ್ದನ್ನು ಕೊಡು ವೆನು. ಇದಕ್ಕೆ ನೀನು ಮನಸ್ಸಿನಲ್ಲಿ ಸಂಕೋಚಪಟ್ಟರೆ, ನಿನ್ನ ಮನೆಗೆ ನೀನು ತಿರುಗಿ ಹೋಗು." ಎಂದು ಮಾತಾಡಿದನು.

ದುರ್ಜನನಾದ ವರ್ತಕನ ಮಾತುಕೇಳಿ ಆ ಕಬೀರಪತ್ನಿಯು ಮನಸ್ಸಿನಲ್ಲಿ—"ನಾನು ಇವನ ಮನೋರಥವನ್ನು ಪೂರ್ಣಮಾಡದಿದ್ದರೆ ಬೇರೆ ಯಾವ ಕಡೆಯಲ್ಲಿಯೂ ಅನ್ನವು ಸಿಗುವದಿಲ್ಲ. ಸಂತರನ್ನು ಉಪವಾಸಗೆಡವಿದರೆ, ಸತ್ವ ಹಾನಿಯಾಗುವದು. ಸಭೆಯನ್ನು ನೋಡಿ ಕೀರ್ತನ ಮಾಡಬೇಕು ಭೂಮಿ ಇದ್ದಂತೆ ಬೀಜವನ್ನು ಬಿತ್ತಬೇಕು. ಸತ್ವಗುಣಿಯಾದ ಹರಿಶ್ಚಂದ್ರರಾಜನು ಚಾಂಡಾಲನ ಮನೆಯಲ್ಲಿ ನೀರು ಹೊತ್ತು ಕೊಂಡಿರುವಾಗ್ಗೆ ಅವನ ರಾಣಿಯಾದ ತಾರಾಮತಿಯು ಕ್ಲೇಶವನ್ನನುಭೋಗಿಸಲಿಲ್ಲವೇನು? ಗಾಳಿಯು ಬಿಟ್ಟ ಕಡೆಗೆ ಕಾಳನ್ನು ತೂರಬೇಕು. ಮುಳುಗುವಾಗ ಚಾಂಡಾಲನ-ಕಾಲನ್ನಾದರೂ ಹಿಡಿಯಬೇಕು. ದುಷ್ಕಾಳದಲ್ಲಿ ಯಾಚಕರು ಕೃಪಣನ ಹತ್ತರವಾದರೂ ಅನ್ನ ವನ್ನು ಬೇಡಬೇಕಾಗುತ್ತದೆ. ಕಲಿರಾಜನು ಉದಯನಾಗಿರುವನು. ಅಗಬಾರದ್ದನ್ನಾದರೂ ಮಾಡಿಸುವನು. ಶಾಸ್ತ್ರಗಳಲ್ಲಿ ಮನುಷ್ಯರಿಗೋಸ್ಕರ ಸ್ವಧರ್ಮವನ್ನೂ, ಅಧರ್ಮವನ್ನೂ ಜ್ಞಾನಿಗಳು ಹೇಳಿರುವದು ನಿಜವು. ಆದರೆ ಶ್ರೀ ಹರಿಯ ಚರಣವನ್ನು ದೊರಕಿಸಿಕೊಡುವ ಅಧರ್ಮವನ್ನು ಅವಶ್ಯವಾಗಿ ಆಚರಿಸಬೇಕು. ಮಾತಾಪಿತೃಗಳು ಸಾಕ್ಷಾತ್ ತೀರ್ಥರೂಪರು. ಹಿರಿಯಣ್ಣನೂ ಆ ತೀರ್ಥಕ್ಕೆ ಸಮಾನನು. ಕುಲಗುರುವು ಹಾಗು ಅತಿಥಿಗಳು ಸಾಕ್ಷಾತ್ ದೇವರು. ಇವರೆಲ್ಲರ ಆಜ್ಞೆಯು ಪ್ರಮಾಣವೆಂದೆಣಿಸತಕ್ಕದ್ದು ನಿಜವು. ಆದರೆ ಭರತನು ತನ್ನ ತಾಯಿಯ ಮಾತನ್ನು ಕೇಳಿದ್ದರೆ, ಶ್ರೀರಾಮ ಚರಣಗಳು ಅವ ನಿಗೆ ಹ್ಯಾಗೆ ಸಿಗುತ್ತಿದ್ದವು? ಪ್ರಲ್ಹಾದನು ತನ್ನ ತಂದೆಯ ಅಪ್ಪಣೆಯನ್ನು ಪಾಲಿಸಿದ್ದರೆ, ಅವನಿಗೆ ನರಹರಿಯು ಹ್ಯಾಗೆ ಪ್ರಸನ್ನನಾಗುತ್ತಿದ್ದನು? ಅದರಂತೆ ಬಲಿಯು ತನ್ನ ಕುಲಗುರುವಾದ ಶುಕ್ರಾಚಾರ್ಯರ ಮಾತನ್ನು ಕೇಳದೆ, ವಾಮ

ರಾವಣನು ಪಾಪದೃಷ್ಟಿಯಿಂದ ನೋಡಿದಂತೆಯೂ, ಪಾಂಡವರ ಪತ್ನಿಯಾದ ದ್ರೌಪದಿಯನ್ನು ನೋಡಿ ದುರ್ಯೋಧನನು ಪಾಪಬುದ್ಧಿಯನ್ನು ಮಾಡಿದಂತೆ-ಯೂ ಕಾಮಾತುರನಾದ ಆ ವರ್ತಕನು ಆ ಕಬೀರಪತ್ನಿಯ ವಿಷಯವಾಗಿ ಪಾಪ ಬುದ್ಧಿಯನ್ನು ಮಾಡಿ, ಅವಳಿಗೆ—"ನೀನು ನನ್ನ ಮನೋರಥವನ್ನು ಪೂರ್ಣ ಮಾಡಿದರೆ, ನಿನಗೆ ಬೇಕಾದ ಸಾಮುಗ್ರಿಗಳನ್ನೂ, ಬೇಕಾದರೆ ದ್ರವ್ಯ-ವಸ್ತ್ರ-ಭೂಷಣಗಳನ್ನೂ ಕೊಡುವೆನು. ಬಹಳ ಹೇಳುವದೇನು? ನೀನು ಬೇಡಿದ್ದನ್ನು ಕೊಡುವೆನು. ಇದಕ್ಕೆ ನೀನು ಮನಸ್ಸಿನಲ್ಲಿ ಸಂಕೋಚಪಟ್ಟರೆ, ನಿನ್ನ ಮನೆಗೆ ನೀನು ತಿರುಗಿ ಹೋಗು." ಎಂದು ಮಾತಾಡಿದನು.

ದುರ್ಜನನಾದ ವರ್ತಕನ ಮಾತುಕೇಳಿ ಆ ಕಬೀರಪತ್ನಿಯು ಮನಸ್ಸಿನಲ್ಲಿ—"ನಾನು ಇವನ ಮನೋರಥವನ್ನು ಪೂರ್ಣಮಾಡದಿದ್ದರೆ ಬೇರೆ ಯಾವ ಕಡೆಯಲ್ಲಿಯೂ ಅನ್ನವು ಸಿಗುವದಿಲ್ಲ. ಸಂತರನ್ನು ಉಪವಾಸಗೆಡವಿದರೆ, ಸತ್ವ ಹಾನಿಯಾಗುವದು. ಸಭೆಯನ್ನು ನೋಡಿ ಕೀರ್ತನ ಮಾಡಬೇಕು ಭೂಮಿ ಇದ್ದಂತೆ ಬೀಜವನ್ನು ಬಿತ್ತಬೇಕು. ಸತ್ವಗುಣಿಯಾದ ಹರಿಶ್ಚಂದ್ರರಾಜನು ಚಾಂಡಾಲನ ಮನೆಯಲ್ಲಿ ನೀರು ಹೊತ್ತು ಕೊಂಡಿರುವಾಗ್ಗೆ ಅವನ ರಾಣಿಯಾದ ತಾರಾಮತಿಯು ಕ್ಲೇಶವನ್ನನುಭೋಗಿಸಲಿಲ್ಲವೇನು? ಗಾಳಿಯು ಬಿಟ್ಟ ಕಡೆಗೆ ಕಾಳನ್ನು ತೂರಬೇಕು. ಮುಳುಗುವಾಗ ಚಾಂಡಾಲನ-ಕಾಲನ್ನಾದರೂ ಹಿಡಿಯಬೇಕು. ದುಷ್ಕಾಳದಲ್ಲಿ ಯಾಚಕರು ಕೃಪಣನ ಹತ್ತಿರವಾದರೂ ಅನ್ನವನ್ನು ಬೇಡಬೇಕಾಗುತ್ತದೆ. ಕಲಿರಾಜನು ಉದಯುನಾಗಿರುವನು. ಅಗಬಾರದ್ದನ್ನಾದರೂ ಮಾಡಿಸುವನು. ಶಾಸ್ತ್ರಗಳಲ್ಲಿ ಮನುಷ್ಯರಿಗೋಸ್ಕರ ಸ್ವಧರ್ಮವನ್ನೂ, ಅಧರ್ಮವನ್ನೂ ಜ್ಞಾನಿಗಳು ಹೇಳಿರುವದು ನಿಜವು. ಆದರೆ ಶ್ರೀ ಹರಿಯ ಚರಣವನ್ನು ದೊರಕಿಸಿಕೊಡುವ ಅಧರ್ಮವನ್ನು ಅವಶ್ಯವಾಗಿ ಆಚರಿಸಬೇಕು. ಮಾತಾಪಿತೃಗಳು ಸಾಕ್ಷಾತ್ ತೀರ್ಥರೂಪರು. ಹಿರಿಯಣ್ಣನೂ ಆ ತೀರ್ಥಕ್ಕೆ ಸಮಾನನು. ಕುಲಗುರುವು ಹಾಗುಅತಿಥಿಗಳು ಸಾಕ್ಷಾತ್ ದೇವರು. ಇವರೆಲ್ಲರ ಆಜ್ಞೆಯು ಪ್ರಮಾಣವೆಂದೆಣಿಸತಕ್ಕದ್ದು ನಿಜವು. ಆದರೆ ಭರತನು ತನ್ನ ತಾಯಿಯ ಮಾತನ್ನು ಕೇಳಿದ್ದರೆ, ಶ್ರೀರಾಮ ಚರಣಗಳು ಅವನಿಗೆ ಹ್ಯಾಗೆ ಸಿಗುತ್ತಿದ್ದವು? ಪ್ರಲ್ಹಾದನು ತನ್ನ ತಂದೆಯ ಅಪ್ಪಣೆಯನ್ನು ಪಾಲಿಸಿದ್ದರೆ, ಅವನಿಗೆ ನರಹರಿಯು ಹ್ಯಾಗೆ ಪ್ರಸನ್ನನಾಗುತ್ತಿದ್ದನು? ಆದರಂತೆ ಬಲಿಯು ತನ್ನ ಕುಲಗುರುವಾದ ಶುಕ್ರಾಚಾರ್ಯರ ಮಾತನ್ನು ಕೇಳದೆ, ವಾಮ

ಸಾಧುಸಂತರು ತೃಪ್ತರಾದಬಳಿಕ ಕಬೀರನ ಪತ್ನಿಯು ಗಂಡನನ್ನು ಏಕಾಂತದಲ್ಲಿ ಕರೆದು—ನೀವು ಸಾಧುಸಂತರ ಹತ್ತರಇದ್ದು ಅವರ ಸಮಾಚಾರವನ್ನು ತೆಗೆದುಕೊಳ್ಳಿರಿ. ನಾನು ಒಬ್ಬ ಬಣಜಿಗನಿಗೆ ವಚನವನ್ನು ಕೊಟ್ಟು ಇಷ್ಟುತ್ವರೆಯಿಂದ ಸಾಮಗ್ರಿಗಳನ್ನು ತಂದಿರುವೆನು. ಅವನ ಮನೋರಥವನ್ನು ಪೂರ್ಣಮಾಡುವದಕ್ಕೆ ನನಗೆ ಅಪ್ಪಣೆಕೊಡಿರಿ. ತಡವಾದರೆ ಸೂರ್ಯನು ಉದಯನಾಗುವನು. ಆ ಮೇಲೆ ನಮ್ಮ ಸತ್ವಕ್ಕೆ ಹಾನಿಯುಂಟಾಗುವದು.'' ಎಂದು ಅಂದಳು. ಅದಕ್ಕೆ ಭಕ್ತನಾದ ಕಬೀರನು—ನಾನೂ ನಿನ್ನ ಸಂಗಡ ಬರುವೆನು ನಮ್ಮ ಮೇಲೆ ವಣಿಜನ ಉಪಕಾರವು ಬಹಳವಾಗಿದೆ. ಈ ಪೊತ್ತಿನದಿವಸ ಸಂತರ ಭೋಜನವಾದದ್ದು ಅವನ ಪುಣ್ಯದಿಂದಲೇ ಸರಿ. ಅವನ ಉಪಕಾರವನ್ನುತೀರಿಸುವದು ನಮ್ಮಿಂದ ಎಂದಿಗೂ ಆಗದು. ನಿನಗೂ ಒಳ್ಳೇ ಉಪಾಯವು ನೆನಪಾಯಿತು. ನೀನು ಸಂತರಸಲುವಾಗಿ ದೇಹವನ್ನು ಅರ್ಪಿಸಿರುವಿ. ಈಗ ನಾನು ನಿನ್ನನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು. ಆ ವರ್ತಕನ ಮನೆಗೆ ಕಳಿಸುವೆನು. ಮಳೆಯು ಭೋರ್ಗರೆಯಹತ್ತಿರುವದು. ಘೋರಕತ್ತಲೆಯಾಗಿದೆ. ಇಂಥ ಸಮಯದಲ್ಲಿ ಒಬ್ಬಳೇ ಹೋಗುವದಕ್ಕೆ ನಿನಗೆ ಅಂಜಿಕೆಬಂದೀತು.'' ಎಂದು ನಡಿದು, ತನ್ನ ಪತ್ನಿಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ತ್ವರೆಯಿಂದ ಪೇಟೆಗೆ ಹೊರಟನು. ಮಾರ್ಗದಲ್ಲಿ ಹೋಗುವಾಗ ಗಂಡಹೆಂಡರು ಶ್ರೀರಾಮಭಜನೆಮಾಡುತ್ತ, ವೈಷ್ಣವವೀರರು ನಮ್ಮ ಮನೆಗೆ ಪ್ರಾಪ್ತವಾದದ್ದರಿಂದ ಈಪೊತ್ತಿನ ದಿನವು ಧನ್ಯವಾದದ್ದೆಂದು ಒಬ್ಬರಿಗೊಬ್ಬರು ಮಾತಾಡುತ್ತ, ವರ್ತಕನ ಮನೆಗೆ ಬಂದರು. ಆಗ ಕಬೀರನು ತನ್ನ ಹೆಂಡತಿಯನ್ನು ಕುರಿತು, ನಾನು ಮನೆಗೆ ಹೋಗುತ್ತೇನೆ. ಮನೆಯಲ್ಲಿ ಸಂತರನ್ನು ಬಿಟ್ಟು ಬಂದಿರುವೆನು. ಅವರು ಎಲ್ಲಿಯಾದರೂ ಹೋದಾರು. ಆದ್ದರಿಂದ ಅವರ ಚರಣಸೇವೆಯನ್ನು ಮಾಡುವದಕ್ಕಾಗಿ ಬೇಗನೆ ಹೋಗುವೆನು. ನೀನು ಮನಸ್ಸಿನಲ್ಲಿ ಎಳ್ಳಷ್ಟಾದರೂ ಸಂಕೋಚಪಡದೆ, ವಣಿಜನ ಮನೋರಥವನ್ನು ಪೂರೈಸು'' ಎಂದು ಹೇಳಿ ಮನೆಗೆ ಹೊರಟು ಹೋದನು.

ಇತ್ತ ಆ ಕಾಮಾತುರನಾದ ಬಣಜಿಗನು ಕಬೀರಪತ್ನಿಯ ಹಾದಿಯನ್ನೇ ನೋಡುತ್ತ ಕುಳಿತಿದ್ದನು. ಆ ದುರಾಚಾರಿಯು ತನ್ನೊಳಗೆ—ಆ ನಾರಿಯು ನನ್ನ ಬಳಿಗೆ ರಾತ್ರಿ ಒಬ್ಬಳೇ ಬಂದು ಮೋಸಗೊಳಿಸಿ ಹೋದಳು. ಎಂದು ಮಾತಾಡುವಷ್ಟರೊಳಗೆ ಕಬೀರಪತ್ನಿಯು ಅವನ ಕಣ್ಣೆದುರಿಗೆ ಕಂಡಳು.

ಆಗ ಅವನಿಗೆ ಬಹು ಹರುಷವಾಗಿ, "ನೀನು ವಚನವನ್ನು ಸತ್ಯಮಾಡಿದೆ" ಎಂದು ನುಡಿದನು. ಕಬೀರಪತ್ನಿಯು ಬಂದು ತನ್ನ ಸ್ಥಾನದಲ್ಲಿ ಕುಳಿತಳು. ಆಗ ಆ ವಣಿಜನು ಅವಳಿಗೆ—ಇಷ್ಟು ದೊಡ್ಡ ಮಳೆ ಬರುತ್ತಿದ್ದರೂ, ನಿನ್ನ ಕಾಲು ಗಳು ಕೆಸರಾಗಿಲ್ಲವಲ್ಲ, ಈ ನನ್ನ ಸಂಶಯುವನ್ನು ದೂರಮಾಡು, ಸುಳ್ಳಾಡಬೇಡ, ಎಂದು ಅಂದನು. ಅದನ್ನು ಕೇಳಿ ಕಬೀರಪತ್ನಿಯು—ಗುಣವಂತನಾದ ಸೆಟ್ಟಿಯೇ ಕೇಳು ನಿನಗೆ; ನಾನು ನಿಜವಾದ ಸಂಗತಿಯನ್ನು ಹೇಳುವೆನು. ನಿನಗೆ ವಚ ನವನ್ನು ಕೊಟ್ಟು ಹೋಗಿ ಸಾಧುಸಂತರನ್ನು ಉಣಿಸಿ ಸಂತೋಷಗೊಳಿಸಿದೆನು. ನೀನು ಕೊಟ್ಟ ಸಾಮುಗ್ರಿಗಳಿಂದ ವೈಷ್ಣವವೀರರು, ಬಹು ಸಮಾಧಾನ ಹೊಂದಿ ದರು. ಇದು ನಿನ್ನ ಪುಣ್ಯವೇ ಸರಿ. ನಮ್ಮ ಮೇಲೆ ನಿನ್ನ ಉಪಕಾರವು ಬಹಳ ವಾಗಿದೆ. ಅದನ್ನು ತೀರಿಸುವದು ನಮ್ಮ ಕಡೆಯಿಂದ ಎಂದಿಗೂ ಆಗುವದಿಲ್ಲ. ಪತಿವ್ರತೆಗೆ ಗಂಡನ ಆಜ್ಞೆಯೇ ಪ್ರಮಾಣವು. ಆದರೂನಮ್ಮ ಮೇಲೆ ಸಂಕ ಟಬಂದದ್ದನ್ನು ತಿಳಿದು ಗಂಡನ ಆಜ್ಞೆಯಿಲ್ಲದೆ ನಿನಗೆ ನಾನು ವಚನ ಕೊಟ್ಟೆನು. ಕಬೀರನು ನನ್ನ ಪತಿಯು. ಅವನಿಗೆ ನಾನು ಈ ವೃತ್ತಾಂತವನ್ನು ಹೇಳಲು, ಅವನು ತುಂಬಾ ಸಂತೋಷಬಟ್ಟು ನನ್ನನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿ ಕೊಂಡು ನಿನ್ನ ಬಳಿಗೆ ತಂದು ಬಿಟ್ಟು, ಪುನಃ ಮನೆಗೆ ಹೋದನು. ಈಗ ನೀನು ಭ್ರಾಂತಿಯನ್ನು ಬಿಟ್ಟು, ನಿನ್ನ ಕಾಮುವಾಸನೆಯನ್ನು ಬೇಗನೆ ಪೂರ್ಣಮಾಡಿಕೋ" ಎಂದು ಮಾತಾಡಿದಳು. ಆ ಸತ್ವಶಾಲಿಯೂ ಪತಿವ್ರತೆಯೂ ಆದ ಕಬೀರಪತ್ನಿಯು ಮಾತುಗಳನ್ನು ಕೇಳಿ ಆ ವಣಿಜನಿಗೆ ಅನುತಾಪವು ಹುಟ್ಟಿತು. ಅವನು ಆ ಪತಿ ವ್ರತೆಗೆ—"ನಾನು ನರದೇಹವನ್ನು ಧರಿಸಿ, ಅದರ ಸಾರ್ಥಕವನ್ನು ಮಾಡಲಿಲ್ಲ. ೮೪ ಲಕ್ಷ ಯೋನಿಗಳನ್ನು ತಿರುಗಿ, ಅಕಸ್ಮಾತ್ತಾಗಿ ನರದೇಹವನ್ನು ಧಾರಣ ಮಾಡಿದೆನು. ಈ ಜನ್ಮದಲ್ಲಿಯಾದರೂ ನಾನು ವಿಚಾರವನ್ನು ಮಾಡದೆ ವಿಷಯ ಲಂಪಟನಾದೆನಲ್ಲ! ವಿರಕ್ತನೂ, ಉದಾರನೂ ಆದ ಕಬೀರಭಕ್ತನ ಹೆಂಡತಿಯನ್ನು ಛಲಿಸಿದೆನು!! ಕುಡುಗೋಲು ತೆಗೆದುಕೊಂಡು ತುಳಸಿಯ ವನವನ್ನು ಕೊಯ್ದಂ ತೆಯೂ, ಕೈಯಲ್ಲಿ ಗುದ್ದಲಿಯನ್ನು ತೆಗೆದುಕೊಂಡು ಯಜ್ಞಶಾಲೆಯನ್ನು ಕೆಡವಿ ದಂತೆಯೂ, ಕಾಲಿನಿಂದ ಒದ್ದು ಶಿವಪೂಜೆಯನ್ನು ಕೆಡಸಿದಂತೆಯೂ, ಅಮೃತ ಕುಂಭವನ್ನು ಎಡವಿ ಉರುಳಿಸಿದಂತೆಯೂ, ಕೈಯಿಂದ ಸಾಲಿಗ್ರಾಮುವನ್ನು ಒಡೆ ದಂತೆಯೂ, ಕೊಡಲಿಯಿಂದ ಅಶ್ವತ್ಥವೃಕ್ಷವನ್ನು ಕಡಿದಂತೆಯೂ, ಸ್ನಾನ ಮಾಡದೆ ಗಂಗಾನದಿಯನ್ನು ದಾಟಿದಂತೆಯೂ, ಶ್ರೀಭಾಗವತವನ್ನು ಮುಖ

ದಿಂದ ನಿಂದಿಸಿದಂತೆಯೂ, ಕಬೀರಭಕ್ತನನ್ನು ಛಲಿಸಿದ ನನಗೆ ಮಹಾದೋಷವು ತಟ್ಟಿತು. ತನ್ನ ಪತ್ನಿಯನ್ನು ಎರಡನೆಯವರ ಭೋಗಕ್ಕಾಗಿ ಕೊಡುವ ಪತಿಯನ್ನು ನಾನು ಎಲ್ಲಿಯೂ ಕಾಣಲಿಲ್ಲ. ಸದ್ಗುಣದ ಖನಿಯಾದ ಈಕೆಯು ನನ್ನ ತಾಯಿಯು, ಆದಿಜನನಿಯು, ಜಗದಂಬೆಯು.'' ಎಂದು ಮನಸ್ಸಿನಲ್ಲಿ ಪಶ್ಚಾತ್ತಾಪಪಟ್ಟು, ಕಬೀರ ಪತ್ನಿಗೆ ನಮಸ್ಕರಿಸಿ—ಎಲೈ ತಾಯಿಯೇ, ನಾನು ನಿನ್ನ ಮಗನು, ನನ್ನ ಅಪರಾಧಗಳನ್ನು ಸರ್ವಥಾ ಮನಸ್ಸಿನಲ್ಲಿ ತರಬೇಡ. ತಿಳಿಗೇಡಿತನದಿಂದ ನಾನು ನಿನ್ನನ್ನು ಛಲಿಸಿದೆನು. ನೀನು ಈಗ ನನ್ನ ಅಪರಾಧಗಳನ್ನು ಕ್ಷಮಿಸಿ, ನನಗೆ ಅಭಯವನ್ನು ಕೊಡು. ನಿನ್ನ ಮಗನಾದ ನನ್ನನ್ನು ಕೈಹಿಡಿದು ಕರಕೊಂಡು ಹೋಗಿ ಕಬೀರನ ಪಾದಗಳ ಮೇಲೆ ಕೆಡವು, ಎಂದು ಪ್ರಾರ್ಥಿಸಿ, ಪುನಃ ಪುನಃ ಆ ಪತಿವ್ರತೆಯ ಚರಣಗಳ ಮೇಲೆ ತನ್ನ ಮಸ್ತಕವನ್ನಿಟ್ಟನು.

ವಣಿಜನ ಕರುಣಾವಚನಗಳನ್ನು ಕೇಳಿ ಕಬೀರಪತ್ನಿಯು—ವರ್ತಕನೇ, ನೀನು ಧನ್ಯನಾದೆ. ನಿನ್ನ ಮನಸ್ಸು ಬೆಣ್ಣೆಯಹಾಗೆ ಮೃದುವಾದಂತೆ ಕಾಣುವದು. ಈವೊತ್ತಿನವರೆಗೆ ನೀನು ಕೆಟ್ಟ ನಡತೆಯಿಂದ ನಡೆದರೂ ಕಡೆಗೆ ನಿನಗೆ ಪಶ್ಚಾತ್ತಾಪವು ಹುಟ್ಟಿತು. ಅದರಿಂದ ನಿನ್ನ ದುರಿತಗಳೆಲ್ಲ ನಾಶವಾಗಿ ಹೋದವು. ಶಾಸ್ತ್ರಗಳಲ್ಲಿಯಾದರೂ ಹೀಗೆಯೇ ಹೇಳಿದೆ. ವಿಷಭಕ್ಷಣಮಾಡಿದ ಬಳಿಕ ಅಮೃತಪಾನವು ಸಿಕ್ಕುವಂತೆ ದುಷ್ಕರ್ಮ ಮಾಡಿದ ಬಳಿಕ ನಿನಗೆ ಪಶ್ಚಾತ್ತಾಪವು ಹುಟ್ಟಿತು. ಅನುತಾಪಹುಟ್ಟಿದ ಕೂಡಲೆ ಎಲ್ಲ ಅಪಾಯಗಳೂ ದೂರವಾಗುವವೆಂದು ಸರ್ವಜ್ಞರು ಹೇಳುವರು. ಎಲೈ ಧೈರ್ಯವಂತನೇ, ನಿನ್ನ ಅನುತಾಪದಿಂದ ಭವರೋಗವು ಹೇಳಹೆಸರಿಲ್ಲದೆ ಓಡಿಹೋಯಿತು. ಇನ್ನು ನಾನು ನಿನಗೆ ಕಬೀರನ ಭೆಟ್ಟಿಯನ್ನು ಮಾಡಿಸುವೆನು,'' ಎಂದು ಹೇಳಿದಳು. ಇದನ್ನು ಕೇಳಿ ಆ ವರ್ತಕನಿಗೆ ಪರಮಾಲ್ಹಾದವಾಯಿತು. ಆತನು ದಾಂಬಿಕಾಭಿಮಾನವನ್ನೂ, ರಜಸ್ತಮೋಗುಣಗಳನ್ನೂ, ಮೋಹಭ್ರಮವನ್ನೂ ಬಿಟ್ಟು ಸಾತ್ವಿಕಲಕ್ಷಣಗಳನ್ನು ದೃಢವಾಗಿ ಅಂಗೀಕರಿಸಿದನು.

ಹೀಗೆ ವರ್ತಕನು ಶುದ್ಧನೂ ಸೋಜ್ವಲನೂ ಆಗಿ, ಕೂಡಲೆ ತನ್ನ ಅಂಗಡಿಯಿಂದ ಹೊರಟು ಎಲ್ಲ ಮಾಯಾಜಾಲವನ್ನು ಕಡಿದು ಕಬೀರಪತ್ನಿಯ ಸಂಗಡ ಕಬೀರನ ಮನೆಗೆ ಶೀಘ್ರವಾಗಿ ಬಂದನು. ಆತನು ಕಬೀರಭಕ್ತನಿಗೆ ಅನನ್ಯಭಾವದಿಂದ ಸಾಷ್ಟಾಂಗವೆರಗಿ—''ಎಲೈ ಭಕ್ತಶ್ರೇಷ್ಠನೇ, ನಾನು ನಿನ್ನ ಅಜ್ಞಾನಿಯಾದ

ಬಾಲಕನು. ತಿಳಿಯದೆ ಅನಂತಾಪರಾಧಗಳನ್ನು ಮಾಡಿದೆನು. ತಾವು ಅವುಗಳನ್ನು ಕ್ಷಮಿಸಿ, ದಾಸನಾದ ನನ್ನ ತಲೆಯ ಮೇಲೆ ಅಭಯ ಹಸ್ತವನ್ನು ಇಡಬೇಕು,'' ಎಂದು ಪ್ರಾರ್ಥಿಸಿದನು. ಹೀಗೆ ವರ್ತಕನು ಮನಸ್ಸಿನಲ್ಲಿ ಪೂರ್ಣ ಪಶ್ಚಾತ್ತಾಪಪಟ್ಟ ಚಿಹ್ನಗಳನ್ನು ಕಬೀರನು ಅಂತಃಸಾಕ್ಷಿಯಿಂದ ತಿಳಿದನು. ಮತ್ತು ಆ ವಣಿಜನಿಗೆ ಪ್ರೇಮಾಲಿಂಗನವನ್ನು ಕೊಟ್ಟು, ಅಭಯ ವರದಾನವನ್ನು ಮಾಡಿದನು. ಭಾವಿಕನೂ, ಜ್ಞಾನಿಯೂ, ಉದಾರನೂ, ವಿರಕ್ತನೂ ಆದ ಕಬೀರಭಕ್ತನು ದೀನಜನರಲ್ಲಿ ಯಾವಾಗಲೂ ದಯವನ್ನಿಡುತ್ತಿದ್ದನು. ವಣಿಜನಿಗೆ ಅನುತಾಪ ಹುಟ್ಟಿದ ಕೂಡಲೆ ಅವನು ಶ್ರೀರಾಮಭಜನೆಯನ್ನು ಮಾಡಲುದ್ಯುಕ್ತನಾದನು. ವಾಚಕರೇ, ಸತ್ಸಂಗದ ಮಹಿಮೆಯು ಅಗಾಧವಾದದ್ದು! ವೇದ-ಶಾಸ್ತ್ರಗಳಿಗೆ ಕೂಡ ಅಗಮ್ಯವಾದದ್ದು!!

ಕಬೀರಭಕ್ತನ ಅತ್ಯದ್ಭುತವಾದ ಕೀರ್ತಿಯು ಮೊದಲು ನಾಮದೇವನ ಕಿವಿಗೆ ಬಿದ್ದಿತು. ಆತನು ಜ್ಞಾನದೇವರಿಗೆ ಅದನ್ನು ಹೇಳಿ, ಅವರೊಡನೆ ಕಬೀರಭಕ್ತನ ಭೆಟ್ಟಿಗೆ ಬಂದನು. ಕಬೀರನು ಅವರಿಬ್ಬರು ಭಕ್ತರನ್ನು ನೋಡಿ ಸಾಷ್ಟಾಂಗವಾಗಿ ವಂದಿಸಿ ಪ್ರೇಮಾಲಿಂಗನವನ್ನು ಕೊಟ್ಟು, ಅವರಿಗೆ ಕೂಡ್ರುವದಕ್ಕಾಗಿ ತೃಣಾಸನವನ್ನು ಹಾಸಿದನು. ಜ್ಞಾನದೇವ-ನಾಮದೇವರ ಕಣ್ಣುಗಳು ಪ್ರೇಮಾಮೃತ-ಜಲದಿಂದ ತುಂಬಿಹೋದವು. ಆಗ ಜ್ಞಾನದೇವರು—-ಭಕ್ತಶ್ರೇಷ್ಠರೇ, ಪೂರ್ವದಲ್ಲಿ ಕ್ಷೀರಸಾಗರವಾಸಿಯಾದ ನಾರಾಯಣನು ನಿಮಗೆ ಮಾಡಿದ ಆಜ್ಞೆಯನ್ನು ನೆನಪು ಮಾಡಿಕೊಳ್ಳಿರಿ. ನಾಮದೇವಾ, ನೀನು ಸಾಕ್ಷಾತ್ ಉದ್ಧವನು. ಕಬೀರನು ಶುಕಾವತಾರ. ಈ ಮೃತ್ಯುಲೋಕದಲ್ಲಿ ಸಿಂಪಿನ ಹೊಟ್ಟೆಯೊಳಗೆ ಹುಟ್ಟಿಬಂದಿರುವಿರಿ, ಎಂದು ಮಾತಾಡುತ್ತಲೇ ಕಬೀರ-ನಾಮದೇವರಿಬ್ಬರು ಒಬ್ಬರನ್ನೊಬ್ಬರು ನಮಸ್ಕರಿಸಿದರು. ಇಬ್ಬರೂ ತಮ್ಮ ತಮ್ಮ ಮನಸ್ಸಿನೊಳಗೆ ತಮ್ಮ ಅವತಾರಗಳ ಸ್ಮರಣವನ್ನು ಮಾಡಿದರು. ಬಳಿಕ ಜ್ಞಾನದೇವರು ಕಬೀರನಿಗೆ— ದಕ್ಷಿಣ ದೇಶದಲ್ಲಿ "ಪಂಢರಪುರ"ವೆಂಬ ಕ್ಷೇತ್ರವದೆ. ಅಲ್ಲಿ ವೈಕುಂಠವಾಸಿಯೂ, ಸಾಕ್ಷಾತ್ ಪರಬ್ರಹ್ಮನೂ, ಲೀಲಾ ನಾಟಕಿಯೂ, ಜಗಜ್ಜೀವನನೂ ಆದ ನಾರಾಯಣನು ಸಗುಣಾವತಾರವನ್ನು ತಾಳಿ, ಪುಂಡರೀಕನಿಗೆ ವರವನ್ನು ಕೊಡುವದಕ್ಕೆ ಬಂದು ಸಣ್ಣ ಇಟ್ಟಂಗಿಯ ಮೇಲೆ ಇನ್ನೂವರೆಗೆ ನಿಂತಿರುವನು. ಆತನು ನಾಮದೇವನ ಪ್ರೇಮದ ಜೀವವಾಗಿರುವನು. ನೀನು ಒಂದು ಸಾರೆ ಆ ಆದಿ ಕ್ಷೇತ್ರಕ್ಕೆ ಬಂದು, ಕಣ್ಣಿನಿಂದ ಪರಮಾತ್ಮನ ಸಗುಣಮೂರ್ತಿಯನ್ನು

ನೋಡಬೇಕು,'' ಎಂದು ನುಡಿದನು. ಈ ಮಾತುಗಳನ್ನು ಕೇಳಿ, ಕಬೀರನು ಜ್ಞಾನದೇವನನ್ನು ನಮಸ್ಕರಿಸಿ—''ಕಾರ್ತಿಕಮಾಸದಲ್ಲಿ ಏಕಾದಶಿಯ ದಿವಸ ಪಾಂಡುರಂಗನ ದರ್ಶನಕ್ಕಾಗಿ ಅವಶ್ಯವಾಗಿ ಬರುವೆನು,'' ಎಂದು ವಚನಕೊಟ್ಟನು. ಬಳಿಕ ಕಬೀರನ ನಿರೂಪ ತೆಗೆದುಕೊಂಡು ಜ್ಞಾನದೇವರು ನಾಮದೇವನನ್ನು ಕರಕೊಂಡು ಕಾಶಿಯಿಂದ ಮುಂದಕ್ಕೆ ಸಾಗಿದರು.

———

# ಕೂರ್ಮದಾಸ.



ಶಕಕರ್ತೃ ನೃಪತುಂಗ ಶಾಲಿವಾಹನನ ರಾಜಧಾನಿಯೆನಿಸಿದ ಪ್ರತಿಷ್ಠಾನವೆಂಬ ನಗರವು ನಮ್ಮ ಭರತಮಾತೆಯ ಪುಣ್ಯೋದರದಲ್ಲಿ ಒಪ್ಪುತ್ತಿರುವದಷ್ಟೇ; ಈ ಪವಿತ್ರ ನಗರದಲ್ಲಿ ಭಾಗ್ಯಶಾಲಿಗಳಾದ ನಮ್ಮ ಕೂರ್ಮದಾಸರು ಜನ್ಮ ತಾಳಿದರು. ದೈವಸೃಷ್ಟಿಯು ವಿಚಿತ್ರವಾದದ್ದು! ಕೂರ್ಮದಾಸರು ಜನ್ಮವೆತ್ತುತ್ತಲೆ ಕರ- ಚರಣಗಳಿಂದ ವಿಹೀನರಾದರು. ಮಹಾತ್ಮರು ಯಾವ ಸ್ಥಿತಿಯಲ್ಲಿದ್ದರೇನು? ಅವರ ಅಂತಃಕರಣವು ಯಾವಾಗಲೂ ಆನಂದಭರಿತವಾಗಿಯೇ ಇರುವದು. ಅದರಂತೆ ನಮ್ಮ ಕೂರ್ಮದಾಸರಾದರೂ ದುರ್ಧರವಾದ ತಮ್ಮ ಬಾಲ್ಯಾವಸ್ಥೆಯನ್ನು ಕ್ಷಣಶಃ ದಾಟುತ್ತ, ಶರೀರ ಭೋಗನನ್ನು ಸಹಿಸುತ್ತ ಹರಿಭಜನೆಯಲ್ಲಿ ಆಸಕ್ತರಾದರು. ಆ ಮಹಾತ್ಮರ ಮನಸ್ಸು ಯಾವಾಗಲೂ ಉಲ್ಲಸಿತವಾಗಿ ಹರಿನಾಮಾಮೃತವನ್ನು ಪಾನಮಾಡುತ್ತಿತ್ತು. ಹೀಗೆ ಹರಿಭಜನೆಯಿಂದ ಒಪ್ಪುತ್ತಿದ್ದ ಕೂರ್ಮದಾಸರು ಹರಿಭಕ್ತಿಯ ವೃದ್ಧಿಗಾಗಿ ಅವತರಿಸಿದ ಅರುಣನೋ ಎಂಬಂತೆ ತೋರುತ್ತಿದ್ದರು.

ಕೂರ್ಮದಾಸರು ಬಾಲ್ಯನನ್ನು ಸಂಪೂರ್ಣವಾಗಿ ಕಳೆದು, ಪ್ರೌಢಾವಸ್ಥೆಯನ್ನು ಹೊಂದುತ್ತಿರಲು, ಆ ನಗರಕ್ಕೆ ಒಬ್ಬ ಸುಪ್ರಸಿದ್ಧ ಹರಿದಾಸರು ಬಂದರು. ವಿಶಾಲವಾದ ಒಂದು ದೇವಾಲಯದಲ್ಲಿ ಹರಿಕಥಾ ನಿರೂಪಣವು ನಡೆಯಿತು. ಹರಿಕಥಾ ಶ್ರವಣಲೋಲುಪರಾದ ನಮ್ಮ ಕೂರ್ಮದಾಸರು ಹ್ಯಾಗಾದರೂ ಕಷ್ಟಬಟ್ಟು ಕೀರ್ತನದ ಸ್ಥಳಕ್ಕೆ ಹೋದರು. ಹರಿದಾಸರು ತಮ್ಮ ಭಕ್ತಿರಸಯುಕ್ತವಾದ ವಾಣಿಯಿಂದ ಪಾಂಡುರಂಗನ ಲೀಲೆಗಳನ್ನು ವರ್ಣಿಸುತ್ತ ಶ್ರೋತೃಗಳ

ವನ್ನು ಆನಂದದಲ್ಲಿ ಲೀನವಾಗಮಾಡಿದರು. ಕೂರ್ಮದಾಸರಂತೂ ಪಾಂಡು ರಂಗನ ಗುಣಾನುವಾದವನ್ನು ಕೇಳಿ ತಲ್ಲೀನರಾಗಿ, ಆಗಾಗ್ಗೆ ಆನಂದಬಾಷ್ಪಗ ಳನ್ನು ಉದುರಿಸುತ್ತಿದ್ದರು. ನಮ್ಮ ಕೂರ್ಮದಾಸರು ಮೊದಲೇ ಸದ್ಭಕ್ತರು; ಅದರಲ್ಲಿ ರಸಿಕರಾದ ಹರಿದಾಸರ ವಾಣಿಯಿಂದ ಹರಿಕಥಾ ಶ್ರವಣಮಾಡಿದ ಬಳಿಕ ಕೇಳುವದೇನು? ಅವರ ಹೃದಯದಲ್ಲಿ ಭಕ್ತಿರಸವು ಉಕ್ಕಿಬಂದಿತು. ಹರಿಕೀ ರ್ತನ ಶ್ರವಣಮಾಡುವಾಗ ಯಾರ ಹೃದಯವು ಭಕ್ತಿರಸಪೂರ್ಣವಾಗುವದಿಲ್ಲವೋ ಅಂಥವರ ಹೃದಯವು ಪಾಷಾಣಕ್ಕಿಂತ ಕಠಿಣವೆಂದು ತಿಳಿಯಬೇಕೆಂದು ಮಹಾ ತ್ಮರಾದ ಮಹಿಪತಿ ಸ್ವಾಮಿಗಳು ಅಂದಿರುವರು.

ನಮ್ಮ ಕೂರ್ಮದಾಸರು ಪರಮ ಭಾವಿಕರೂ, ಸಾತ್ವಿಕರೂ ಆದದ್ದರಿಂದ ಕೀರ್ತನದ ಸತ್ಪರಿಣಾಮವು ಅವರ ಮನಸ್ಸಿನ ಮೇಲೆ ಚೆನ್ನಾಗಿ ಆಯಿತು. ಪಂಢರಪುರವು ಭೂವೈಕುಂಠವೆಂದೂ, ಅಲ್ಲಿ ಪಾಂಡುರಂಗನು ಭಕ್ತರಕ್ಷಣೆಗಾಗಿ ಯಾವಾಗಲೂ ವಾಸಿಸುತ್ತಿರುವನೆಂದೂ ಕೇಳಿದ್ದರಿಂದ ಕೂರ್ಮದಾಸರಿಗೆ ಪಂಢ ರೀನಾಥನ ದರ್ಶನಾಪೇಕ್ಷೆಯು ಹೆಚ್ಚಿತು. ಆದರೆ ಕೈ-ಕಾಲುಗಳಿಲ್ಲದವರಾದುದ ರಿಂದ ತಮ್ಮ ಈ ಬಯಕೆಯು ಹ್ಯಾಗೆ ಪೂರ್ಣವಾದೀತೆಂದು ಯೋಚಿಸಹತ್ತಿದರು. ಆಗ ಅವರು ಅಲ್ಲಿ ನೆರೆದ ಸಂತಮಂಡಲಿಗೆ ತಮ್ಮ ಈ ಉಚ್ಚತಮ ಮನೋದಯ ವನ್ನು ತಿಳಿಸಿದರು. ಭಾವಿಕರಲ್ಲದ ಕೆಲವು ದುರ್ಜನರಿಗೆ ಕೂರ್ಮದಾಸರ ಈ ಮಾತು ಕೇಳಿ ಬಹಳ ನಗೆ ಬಂದಿತು. ಅವರು ಕೂರ್ಮದಾಸರಿಗೆ ಮನಸೋ ಕ್ತವಾಗಿ ಉಪಹಾಸ ಮಾಡತೊಡಗಿದರು. ರೆಕ್ಕೆಗಳಿಲ್ಲದ ಹಕ್ಕಿಯು ಆಕಾಶ ಸಂಚಾರವನ್ನು ಬಯಸುವಂತೆ, ಕೂರ್ಮದಾಸರು ಪಂಢರೀಯಾತ್ರೆಯನ್ನು ಬಯ ಸುವದು ವ್ಯರ್ಥವೆಂದು ಆ ದುರ್ಜನರು ಪರಿಪರಿಯಾಗಿ ಜರೆದಾಡಿದರು. ಆದರೂ ಕೂರ್ಮದಾಸರು ಹತಾಶರಾಗದೆ, ತಮ್ಮ ಸಂಕಲ್ಪವನ್ನು ಮತ್ತಿಷ್ಟು ಗಟ್ಟಿಮಾಡಿ ದರು. ಮನುಷ್ಯ ಜನ್ಮಕ್ಕೆ ಬಂದು ಪಾಂಡುರಂಗನ ದರ್ಶನ ತಕ್ಕೊಳ್ಳದವರ ಬಾಳು ನಿರರ್ಥಕವೆಂಬ ಭಾವನೆಯು ಅವರಲ್ಲಿ ದೃಢವಾಯಿತು. ಆಗ ಅವರು ಪಾಂಡುರಂಗನ ನಾಮವನ್ನು ಗಟ್ಟಿಯಾಗಿ ಅನ್ನುತ್ತ ಪಂಢರಪುರದ ಯಾತ್ರೆಗೆ ಹೊರಟರು. ಕೂರ್ಮದಾಸರಿಗೆ ನಡೆಯಲಿಕ್ಕೆ ಕಾಲುಗಳಿದ್ದಿಲ್ಲ; ಊರಲಿಕ್ಕೆ ಕೈಗಳಿದ್ದಿಲ್ಲ. ಆದ್ದರಿಂದ ಅವರು ಇಡಿ ದೇಹದಿಂದಲೇ ಉರುಳುತ್ತ ಮಾರ್ಗ ವನ್ನು ಕ್ರಮಿಸಬೇಕಾಗಿತ್ತು. ಕಷ್ಟಕರವಾದ ಈ ಉರುಳುವಿಕೆಯಿಂದ ಬಹು ದೂರದಲ್ಲಿದ್ದ ಪಂಢರಪುರಿಯನ್ನು ಹ್ಯಾಗೆ ಕಂಡೇವೆಂಬ ಕಲ್ಪನೆಯು, ಭಾವಿಕ

ರಾದ ಕೂರ್ಮದಾಸರ ಮನಸ್ಸಿನಲ್ಲಿ ಬರಲಿಲ್ಲ. ಭಕ್ತಿಯ ಬಲವೇ ಅಂತಹದು! ಪಂಢರೀನಾಥನ ದರ್ಶನವೇ ಪರಮಸೌಖ್ಯವೆಂದು ಭಾವಿಸಿದ್ದ ಆ ಭಕ್ತಶ್ರೇಷ್ಠರಿಗೆ ದೇಹದ ಪರಿವೆಯು ಇಲ್ಲದಂತಾದದ್ದು ಅಸ್ವಾಭಾವಿಕವಲ್ಲ. ಆ ದಿವಸ ಕೂರ್ಮದಾಸರು ಸಂಜೆಯ ತನಕ ಒಂದು ಹರದಾರಿಯ ವರೆಗೆ ಮಾರ್ಗಕ್ರಮಣಮಾಡಿ, ಒಂದು ಮಾರುತಿಯಗುಡಿಯಲ್ಲಿ ವಸತಿಯನ್ನು ಮಾಡಿದರು. ಉರುಳುತ್ತ ಹೋಗುವಾಗ ದಾರಿಯಲ್ಲಿ ಕಲ್ಲು-ಮುಳ್ಳುಗಳು ನಟ್ಟು ಮೈನೋವಾದ್ದರಿಂದಲೂ, ಸಂಜೆಯವರೆಗೆ ಅನ್ನ-ನೀರುಗಳಿಲ್ಲದ್ದರಿಂದಲೂ ಕೂರ್ಮದಾಸರಿಗೆ ಆಗಿದ್ದ ತಾಪವನ್ನು ಬಣ್ಣಿಸಲಸದಳವು. ಈ ಅನಾಥರನ್ನು ಆ ನಿರ್ಜನವಾದ ಗುಡಿಯಲ್ಲಿ ಯಾರು ಕೇಳಬೇಕು? ಅವರು ಆ ಗುಡಿಯಲ್ಲಿ ಅಸಹ್ಯವಾದ ವೇದನೆಯನ್ನು ಸಹಿಸುತ್ತಿರಲು, ಭಕ್ತವತ್ಸಲನಾದ ಪಾಂಡುರಂಗನಿಗೆ ಕರುಣೆಹುಟ್ಟಿತು. ಶಿಶುವು ಹಸಿದು ಕಳವಳಗೊಳ್ಳಲು ತಾಯಿಯು ಗಡಬಡಿಸಿ ಬರುವಂತೆ, ರುಕ್ಮಿಣೀರಮಣನು ತಟ್ಟನೆ ಪಂಢರಪುರಿಯಿಂದ ಹೊರಟು ಕೂರ್ಮದಾಸರಿದ್ದಲ್ಲಿಗೆ ಬಂದನು. ಆಗ ಪಾಂಡುರಂಗನು ಒಬ್ಬ ವ್ಯಾಪಾರಸ್ಥನ ವೇಷಹಾಕಿಕೊಂಡು ಸಂಗಡ ಎಲ್ಲ ಸಾಮಾನುಗಳನ್ನು ತಂದಿದ್ದನು. ಅಲ್ಲಿ ಕೂರ್ಮದಾಸರು ಸಂಕಟಪಡುವದನ್ನು ನೋಡಿ, ಆ ವ್ಯಾಪಾರಸ್ಥನು ಅವರ ಯೋಗಕ್ಷೇಮವನ್ನು ವಿಚಾರಿಸಿ, ಅವರಿಗೆ ಉತ್ತಮವಾದ ಫಲಗಳನ್ನರ್ಪಿಸಿದನು. ಅವುಗಳನ್ನು ಸೇವಿಸಿ ಕೂರ್ಮದಾಸರು ಶಾಂತಚಿತ್ತರಾದರು. ಬಳಿಕ ಆ ವ್ಯಾಪಾರಿಯು ಅವರಿಗೆ ವಸ್ತ್ರಗಳನ್ನು ಕೊಟ್ಟನು. ಹೀಗೆ ವ್ಯಾಪಾರಸ್ಥನಿಂದ ಉಪಕೃತರಾದ ಕೂರ್ಮದಾಸರು ಅತಿ ವಿನಯದಿಂದ ಆ ವ್ಯಾಪಾರಿಯನ್ನು ಕುರಿತು—ನೀವು ಯಾರಯ್ಯಾ, ಎಲ್ಲಿಗೆ ಹೋಗುವಿರಿ? ಎಂದು ಪ್ರಶ್ನೆಮಾಡಿದರು. ವ್ಯಾಪಾರಿಯು—ತನ್ನ ಹೆಸರು ವಿಠೋಬನೆಂತಲೂ, ತಾನು ಪಂಢರಪುರದಅಂಗಡಿಕಾರನಿದ್ದದರಿಂದ ಅಲ್ಲಿಗೆ ಹೊರಟಿರುವೆನೆಂತಲೂ ಹೇಳಿದನು.

ಈ ಮೇರೆಗೆ ಅವರಿಬ್ಬರ ಮಾತುಕಥೆಗಳಾಗಿ, ಅವರು ಅಂದಿನ ರಾತ್ರಿಯನ್ನು ಆ ಗುಡಿಯಲ್ಲಿ ಸುಖರೂಪವಾಗಿ ಕಳೆದರು. ಪ್ರತ್ಯಕ್ಷ ಪಾಂಡುರಂಗನೇ ಅಮೃತತುಲ್ಯವಾದ ಮಧುರ ಫಲಗಳನ್ನು ಕೊಟ್ಟಿದ್ದರಿಂದ ಕೂರ್ಮದಾಸರ ಎಲ್ಲ ಆಯಾಸವೂ ಹೊರಟು ಹೋಗಿ ಮರುದಿನ ಮತ್ತೆ ದಾರೀನಡೆಯಲಿಕ್ಕೆ ಹುರುಪು ಬಂದಿತು. ಬೆಳಗಾದ ಕೂಡಲೆ ಆ ವ್ಯಾಪಾರಿಯು ಎತ್ತಿನಮೇಲೆ ಕಂಟಲೆಯನ್ನು ಹೇರಿಕೊಂಡು ಮುಂದೆ ಸಾಗಿದನು. ಕೂರ್ಮದಾಸರೂ ಎದ್ದು ಭಗವನ್ನಾಮಸ್ಮರಣೆಯನ್ನು ಮಾಡುತ್ತ ಮಾರ್ಗಕ್ರಮಣಕ್ಕೆ ಆರಂಭಿಸಿದರು. ಅವರು

ಸಂಜೆಯ ವರೆಗೆ ವಾರೀಕ್ರಮಿಸಿ, ಒಂದು ಬೆಚ್ಚಗಿನ ಸ್ಥಳವನ್ನು ನೋಡಿ ಅಂದಿನ ಪಯಣವನ್ನು ಮುಗಿಸಿದರು. ವಿಠೋಬನೂ ಹೊತ್ತುಮುಳುಗಿದ ಬಳಿಕ ಕೂರ್ಮದಾಸರು ಇಳಿದಲ್ಲಿಗೆ ಬಂದನು. ಅವರಿಬ್ಬರೂ ಕೂಡಿ ಫಲಾಹಾರವನ್ನು ಮಾಡಿದರು. ಈ ಪ್ರಕಾರವಾಗಿ ಕೂರ್ಮದಾಸರ ಪಯಣವು ನಾಲ್ಕುತಿಂಗಳು ಗಳ ವರೆಗೆ ಸಾಗಿತು. ಭಕ್ತವತ್ಸಲನಾದ ಪಾಂಡುರಂಗನು ಕೂರ್ಮದಾಸರನ್ನು ಸಂರಕ್ಷಿಸುತ್ತ ಚಾತುರ್ಮಾಸಗಳನ್ನು ಹಾದಿಯಲ್ಲೆ ಕಳೆದನು. ಕಡೆಗೆ ಕೂರ್ಮ ದಾಸರು ಲಹೂಳ ಎಂಬ ಗ್ರಾಮಕ್ಕೆ ಬಂದು ಮುಟ್ಟಿದರು.

ಕೂರ್ಮದಾಸರು ಲಹೂಳಕ್ಕೆ ಬಂದದಿವಸವೇ ಕಾರ್ತಿಕಶುದ್ಧ ದಶಮಿ ಯಾಗಿತ್ತು. ಅಲ್ಲಿ ಪಂಢರಪುರಕ್ಕೆ ಹೋಗುವ ಸಂತರ ಗಲಾಟೆಯು ವಿಶೇಷ ವಾಗಿತ್ತು. ಲಹೂಳದಿಂದ ಪಂಢರಪುರವು ಒಂದೇ ಪಯಣದ ಮೇಲಿದ್ದರೂ ಮರುದಿನವೇ ಏಕಾದಶಿಯು ತಿಥಿಯಿದ್ದದರಿಂದ ಕೂರ್ಮದಾಸರಿಗೆ ಬಹಳ ಚಡಪಡಿ ಕೆಯಾಯಿತು. ಏಕಾದಶಿಯಂಥ ಪುಣ್ಯಯೋಗದಲ್ಲಿ ನನಗೆ ಪಾಂಡುರಂಗನ ದರ್ಶ ನವಾಗುವದಿಲ್ಲೆಂದು ಆ ಭಗವದ್ಭಕ್ತರು ಬಹು ವಿಧವಾಗಿ ಚಿಂತಿಸಿದರು. ಆಗ ಅವರು ಪಾಂಡುರಂಗನನ್ನು ಕುರಿತು ಕರುಣಾಸ್ವರದಿಂದ—"ಎಲೈ ಭಕ್ತ ವತ್ಸಲನೇ, ದೀನಬಂಧುವೇ, ಪಾಂಡುರಂಗನೇ ಇಲ್ಲಿಂದ ನಿನ್ನ ಸ್ಥಳವು ಇಪ್ಪೈಲು ದೂರವಿರುವದರಿಂದ ಹೆಳವನಾದ ನಾನು ನಾಳೆ ನಿನ್ನ ದರ್ಶನಕ್ಕೆ ಬರಲಾರೆನು. ದಯಾಘನನೇ, ಇಲ್ಲಿಯವರೆಗೆ ಕಷ್ಟಪಡುತ್ತ ಬಂದನಾನು, ನಾಳಿನ ಪವಿತ್ರದಿನ ದಲ್ಲಿ ನಿನ್ನ ಚರಣದರ್ಶನವಿಲ್ಲದೆ ತಳಮಳಿಸಬೇಕಾಯಿತಲ್ಲ! ಭಕ್ತಕೈವಾರಿಯೇ, ನಿನ್ನ ದರ್ಶನದ ಲಾಲಸೆಯಂತೂ ನನ್ನಲ್ಲಿ ಅತಿಶಯವಾಗಿದೆ. ಇನ್ನು ನನ್ನ ಯತ್ನವು ಮೀರಿತು. ದೇವಾಧಿದೇವನೇ, ಪಾಂಡುರಂಗನೇ ನೀನೇ ಲಹೂಳಕ್ಕೆ ಬಂದು ಈ ದಾಸನ ಮನೋರಥವನ್ನು ಪೂರ್ಣ ಮಾಡು" ಎಂದು ಪ್ರಾರ್ಥಿ ಸಿದರು.

ಈ ಮೇರೆಗೆ ಕೂರ್ಮದಾಸರು ಪಾಂಡುರಂಗನನ್ನು ಸ್ತುವಿಸಿ, ಪಂಢರಿಗೆ ಹೊರಟಿದ್ದ ಸಂತಮಂಡಲಿಗೆ ತಮ್ಮ ಈ ಪ್ರಾರ್ಥನೆಯನ್ನು ಪಾಂಡುರಂಗನಿಗೆ ನಿವೇದನಮಾಡಬೇಕೆಂಬದಾಗಿ ಹೇಳಿದರು. ಸಾತ್ವಿಕರಾದ ಆ ಸಂತರು ಕೂರ್ಮ ದಾಸರ ಮಾತಿಗೆ ಒಪ್ಪಿಕೊಂಡು ದೇವದರ್ಶನಕ್ಕಾಗಿ ಪಂಢರಪುರಕ್ಕೆ ನಡೆದರು.

ಇತ್ತ ಏಕಾದಶಿಯ ದಿವಸ ಪಂಢರಪುರದಲ್ಲಿ ಪಾಂಡುರಂಗನ ಮುಂದೆ ನಾಮದೇವನ ಕೀರ್ತನವು ನಡೆದಿತ್ತು. ಜ್ಞಾನೇಶ್ವರರೇ ಮೊದಲಾದ ಜ್ಞಾನಿ

ಗಳು ಕೀರ್ತನ ಶ್ರವಣಕ್ಕಾಗಿ ಕುಳಿತುಕೊಂಡಿದ್ದರು. ವೈರಾಗ್ಯಮೂರ್ತಿಯಾದ ನಿವೃತ್ತಿನಾಥನೂ, ಸ್ವಾನಂದಮೂರ್ತಿಯಾದ ಸೋಪಾನದೇವನೂ, ಹಾಗೂ ಎಷ್ಟೋಮಂದಿ ಜೀವನ್ಮುಕ್ತರೂ ನಾಮದೇವನಿಂದ ಹೇಳಲ್ಪಡುವ ಕೀರ್ತನವನ್ನು ಭಕ್ತಿಪೂರ್ವಕವಾಗಿ ಶ್ರವಣ ಮಾಡುತ್ತಿದ್ದರು. ಕೀರ್ತನವು ಒಳ್ಳೇ ಭರಕ್ಕೆ ಬಂದಿತ್ತು; ಜನರ ಚಿತ್ತಗಳು ಕೀರ್ತನಕಾರನ ಮುಖದಲ್ಲಿ ನಟ್ಟು ಹೋಗಿದ್ದವು. ಇಂಥ ಸಮಯದಲ್ಲಿ ಲಹೂಳದಿಂದ ಹೊರಟಿದ್ದ ವಾರಕರೀಪರಿವಾರವು ಪಾಂಡುರಂಗನ ಸನ್ನಿಧಿಗೆ ಪ್ರಾಪ್ತವಾಯಿತು. ಕೈಯಲ್ಲಿ ಕಾವೀಬಣ್ಣದ ನಿಶಾನೆಯನ್ನು ಹಿಡಿದ ವಾರಕರೀ ಸಂತರು ವಿಠ್ಠಲನಾಮಘೋಷ ಮಾಡುತ್ತ ಸಪ್ರೇಮದಿಂದ ದೇವರ ಮುಂದೆ ಸಾಷ್ಟಾಂಗನಮಸ್ಕಾರವನ್ನು ಮಾಡಿದರು. ಅಷ್ಟರಲ್ಲಿ ಅವರಿಗೆ ಕೂರ್ಮದಾಸರ ಪ್ರಾರ್ಥನೆಯು ನೆನಪಾದ್ದರಿಂದ, ಅವರಲ್ಲಿ ಒಬ್ಬ ಸದ್ಭಕ್ತನು ಪಾಂಡುರಂಗನ ಮುಂದೆ ಕೈ ಜೋಡಿಸಿ ನಿಂತುಕೊಂಡು ಅಂತಃಕರಣಪೂರ್ವಕವಾಗಿ ಕೂರ್ಮದಾಸರ ಪ್ರಾರ್ಥನೆಯನ್ನು ನಿವೇದನ ಮಾಡಿದನು. ಸಂತಮುಖದಿಂದ ತನ್ನ ಪ್ರಿಯಭಕ್ತನ ವಿಜ್ಞಾಪನೆಯನ್ನು ಕೇಳಿದ ಕೂಡಲೆ ಪಾಂಡುರಂಗನು ಗಡಬಡಿಸಿ ಎದ್ದನು. ತನ್ನ ಸಲುವಾಗಿ ನಾಲ್ಕು ತಿಂಗಳು ಒಂದೇಸವನೆ ಕಷ್ಟಪಟ್ಟ ಕೂರ್ಮದಾಸನಿಗೆ ದರ್ಶನವನ್ನು ಕೊಟ್ಟು, ಅವನನ್ನು ಯಾವಾಗ ಆಲಿಂಗಿಸೇನೆಂಬ ಆತುರವು ಪಾಂಡುರಂಗನಲ್ಲಿ ಹುಟ್ಟಿತು. ಕೂಡಲೆ ಅವನು ನಾಮದೇವನನ್ನೂ ಜ್ಞಾನದೇವನನ್ನೂ ಸಂಗಡ ಕರಕೊಂಡು ಲಹೂಳಕ್ಕೆ ಹೊರಟನು. ಹೋಗಹೋಗುತ್ತ ಮಾರ್ಗದಲ್ಲಿ ಒಂದು ಚಮತ್ಕಾರದ ಸಂಗತಿಯು ವರ್ತಿಸಿತು.

ಸಾವತಮಾಳಿಯೆಂಬ ಒಬ್ಬ ಸದ್‌ಭಕ್ತನ ಗುಡಿಸಲು ಮಾರ್ಗದಲ್ಲಿಯೇ ಇದ್ದದರಿಂದ ಆ ಭಕ್ತನ ಯೋಗ್ಯತೆಯನ್ನು ನಾಮದೇವನಿಗೆ ತೋರಿಸಬೇಕೆಂದು ಪಾಂಡುರಂಗನ ಮನಸ್ಸಿನಲ್ಲಿ ಹುಟ್ಟಿತು. ಆಗ ಪಾಂಡುರಂಗನು ನಾಮದೇವ-ಜ್ಞಾನದೇವರನ್ನು ಕುರಿತು—"ನನಗೆ ನೀರಡಿಕೆಯಾಗಿದೆ; ನೀವು ಒಂದು ಕ್ಷಣಹೊತ್ತು ಇಲ್ಲಿಯೇ ಕುಳಿತುಕೊಳ್ಳಿರಿ. ನೀರು ಕುಡಿದು ಬರುವೆನು." ಎಂದು ಹೇಳಿ, ತಾನು ಸಾವತಮಾಳಿಯ ಗುಡಿಸಲದ ಕಡೆಗೆ ನಡೆದನು. ಸಾವತಮಾಳಿಯು ತನ್ನ ಗುಡಿಸಲಿನಲ್ಲಿ ಧ್ಯಾನಸ್ಥನಾಗಿ ಕುಳಿತಿದ್ದನು. ತನ್ನ ಆರಾಧ್ಯದೈವತದ ಚರಣದರ್ಶನವಾದ ಕೂಡಲೆ ಆತನು ಚಟ್ಟನೆ ಎದ್ದು ಪಾಂಡುರಂಗನ ಚರಣಕಮಲಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಬಳಿಕ ಆ ಭಕ್ತಶ್ರೇಷ್ಠನು

ಪಾಂಡುರಂಗನನ್ನು ಪೂಜಿಸುವದಕ್ಕಾಗಿ ಹವಣಿಸಿದನು. ಸಾವತಮಾಳಿಯು ಈ ಹವಣಿಕೆಯನ್ನು ತಿಳಿದು ದೇವರು—ಸಾವತಮಾಳಿಯೇ, ಈಗ ನಿನ್ನ ಪೂಜೆ ಮೊದಲಾದವುಗಳು ನನಗೆ ಬೇಡ; ಸದ್ಯಕ್ಕೆ ನನ್ನನ್ನು ಎಲ್ಲಿಯಾದರೂ ಅಡಗಿಸಿ ಕೂಡ್ರಿಸು; ಯಾಕಂದರೆ ಇಬ್ಬರು ಕಳ್ಳರು ನನ್ನ ಬೆನ್ನ ಹತ್ತಿದ್ದಾರೆ; ಹೂ! ಬೇಗನೆ ಅಡಗಿಸು; ತಡಮಾಡಬೇಡ; ಎಂದು ಅಂಜಿಕೊಂಡವನಂತೆ ನಟಿಸುತ್ತ ಅವಸರ ಮಾಡಹತ್ತಿದನು. ಪಾಂಡುರಂಗನ ಈ ಮಾತು ಕೇಳಿ, ಸಾವತಮಾಳಿಯು ನಕ್ಕು—ದೇವಾ, ನಿನ್ನನ್ನು ಅಡಗಿಸಲಿಕ್ಕೆ ಯಾವ ಸ್ಥಳವು ಸಾಲುವದು! ಬ್ರಹ್ಮಾಂಡವನ್ನು ತುಂಬಿ ಹೆಚ್ಚುಳಿದ ನೀನು ಎಲ್ಲಿ ಅಡಗುವೆ? ಜಗದ್ಭರಿತನೇ, ನಿನ್ನನ್ನು ಅಡಗಿಸುವದು ಪಂಜರದಲ್ಲಿ ಗಾಳಿಯನ್ನು ಹಿಡಿದು ಹಾಕುವಂತೆಯೂ, ಕತ್ತಲೆಯಲ್ಲಿ ಸೂರ್ಯನನ್ನು ಮುಚ್ಚಿಡುವಂತೆಯೂ, ಕೊಡದಲ್ಲಿ ಆಕಾಶವನ್ನು ತುಂಬಲು ಯತ್ನಿಸುವಂತೆಯೂ ನಿರರ್ಥಕವಲ್ಲವೇ? ಪಕ್ಷಿಗಳಲ್ಲಿ ಗರುಡನೂ, ಎರಿ ಮಣ್ಣಿನಲ್ಲಿ ಕಸ್ತುರಿಯೂ ಒಡೆದು ಕಾಣದೆ ಹ್ಯಾಗೆ ಇರುವವು? ಸರ್ವಬ್ರಹ್ಮಾಂಡಗಳನ್ನು ವ್ಯಾಪಿಸಿ ಉಳಿದ ನಿನಗೆ ಅಡಗಿಕೊಳ್ಳಲಿಕ್ಕೆ ಸ್ಥಳವು ಸಿಗಬಹುದೇ, ಎಂದು ನುಡಿದನು. ಸಾವತಮಾಳಿಯು ಈ ಮಾತು ಕೇಳಿ ಪಾಂಡುರಂಗನು ತಿರಸ್ಕಾರದಿಂದ—ಸಾವತಮಾಳೀ, ಸಾಕು; ನಿನ್ನ ಈ ಬ್ರಹ್ಮಜ್ಞಾನದ ಮಾತು ಸಾಕು; ಮೊದಲು ನನ್ನನ್ನು ಹ್ಯಾಗಾದರೂ ಮಾಡಿ ಮುಚ್ಚಿಡಲಿಕ್ಕೆ ಪ್ರಯತ್ನ ಮಾಡು, ಎಂದು ಹೇಳಿದನು.

ಈ ಮೇರೆಗೆ ಪಾಂಡುರಂಗನು ಆಗ್ರಹಮಾಡಲು ಸಾವತಮಾಳಿಯು ತನ್ನ ಹೊಟ್ಟೆಯನ್ನು ಸೀಳಿ ಅದರಲ್ಲಿ ಪಾಂಡುರಂಗನಿಗೆ ಕೂಡ್ರ ಹೇಳಿದನು. ಪಾಂಡುರಂಗನು ಆತನ ಹೊಟ್ಟೆಯಲ್ಲಿ ಅಡಗಿಕೊಂಡು ಕುಳಿತನು. ಸಾವತಮಾಳಿಯು ದೇವರು ಮುಂದಿಗೆ ಕಾಣದಂತೆ ತನ್ನ ಹೊಟ್ಟೆಯನ್ನು ಮುಚ್ಚಿ, ಮೇಲೆ ಗುಡಾರದ ಹಾಳಿಯನ್ನು ಸುತ್ತಿಕೊಂಡನು. ಯಶೋದೆಯು ಮಜ್ಜಿಗೆಯ ಗಡಿಗೆಯಲ್ಲಿ ಶ್ರೀಕೃಷ್ಣನು ಅಡಗಿಕೊಂಡಂತೆ, ಸಾವತಮಾಳಿಯು ಹೃದಯಸಂಪುಟದಲ್ಲಿ ಪಾಂಡುರಂಗನು ಗುಪ್ತವಾಗಿ ಕುಳಿತುಕೊಂಡನು. ಹಾಲು ಕೂಡಿದ ನೀರು ಹಾಲಿನಂತೆಯೇ ಆಗುವಂತೆ ಪಾಂಡುರಂಗನೂ ಸಾವತಮಾಳಿಯೂ ಏಕರೂಪವಾಗಿ ಸಾಮರಸ್ಯ ಸುಖವನ್ನು ಅನುಭವಿಸುತ್ತಿರಲು, ಇತ್ತ ಹಾದಿಯಲ್ಲಿ ನಿಂತ ನಾಮದೇವನು ಬಹಳ ಹೊತ್ತಾದರೂ ದೇವರು ಬಾರದ್ದರಿಂದ ಚಡಪಡಿಸಹತ್ತಿದನು. ತಾಯಿಯನ್ನು ಕಳಕೊಂಡ ಕರುವಿನಂತೆ ಆಗ ನಾಮದೇವನ ಸ್ಥಿತಿಯಾ

ಯಿತು. ಆತನು ದೇವರನ್ನು ಹುಡುಕುವದಕ್ಕಾಗಿ ಸಾವತಮಾಳಿಯ ಕಡೆಗೆ ಬರತೊಡಗಿದನು. ನೀರನ್ನು ಬಿಟ್ಟು ಬಂದ ಮೀನವು ಬದುಕದಂತೆ ಪಾಂಡುರಂಗನಿಂದ ಅಂತರಿಸಿದ ನಾಮದೇವನು ತಳಮಳಿಸಿ ಅಲ್ಲಿಯೇ ಬಿದ್ದುಬಿಟ್ಟನು. ಮುಂದೆ ಸ್ವಲ್ಪಹೊತ್ತಿನಮೇಲೆ ಎಚ್ಚತ್ತು ನಾಮದೇವನು ಕಣ್ದೆರೆದು ನೋಡಲು, ಸಾವತಮಾಳಿಯು ದೃಷ್ಟಿಗೆ ಬಿದ್ದನು. ಆಗ ದೇವರನ್ನು ತೋರಿಸುವ ವಿಷಯವಾಗಿ ನಾಮದೇವನು ಆತನನ್ನು ಪ್ರಾರ್ಥಿಸಿದನು. ಆದರೆ ಸಾವತಮಾಳಿಯು ಅದ್ವೈತಾನಂದದಲ್ಲಿ ಮಗ್ನನಾದ್ದರಿಂದ ನಾಮದೇವನಿಗೆ ಉತ್ತರವನ್ನೇ ಕೊಡಲಿಲ್ಲ. ಈ ಲಕ್ಷಣದಿಂದ ಪಾಂಡುರಂಗನು ಸಾವತಮಾಳಿಯ ಹೃದಯದಲ್ಲಿಯೇ ಇರುವನೆಂದು ತರ್ಕಿಸಿ, ನಾಮದೇವನು ಸಾವತಮಾಳಿಯನ್ನು ಬಹುವಿಧವಾಗಿ ಪ್ರಾರ್ಥಿಸತೊಡಗಿದನು. ಆದರೂ ಸಾವತಮಾಳಿಯು ನಾಮದೇವನಿಗೆ ಯಾವ ಮಾತನ್ನೂ ಆಡಲಿಲ್ಲ. ತನ್ನ ಭಕ್ತನ ಈ ದೀನವಾಣಿಯನ್ನು ಕೇಳಿ ಪಾಂಡುರಂಗನು ಹೊರಗೆ ಬರುವ ಸಾಹಸ ಮಾಡಹತ್ತಿದನು. ಆದರೆ ಬಲವಾದ ಮುಳ್ಳುಗಳಿಂದ ತನ್ನನ್ನು ತಾನೇ ಬಂಧಿಸಿಕೊಂಡ ಕೀಟಕದಂತೆ ಪಾಂಡುರಂಗನ ಅವಸ್ಥೆಯಾದ್ದರಿಂದ ಅವನು ಹೊರಗೆ ಬಾರದಾದನು. ಆಗ ಸಾವತಮಾಳಿಯು ಪುನಃ ತನ್ನ ಹೊಟ್ಟೆಯನ್ನು ಸೀಳಿ ದೇವರನ್ನು ಹೊರಗೆ ಬಿಟ್ಟನು. ನಾಮದೇವನು ಪರಮಾನಂದಪಟ್ಟು ಪಾಂಡುರಂಗನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಜ್ಞಾನದೇವನೂ ಪಾಂಡುರಂಗನನ್ನು ಬಿಗಿಯಾಗಿ ಅಪ್ಪಿಕೊಂಡನು. ಸಾವತಮಾಳಿಯ ಈ ಅಭೇದಭಕ್ತಿಯನ್ನೂ ಆತನ ಭಕ್ತಿಯ ಮಹಿಮೆಯನ್ನೂ ನೋಡಿ, ಜ್ಞಾನದೇವನೂ ನಾಮದೇವನೂ ಆತನ ಧನ್ಯವಾದವನ್ನು ಮಾಡಿದರು.

ಬಳಿಕ ಪಾಂಡುರಂಗನು ನಾಮದೇವ ಜ್ಞಾನದೇವರೊಡನೆ ಲಹೂಳಕ್ಕೆ ಹೋದನು. ಅಲ್ಲಿ ಕೂರ್ಮದಾಸರು ಅಖಂಡವಾದ ಹರಿಭಜನೆಯಲ್ಲಿ ಮಗ್ನರಾಗಿದ್ದರು. ಪಾಂಡುರಂಗನು ಕೂರ್ಮದಾಸರನ್ನು ಆಲಿಂಗಿಸಲು, ಅವರು ಎಚ್ಚತ್ತು ನೋಡುವಷ್ಟರಲ್ಲಿ ರುಕ್ಮಿಣೀರಮಣನು ಅವರಿಗೆ ಕಂಡನು. ತಮ್ಮ ಪ್ರಾರ್ಥನೆಗೆ ಕಿವಿಗೊಟ್ಟು ಪಾಂಡುರಂಗನು ಧಾವಿಸಿ ಬಂದದ್ದಕ್ಕಾಗಿ ಅವರಿಗಾದ ಆನಂದವನ್ನು ಪಾಮರನಾದ ನಾನು ಏನು ವರ್ಣಿಸಲಿ? ಆಗ ಕೂರ್ಮದಾಸರು ಪ್ರೇಮಾಶ್ರುಗಳಿಂದ ಆ ಭಕ್ತವತ್ಸಲನಾದ ಪಾಂಡುರಂಗನ ಚರಣಕಮಲಗಳನ್ನು ತೊಳೆದರು. ದೇವ-ಭಕ್ತರಿಬ್ಬರಿಗೂ ಪರಮಾನಂದವಾಯಿತು. ಆಗ ದೇವರು ದಾಸನನ್ನು ಕುರಿತು—ಏನಾದರೂ ವರಗಳನ್ನು ಬೇಡಿಕೋ, ಎಂದು ನುಡಿದನು. ನಿರಿಚ್ಛರೂ

ದೇವದರ್ಶನದಿಂದ ಪೂರ್ಣಮನೋರಥವುಳ್ಳವರೂ ಆದ ಆ ಕೂರ್ಮದಾಸರು ಯಾವ ವರವನ್ನೂ ಬೇಡದೆ, ಪಾಂಡುರಂಗನಿಗೆ—"ದಯಾಲುವೇ, ನೀನು ಇಲ್ಲಿಯೇ ಅಕ್ಷಯ್ಯವಾಗಿ ವಾಸಿಸಿರು." ಎಂದು ಪ್ರಾರ್ಥಿಸಿದರು. ಪ್ರಿಯಭಕ್ತನ ಮಾತಿಗೆ ದೇವರು ಒಪ್ಪಿಕೊಂಡು 'ಲಹೂಳ' ಗ್ರಾಮದಲ್ಲಿಯೇ ನಿಂತುಕೊಂಡನು. ಈ ಸದ್ಭಕ್ತರ ಪುಣ್ಯದಿಂದ ಲಹೂಳವು ಪ್ರತಿ ಪಂಢರಪುರಿಯಾಗಿ ಮೆರೆಯಹತ್ತಿತು. ಕೂರ್ಮದಾಸರ ಭಕ್ತಿಗೆ ಮೆಚ್ಚಿ ಪಾಂಡುರಂಗನು ಲಹೂಳದಲ್ಲಿಯೇ ವಾಸಮಾಡಿದ್ದನ್ನು ಕೇಳಿ ಹರಿಭಕ್ತರು ಕೂರ್ಮದಾಸರ ಜಯಜಯಕಾರ ಮಾಡಿದರು. ಅಂದಿನ ಅವರ ಆನಂದವು ಮೇರೆದಪ್ಪಿತ್ತು!

ಪ್ರಿಯ ವಾಚಕರೇ, ನೋಡಿದಿರಾ! ಕೂರ್ಮದಾಸರ ಭಕ್ತಿಯ ಮಹಿಮೆಯನ್ನು! ಎಂಥ ನಿಸ್ಸೀಮವಾದ ಭಕ್ತಿಯಿದು! ಇಂಥ ಮಹಾತ್ಮರೇ ನಿಜವಾದಭಕ್ತರಲ್ಲವೇ? ಇಂಥವರೇ ನಿಜವಾದ ಸತ್ಪುರುಷರು; ಇವರೇ ನಿಜವಾದ ಲೋಕೋದ್ಧಾರಕರು. ಈ ಮಹಾನುಭಾವರ ಚರಿತ್ರದಿಂದ ಪಾಮರರಾದ ನಾವು ಹಲವು ಸಂಗತಿಗಳನ್ನು ಕಲಿತುಕೊಳ್ಳಬಹುದಾಗಿದೆ. ನಾಲ್ಕು ತಿಂಗಳುಗಳವರೆಗೆ ಪಥಶ್ರಮದ ತಾಪವನ್ನು ಸಹಿಸಿದ ಮೇಲೆಯೇ ಪಾಂಡುರಂಗನು ಕೂರ್ಮದಾಸರಿಗೆ ಪ್ರತ್ಯಕ್ಷ ದರ್ಶನ ಕೊಟ್ಟಿದ್ದನ್ನು ನೋಡಿದರೆ, ದೇಹ ದಂಡನದ ಹೊರತು ಇಷ್ಟಸಿದ್ಧಿಯಾಗದೆಂಬದು ಸ್ಪಷ್ಟವಾಗುತ್ತದೆ. ಕೂರ್ಮದಾಸರಲ್ಲಿದ್ದ ಕಷ್ಟಾಳುತನವೂ ದೃಢತರವಾದ ಪ್ರಯತ್ನಬುದ್ಧಿಯೂ, ಅಗಾಧವಾದ ಈಶ್ವರೀ ನಿಷ್ಠೆಯೂ ಸದ್ಭಕ್ತರೆಂಬ ಅವರ ಶ್ರೇಷ್ಠ ಪದವಿಗೆ ಕಾರಣೀಭೂತವಾದ್ದರಿಂದ, ಕಾರ್ಯಸಾಧಕರಿಗೆ ಇಂಥ ಅಮೂಲ್ಯ ಗುಣಗಳ ಅವಶ್ಯಕತೆಯು ಎಷ್ಟೆಂಬದು ವ್ಯಕ್ತವಾಗುವಂತಿದೆ. ಕೂರ್ಮದಾಸರು ಪಂಢರಪುರಕ್ಕೆ ಹೋಗುವ ಇಚ್ಛೆಯನ್ನು ತೋರಿಸಿದಾಗ ಆದ ಉಪಹಾಸದಿಂದ ಭಗ್ನಮನೋರಥರಾಗದೆ ಆ ಮಹಾತ್ಮರು ಪ್ರಬಲವಾದ ಆತ್ಮನಿಷ್ಠೆ, ದೈವನಿಷ್ಠೆಗಳಿಂದಲೇ ತಮ್ಮ ಶ್ರೇಷ್ಠತಮ ಕಾರ್ಯವನ್ನು ಸಾಧಿಸಿದರೆಂಬದನ್ನು ನಾವು ಮರೆಯತಕ್ಕದ್ದಲ್ಲ.



# ಗೋರಾಕುಂಬಾರ.



ಕಲಿಯುಗದಲ್ಲಿ ಭಕ್ತರ ಮಹಿಮೆಗಳನ್ನು ತೋರಿಸಲಿಚ್ಛಿಸಿ, ಭಗವಂತನು ವಾಲ್ಮೀಕಾದಿ ಮಹರ್ಷಿಗಳಿಗೆ, ಭೂಲೋಕದಲ್ಲಿ ಅವತರಿಸಲಿಕ್ಕೆ ಆಜ್ಞಾಪಿಸಿದ್ದನ್ನೂ, ಆ ಮಹಾತ್ಮರು ಅವತರಿಸಿ, ಲೋಕೋದ್ಧಾರಾರ್ಥವಾಗಿ ಹಲವು ಲೀಲೆಗಳನ್ನು ಪ್ರಕಟಿಸಿದ್ದನ್ನೂ ಭಕ್ತಿವಿಜಯದ ಆರಂಭದ ಕಥೆಗಳನ್ನೋದಿದ ವಾಚಕರು ಅರಿತಿರುವರಷ್ಟೇ; ಆ ಪುಣ್ಯಶ್ಲೋಕಿಗಳು ಜಾತಿಗಳ ನೀಚೋಚ್ಚ ಭೇದಗಳನ್ನೆಣಿಸದೆ, ಕಾಲೋಚಿತವಾಗಿ ಆಯಾಜಾತಿಗಳಲ್ಲವತರಿಸಿ ಸಂತಧರ್ಮವನ್ನು ಪ್ರಕಟಿಸಿದರು.! ಕಬೀರ-ಕಮಾಲರಂಥ ಸತ್ಪುರುಷರ ರೂಪದಿಂದ ಮ್ಲೇಂಛ ಜಾತಿಯಲ್ಲಿ ಸಹ ಉದಯಕ್ಕೆ ಬಂದರು! ರಾಕಾಕುಂಬಾರ-ಗೋರಾಕುಂಬಾರರಂಥ ಅಲೌಕಿಕ ಪುರುಷರಾಗಿ, ಸಾಮಾನ್ಯ ಜಾತಿಯಲ್ಲಿ ಹುಟ್ಟಿ ಭಗವದ್ಭಕ್ತಿಯ ಮಹಿಮೆಯನ್ನು ಜನರ ನಿದರ್ಶನಕ್ಕೆ ತಂದುಕೊಟ್ಟರು. ಮುಕ್ತಿಗೆ ಭಕ್ತಿಯೇ ಕಾರಣವೆಂಬದನ್ನೂ ಭಗವಂತನ ಕೃಪೆಗೆ ಜಾತಿಯ ನಿರ್ಬಂಧವು ಇಲ್ಲೆಂಬದನ್ನೂ ಈ ಮಹಾತ್ಮರು ತೋರಿಸಿಕೊಟ್ಟರು!! ಇಂಥ ಸಜ್ಜನರ ಮಾಲಿಕೆಯಲ್ಲಿದ್ದ ಪ್ರಸ್ತುತದ ಚರಿತ್ರನಾಯಕನಾದ ನಮ್ಮ ಗೋರಾಕುಂಬಾರನು ಎಂಥ ಜ್ಞಾನಿಯಾಗಿದ್ದನೆಂಬದನ್ನು ವಾಚಕರು ಕೆಳದರಡಿಯಲ್ಲಿ ಬರೆದ ಅವನ ಚರಿತ್ರದಿಂದ ಅರಿತುಕೊಳ್ಳಬಹುದು.

"ಸೆಟ್ಟಿ ಇಳಿದದ್ದೇ ಪಟ್ಟಣ"ವೆಂಬ ನಾಣ್ಣುಡಿಯು ಸುಳ್ಳಲ್ಲ; ತಾರಢೋಕಿ ಎಂಬ ಗ್ರಾಮವು ಸಣ್ಣದೊಂದು ಹಳ್ಳಿಯಾಗಿದ್ದರೂ ಅಲ್ಲಿ ಪ್ರತಾಪಿಯಾದ ನಮ್ಮ ಗೋರೋಬನು ಹುಟ್ಟಿ ಬಂದದ್ದರಿಂದ ಪವಿತ್ರಸ್ಥಳವೆನಿಸಿತು. ಗೋರೋಬನು ಆ ಹಳ್ಳಿಯ ವತನದಾರನಿದ್ದನು. ಅವನ ಮನೆತನದ ಸ್ಥಿತಿಯು ಬಹು ಚೆನ್ನಾಗಿತ್ತು. ಅವನಿಗೆ ಧನ-ಧಾನ್ಯಾದಿಗಳಿಗಾಗಲಿ, ಲೌಕಿಕ ಮಾನಮರ್ಯಾದೆಗಳಿಗಾಗಲಿ ಕೊರತೆಯಿದ್ದಿಲ್ಲ. ಎಲ್ಲತರದ ಅನುಕೂಲತೆಯೂ ಅವನಿಗಿತ್ತು.

ಹೀಗಿದ್ದರೂ ಗೋರೋಬನು ಒಳ್ಳೇ ಹರಿಭಕ್ತನಾಗಿದ್ದನು. ಭಗವಂತನಲ್ಲಿಯೇ ಆತನ ಆಸಕ್ತಿಯಿತ್ತಲ್ಲದೆ ವಿಷಯಗಳಲ್ಲಿ ಇದ್ದಿಲ್ಲ. ಈ ಭಕ್ತವರನು

ಕೇವಲ ವಿರಕ್ತನಾಗಿದ್ದನು. ಉಣ್ಣುವಾಗೂ, ತಿನ್ನುವಾಗೂ, ಕೂಡ್ರುವಾಗೂ, ಆ ಮಹಾತ್ಮನು ಹರಿಯನ್ನಲ್ಲದೆ, ಅನ್ಯವಿಷಯವನ್ನು ಚಿಂತಿಸುತ್ತಿರಲಿಲ್ಲ. ಅವನು ಧನಿಕನಿದ್ದರೂ ಹೆಮ್ಮೆಪಡದೆ, ತಮ್ಮ ಮನೆತನದ ಸಿರಿವಂತಿಕೆಗೆ ಮೂಲಕಾರಣ ವಾದ ತಮ್ಮ ಉದ್ಯೋಗವನ್ನು ಯಥಾಪ್ರಕಾರವಾಗಿ ತನ್ನ ಕೈಮುಟ್ಟಿ ಮಾಡುತ್ತಿದ್ದನು. ಬೇಕಾದಷ್ಟು ಜನ ಸೇವಕರನ್ನು ಇಟ್ಟುಕೊಳ್ಳಲಿಕ್ಕೆ ಅನುಕೂ ಲವಿದ್ದರೂ ನಿರುದ್ಯೋಗಿಯಾಗುವದು ಮಹಪಾಪವೆಂದು ತಿಳಿದು ಗೋರೋ ಬನು ಯಾವಾಗಲೂ ಉದ್ಯೋಗದಲ್ಲಿ ರತನಾಗಿರುತ್ತಿದ್ದನು; ಹೀಗೆ ಆ ನರೋತ್ತ ಮನು ಉದ್ಯೋಗತತ್ಪರನಾಗಿದ್ದರೂ ಅವನು ಹರಿಸ್ಮರಣೆಯನ್ನು ಮರೆತಿರಲಿಲ್ಲ. ಅವನ ವಾಣಿಯು ಸದಾ ಹರಿನಾಮವನ್ನೇ ಪಠಣಮಾಡುತ್ತಿತ್ತು!

ಗೋರೋಬನ ಮನೆಯಲ್ಲಿ ಗೋರೋಬನು, ಆತನ ಹೆಂಡತಿ, ಆತನ ದೊಂದು ಚಿಕ್ಕಮಗು ಹೀಗೆ ಮೂರೇ ಜನರಿದ್ದರು. ಆದ್ದರಿಂದ ಕುಂಬಾರಿಕೆಯ ಪ್ರತಿಯೊಂದು ಕೆಲಸವನ್ನು ಗೋರೋಬನು ತಾನೇ ಮಾಡುತ್ತಿದ್ದನು. ಮನೆ ಯೊಳಗಿನ ಪ್ರಪಂಚದ ಎಲ್ಲ ಕೆಲಸಗಳನ್ನು ಅವನ ಹೆಂಡತಿಯು ಮಾಡುತ್ತಿ ದ್ದಳು. ಇಂತಿರಲು ಒಂದುದಿನ ಗೋರೋಬನು ಹದಗೊಳಿಸುವದಕ್ಕಾಗಿ ನೆನೆ ಹಾಕಿದ್ದ ಮಣ್ಣನ್ನು ತುಳಿಯುತ್ತ ನಿಂತುಕೊಂಡಿದ್ದನು; ಆತನ ಹೆಂಡತಿಯು ನೀರು ತರಲು ಜಲಾಶಯಕ್ಕೆ ಹೋಗಿದ್ದಳು; ಚಿಕ್ಕಮಗುವು ಗೋರೋಬನ ಹತ್ತರ ಹುಸಿಯೊಳಗೆ ಆಡುತ್ತಿತ್ತು. ಮಣ್ಣನ್ನು ತುಳಿಯುತ್ತಿದ್ದ ಗೋರೋ ಬನು ಭಗವಧ್ಯಾನದಲ್ಲಿ ಮಗ್ನನಾಗಿದ್ದನು. ಆತನ ಅಂತಃಕರಣವು ಪರಮಾತ್ಮನ ಚರಣಕಮಲದಲ್ಲಿ ರಮಿಸಿಹೋದ್ದರಿಂದ ಅವನಿಗೆ ದೇಹಭಾನವೇ ಉಳಿದಿದ್ದಿಲ್ಲ. ಹೀಗೆ ಗೋರೋಬನ ಸ್ಥಿತಿಯಾಗಿರಲು, ಆ ಚಿಕ್ಕಮಗುವು ಹರಿದಾಡುತ್ತ ಆ ಕೆಸರಿನ ಹತ್ತರ ಬಂದಿತು. ದೇಹಭಾನವಿಲ್ಲದೆ ಸುಮ್ಮನೆ ಯಂತ್ರದಂತೆ ಕೆಸರು ತುಳಿಯುತ್ತಿದ್ದ ಗೋರೋಬನು, ಬಹಿರ್ವ್ಯಾಪಾರಗಳನ್ನರಿಯದೆ ಕೆಸರನ್ನು ಏರು ಹಾಕುವಾಗ ಕೆಸರಿನ ಸಂಗಡ ಆ ಮಗವನ್ನೂ ತುಳಿದುಬಿಟ್ಟನು! ಮಗುವು ತನ್ನ ಹತ್ತರ ಆಡುತ್ತಿರುವದು ಆತನಿಗೆ ಗೊತ್ತು ಇಲ್ಲದ್ದರಿಂದಲೂ, ಭಗವಧ್ಯಾ ನದಿಂದ ಅವನ ದೇಹದ ಪರಿವಿಯು ತಪ್ಪಿದ್ದರಿಂದಲೂ ಅವನಿಂದ ಇಂಥ ಅನ ರ್ಥವು ಸಂಘಟಿಸಿತು!

ಮುಂದೆ ಸ್ವಲ್ಪ ಹೊತ್ತಿನ ಮೇಲೆ ಗೋರೋಬನ ಹೆಂಡತಿಯು ನೀರು ತುಂಬಿಕೊಂಡು ಮನೆಗೆ ಬಂದಳು ಆಕೆಯು ಕೊಡವನ್ನಿಳಿಸಿ ಮಗುವನ್ನು

ನೋಡಿದಳು. ಮಗುವು ಎಲ್ಲಿಯೂ ಕಾಣಲಿಲ್ಲ. ಹಿತ್ತಲ ಮೊಂಚಿಗಳನ್ನು ಹುಡುಕಿದಳು. ಆದರೂ ವ್ಯರ್ಥ! ಕಡೆಗೆ ಅವಳು ಗಂಡನನ್ನೇ ಕೇಳಬೇಕೆಂದು ಗೋರೋಬನ ಬಳಿಗೆ ಬಂದಳು. ಆಗ ಆಕೆಯ ದೃಷ್ಟಿಯು ಸಹಜವಾಗಿ ಆ ಕೆಸರಿನ ರಾಶಿಯ ಕಡೆಗೆ ಹೋಯಿತು. ಕೂಸು ಕೆಸರಿನಲ್ಲಿ ತುಳಿಯಲ್ಪಟ್ಟು ಚಿಪ್ಪಾಡಿಯಾದದ್ದನ್ನು ಆಕೆಯು ಕಂಡಳು. ಆಗ ಅವಳು ಘುರ್ರನೆ ಭೂಮಿಗಿಳಿದು ಒಮ್ಮೆಲೆ ಚಿಟ್ಟನೆ ಚೀರಿದಳು. ಹೊಟ್ಟೆಯ ಕರುಳಿನ ಕೊಲೆಯನ್ನು ಕಂಡು ಯಾವ ತಾಯಿಯ ಹೃದಯವು ದುಃಖಮಯವಾಗಲಿಕ್ಕಿಲ್ಲ? ಅದು ಸ್ವಾಭಾವಿಕವೇ ಆಗಿರುವದು. ಗೋರೋಬನ ಹೆಂಡತಿಯು ಪುತ್ರವಾತ್ಸಲ್ಯದಿಂದ ವ್ಯಾಕುಲಳಾಗಿ, ಗಂಡನಿಗೆ ಹಲವು ಬಗೆಯಿಂದ ದೂರಹತ್ತಿದಳು. ಆಗ ಆಕೆಯು ದುಃಖಾತಿರೇಕದಿಂದ—"ಹಗಲೆಲ್ಲ ದೇವರು ದೇವರು ಎಂದು ಅನ್ನುತ್ತ ಇವರು ಮನೆಯನ್ನು ಹಾಳುಮಾಡಿಬಿಟ್ಟರು. ಅಯ್ಯೋ ನನ್ನ ಮಗುವೇ, ವ್ಯರ್ಥವಾಗಿ ಸತ್ತುಹೋದೆಯಲ್ಲ!" ಎಂದು ಆಕ್ರೋಶಮಾಡತೊಡಗಲು, ಆಕೆಯ ಧ್ವನಿಗೆ ಗೋರೋಬನು ಎಚ್ಚತ್ತನು. ಅವನು ಕಣ್ಣು ತೆರೆದು ನೋಡುತ್ತಾನೆ; ಎದುರಿಗೆ ಹೆಂಡತಿಯು ಒಂದೇಸವನೆ ಶೋಕಮಾಡುತ್ತಿರುವದು ಕಂಡುಬಂತು. ಆಗ ಗೋರೋಬನಿಗೆ ಸಿಟ್ಟು ಬಂದಿತು. ಹೃದಯದಲ್ಲಿದ್ದ ರುಕ್ಮಿಣೀ ರಮಣನ ಚರಣಗಳನ್ನು ಅಂತರಿಸಲಿಕ್ಕೆ ಈಕೆಯೇ ಕಾರಣಳಾದಳೆಂದು ತಿಳಿದು ಗೋರೋಬನು ಕೈಯಲ್ಲಿ ಚಕ್ರದಂಡವನ್ನು ತಕ್ಕೊಂಡು ಹೆಂಡತಿಯನ್ನು ಹೊಡೆಯ ಹೋದನು. ಗಂಡನ ಈ ಅವಿಚಾರತನವನ್ನು ನೋಡಿ, ಆ ಸ್ತ್ರೀಯು ಗಂಡನನ್ನು ಕುರಿತು—ಹಾ! ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಡಬೇಡಿರಿ! ನನ್ನ ಮೈ ಮುಟ್ಟಿದರೆ ನಿಮಗೆ ವಿಠೋಬನ ಆಣೆಯಿರುವದು, ಎಂದು ಅಂದಳು. "ವಿಠೋಬನ ಆಣೆ" ಎಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಗೋರೋಬನ ಸಿಟ್ಟು ಶಾಂತವಾಯಿತು. ಅವನು ಕೈಯೊಳಗಿನ ಚಕ್ರದಂಡವನ್ನು ಚಲ್ಲಿಕೊಟ್ಟು ಒಂದು ಏಕಾಂತ ಸ್ಥಳಕ್ಕೆ ಹೋಗಿ ಅಲ್ಲಿ ಹರಿಭಜನೆ ಮಾಡುತ್ತ ಕುಳಿತುಕೊಂಡನು.

ಗೋರೋಬನ ಹೆಂಡತಿಯ ಆಕ್ರೋಶಕ್ಕೆ ಓಣಿಯೊಳಗಿನ ಜನರು ಧಾವಿಸಿ ಬಂದರು. ಅವರಿಗೆ ನಡೆದ ಸ್ಥಿತಿಯು ಗೊತ್ತಾಗಲು, ಹಲವರು ಹಲವು ಬಗೆಯಿಂದ ಗೋರೋಬನನ್ನು ನಿಂದಿಸಹತ್ತಿದರು. ಕೆಲವರು—ಗೋರೋಬನು ಎಂಥ ಚಾಂಡಾಲನು! ಎಷ್ಟು ನಿರ್ದಯನು! ಇವನೇನೋ ಭಗವದ್ಭಕ್ತನಂತೆ; ಸುಟ್ಟಿತು ಇವನ ಭಕ್ತಿಯು! ಬಂಗಾರದಂಥ ಮಗುವನ್ನು ತುಳಿದು ಕೊಲ್ಲಲಿಕ್ಕೆ

ಇವನಿಗೆ ಹುಚ್ಚು ಹಿಡಿದದೆಯೋ! ಸಾಕು, ಹೆಂಡಿರು ಮಕ್ಕಳ ಗೋಳು ಕಟ್ಟಿ ಕೊಳ್ಳುವ ಇಂಥ ಮರುಳರ ಸಂಗತಿಯು ಸಾಕು! ಎಂದೂ, ಬೇರೆ ಹಲವರು ಇವನಿಗೇನಾಯಿತಪ್ಪಾ, ಕಾಲೊಳಗೆ ಕೂಸು ಬಂದದ್ದು ತಿಳಿಯಲಿಲ್ಲವೇ? ಇಂಥ ಮೂರ್ಖರಿಗೆ ದೇವರು ಮಕ್ಕಳನ್ನಾದರೂ ಯಾಕೆ ಕೊಡುವನೋ? ಎಂದೂ ಮನಬಂದಂತೆ ಆಡಿಕೊಳ್ಳಹತ್ತಿದರು. ಅವರಲ್ಲಿ ಯಾರಿಗೂ ಗೋರೋಬನ ಸದ್ವೃತ್ತಿಯ ಅನುಭವವಿದ್ದಿಲ್ಲ. ಆದ್ದರಿಂದ ಅವರು ಸಿಕ್ಕಹಾಗೆ ಮಾತಾಡುತ್ತಿದ್ದರು. ಅವರ ಆ ದುರ್ಭಾಷಣಗಳಿಂದ ಗೋರೋಬನು ಸಿಟ್ಟಿಗೇಳಲಿಲ್ಲ; ನಡೆದ ಸಂಗತಿಯಿಂದ ಅವನಿಗೆ ದುಃಖವೂ ಆಗಲಿಲ್ಲ. ಹೊಟ್ಟೆಯ ಮಗುವು ಸತ್ತದ್ದಕ್ಕೆ ಅಸಮಾಧಾನಪಡದ ಆ ಸತ್ವಶಾಲಿಯು ದುರ್ಜನರ ನಿಂದೆಗೆ ಸೊಪ್ಪು ಹಾಕುವನೇ? ಆ ಧೀರನು ಸತ್ವಗೆಡದೆ ಅಖಂಡವಾದ ಶಾಂತಿಯನ್ನು ತಾಳಿ, ಹರಿಭಜನೆಯಲ್ಲಿಯೇ ಮಗ್ನನಾದನು. ಗೋರೋಬನ ಈ ವಿಲಕ್ಷಣ ವೃತ್ತಿಯನ್ನು ನೋಡಿ ಆ ಜನರು ತಮ್ಮಷ್ಟಕ್ಕೆ ತಾವೇ ಮುಖಭಂಗಿತರಾಗಿ ಸುಮ್ಮನೆ ಮನೆಗೆ ಹೊರಟುಹೋದರು.

ಈ ಮಾತಿಗೆ ಎಷ್ಟೋ ದಿವಸಗಳು ಕಳೆದು ಹೋದವು. "ನನ್ನ ಮೈ ಮುಟ್ಟಿದರೆ ನಿಮಗೆ ವಿಠೋಬನ ಆಣೆ" ಎಂದು ಹೆಂಡತಿಯು ಅಂದ ಮಾತನ್ನೇ ಗಟ್ಟಿಯಾಗಿ ಹಿಡಿದು ಗೋರೋಬನು ಹೆಂಡತಿಯನ್ನು ಮುಟ್ಟದಾದನು. ವಿಠೋಬನ ಆಣೆಯನ್ನು ಮೀರುವದು ನನ್ನಿಂದ ಎಂದೂ ಆಗಲಿಕ್ಕಿಲ್ಲೆಂದು ಆ ಭಕ್ತಶ್ರೇಷ್ಠನು ಹೆಂಡತಿಗೆ ಒಮ್ಮೆ ಸ್ಪಷ್ಟವಾಗಿ ಹೇಳಿಬಿಟ್ಟನು. ಗಂಡನ ನಿಶ್ಚಯವನ್ನು ತಿಳಿದು ಗೋರೋಬನ ಸತಿಯು ಬಹಳ ಚಿಂತೆಯಲ್ಲಿ ಬಿದ್ದಳು. ಇದ್ದ ಒಂದು ಮಗುವು ಮೃತವಾಗಿ ಹೋಯಿತು, ಮುಂದೆ ಗಂಡನಂತೂ ನನ್ನ ಸನಿಯಕ್ಕೆ ಬರುವ ಹಾಗಿಲ್ಲ; ಇನ್ನು ಏನು ಮಾಡಬೇಕು? ವಂಶಹಾನಿಯಾಗುವದಲ್ಲ. ಎಂದು ಆ ಸ್ತ್ರೀಯು ಬಹುಪರಿಯಾಗಿ ಆಲೋಚಿಸಿದಳು. ಬಳಿಕ ಅವಳು ಮನಸ್ಸಿನಲ್ಲಿ ಏನೋ ಒಂದು ನಿಶ್ಚಯ ಮಾಡಿಕೊಂಡು ಗಂಡನ ಆಜ್ಞೆಯಿಂದ ಕೆಲವು ದಿವಸಗಳವರೆಗೆ ತವರುಮನೆಗೆ ಹೋದಳು. ಆಕೆಯು ತನ್ನ ತಂದೆ ತಾಯಿಗಳ ಮುಂದೆ ತನ್ನ ದುಃಖವನ್ನು ತೋಡಿಕೊಂಡು ಉಪವರಳಾದ ತನ್ನ ತಂಗಿಯನ್ನು ಸಂತತಿಯ ಸಲುವಾಗಿ ತನ್ನ ಗಂಡನಿಗೆ ಕೊಟ್ಟು ಲಗ್ನಮಾಡಬೇಕೆಂದು ಹಟಹಿಡಿದಳು. ಮಗಳ ಸಮಾಧಾನಕ್ಕಾಗಿ ಅವರೂ ಆ ಮಾತಿಗೆ ಒಡಂಬಟ್ಟರು. ಗೋರೋಬನೂ ಈ ಎರಡನೇ ಲಗ್ನಕ್ಕೆ ಸಮ್ಮತಿಸಿದನು. ಬಳಿಕ ಗೋರೋಬನ ದ್ವಿತೀಯ ಲಗ್ನ ಸಮಾರಂಭವು ಯಥಾಸಾಂಗವಾಗಿ ನೆರವೇರಿತು.

ಅನಂತರ ಗೋರೋಬನ ಮಾವನು ಅಳಿಯನನ್ನು ಕುರಿತು—"ನನ್ನ ಇಬ್ಬರೂ ಹೆಣ್ಣುಮಕ್ಕಳನ್ನು ನಿಮ್ಮ ಪದರಿನಲ್ಲಿ ಹಾಕಿದ್ದೇನೆ. ನೀವು ಧರ್ಮದಿಂದ ಅವರ ಸಂರಕ್ಷಣೆಯನ್ನು ಮಾಡಬೇಕು. ಇಬ್ಬರೂ ಹೆಂಡಿರನ್ನೂ ಸರಿಯಾಗಿ ನಡಿಸಿಕೊಳ್ಳಬೇಕು. ಒಬ್ಬಾಕೆಯ ಸಂಗಡ ನಡೆದಂತೆಯೇ ಮತ್ತೊಬ್ಬಾಕೆಯ ಸಂಗಡ ನಡೆಯಬೇಕು. ಇದಕ್ಕೆ ಅಂತರ ಮಾಡಿದರೆ ನಿಮಗೆ ವಿಠೋಬನ ಆಣೆಯಿರುವದು" ಎಂದು ಹೇಳಿದನು. ಮಾವನ ಈ ಮಾತುಗಳನ್ನು ಕೇಳಿ ಗೋರೋಬನಿಗೆ ಒಂದು ಬಗೆಯಿಂದ ಸಮಾಧಾನವೇ ಆಯಿತು. ಆಗ ಅವನು ಮಾವನಿಗೆ—"ನಿಮ್ಮ ಅಪ್ಪಣೆಯ ಪ್ರಕಾರ ನಡಕೊಳ್ಳುವೆನು" ಎಂದು ವಚನಕೊಟ್ಟನು. ಮುಂದೆ ಕೆಲವು ದಿವಸಗಳನಂತರ ಗೋರೋಬನ ದ್ವಿತೀಯ ಪತ್ನಿಯು ಪ್ರಬುದ್ಧಳಾದಳು. ಅವನ ಹಿರಿಯ ಹೆಂಡತಿಯು—ತನ್ನ ತಂಗಿಯ ಹೊಟ್ಟೆಯಲ್ಲಿ ಯಾವಾಗ ಸಂತತಿಯಾದೀತೆಂದು ಇಚ್ಛಿಸುತ್ತಿದ್ದಳು. ಸಾಂಸಾರಿಕರಿಗೆ—ವಿಶೇಷವಾಗಿ ಹೆಂಗಸರಿಗೆ—ಸಂತತಿಯ ಹಂಬಲವು ಬಹಳವಿರುವದರಿಂದ ಅವರು ಹಾಗೆ ಅತ್ಯಾತುರ ಪಡುವದು ಸಹಜವಾಗಿರುವದು. ಅದರಂತೆ ಗೋರೋಬನ ಹೆಂಡರೂ ಬಯಸುತ್ತಿದ್ದರು. ಹೀಗಿರಲು ಮೇಲೆ ಹೇಳಿದಂತೆ ನೂತನ ಸತಿಯು ಪ್ರಬುದ್ಧಳಾಗಿ ಬಹಳ ದಿವಸಗಳು ಕಳೆದರೂ ಗೋರೋಬನು ಮಾವನ ಅಪ್ಪಣೆಯನ್ನು ಸ್ಮರಿಸಿ, ಆ ಸ್ತ್ರೀಯ ಸಮೀಪಕ್ಕೆ ಹೋಗಲಿಲ್ಲ. ಮೊದಲನೆಯ ಹೆಂಡತಿಯ ಕೂಡ ನಡೆದಂತೆಯೇ ಎರಡನೇ ಹೆಂಡತಿಯ ಸಂಗಡ ನಡೆಯತೊಡಗಿದನು. ಇದನ್ನು ಕಂಡು ಗೋರೋಬನ ಪ್ರಥಮ ಪತ್ನಿಗೆ ಸಿಟ್ಟು ಬಂದು, ಅವಳು ಗಂಡನನ್ನು ಕುರಿತು—ನಿಮ್ಮ ಮನಸಿನಲ್ಲಿ ಏನಿರುವದು? ಹೆರವರ ಹೆಣ್ಣಿನ ಗೋಳುಕಟ್ಟಿಕೊಳ್ಳಲಿಕ್ಕೆ ಈ ಎರಡನೇ ಲಗ್ನವನ್ನಾದರೂ ಯಾಕೆ ಮಾಡಿಕೊಂಡಿರಿ? ನಿಮ್ಮ ನಡತೆಯು ನಿಮಗೇ ಚಂದಕಾಣುವದು, ಎಂದಳು. ಆಗ ಗೋರೋಬನು ಹೆಂಡತಿಯ ಅಭಿಪ್ರಾಯವನ್ನು ತಿಳಿದು—ಪ್ರಿಯೇ, ಇದರಲ್ಲಿ ನನ್ನದೇನೂ ತಪ್ಪಿಲ್ಲ; ಬೇಕಾದರೆ ನಿಮ್ಮ ಅಪ್ಪನನ್ನು ಕೇಳಿಕೋ; ಅವನು ನನಗೆ ವಿಠೋಬನ ಆಣೆಯನ್ನಿಟ್ಟು ಇಬ್ಬರನ್ನೂ ಸರಿಯಾಗಿ ನೋಡಬೇಕೆಂದು ಹೇಳಿದ್ದಲ್ಲದೆ, ಒಬ್ಬಾಕೆಗೊಂದು ಮತ್ತೊಬ್ಬಾಕೆಗೊಂದು ಹೀಗೆ ಭೇದಮಾಡಬೇಡವೆಂದು ಕಟ್ಟಪ್ಪಣೆ ಮಾಡಿದ್ದಾನೆ. ಆದ್ದರಿಂದ ನಾನು ಏನು ಮಾಡಲಿ? ವಿಠೋಬನ ಆಣೆಯನ್ನು ಮುರಿಯುವದು ನನ್ನಿಂದಾಗದು! ನಿನ್ನಂತೆಯೇ ಚಿಕ್ಕಾಕೆಯನ್ನು ತಿಳಿಯುವೆನು, ಎಂದು ತನ್ನ ನಿಶ್ಚಯವನ್ನು ಹೇಳಿದನು.

ಗಂಡನ ಈ ನಿಶ್ಚಯವನ್ನು ತಿಳಿದು ಆ ಉಭಯ ಹೆಂಡರಿಗೂ ಬಹಳ ದುಃಖವಾಯಿತು. ಅವರು ತಂದೆಗೆ ದೂಷಣವನ್ನು ಕೊಟ್ಟರು. ಆದರೆ ಕೈ ಮೀರಿ ಹೋದ ಮಾತಿಗೆ ಮಾಡುತ್ತಾರೇನು? ಅವರು ತಮ್ಮ ದುರ್ದೈವಕ್ಕೆ ಹಳಿದುಕೊಂಡು ಸುಮ್ಮನಾದರು. ಹೀಗೆ ಕೆಲವು ದಿವಸಗಳು ಕ್ರಮಿಸಲು, ಆ ಅಕ್ಕತಂಗಿಯರು ಕೂಡಿ ಆಲೋಚನೆ ಮಾಡಿ, ಒಂದುದಿನ ಗೋರೋಬನು ರಾತ್ರಿಯಲ್ಲಿ ಮಲಗಿಕೊಂಡಾಗ ಅವನ ಬಳಿಗೆ ಹೋದರು. ಬಳಿಕ ಅವರು ಅವನ ಒಂದೊಂದು ಮಗ್ಗಲಿಗೆ ಮಲಗಿಕೊಂಡು, ಅವನ ಒಂದೊಂದು ಕೈಯನ್ನು ತಕ್ಕೊಂಡು ತಮ್ಮ ಎದೆಯ ಮೇಲೆ ಇಟ್ಟುಕೊಂಡರು. ಅಷ್ಟರಲ್ಲಿ ಗೋರೋಬನು ಎಚ್ಚತ್ತನು. ಅವನಿಗೆ ಹೆಂಡರ ಈ ಕೃತಿಯು ಗೊತ್ತಾಗಲಿಲ್ಲ. ನಿದ್ದೆ ಹತ್ತಿ ಮಲಗಿದಾಗ ತನ್ನ ಕೈಗಳಿಂದ ವಿಠೋಬನ ಆಣೆಯು ಮುರಿಯಲ್ಪಟ್ಟಿತೆಂದು ಭಾವಿಸಿ ಶಸ್ತ್ರದಿಂದ ತನ್ನ ಎರಡೂ ಕೈಗಳನ್ನು ಕಡಿದುಕೊಂಡು ಬಿಟ್ಟನು. ಹೀಗೆ ಬರಬರುತ್ತ ಅನರ್ಥವಾಗುತ್ತಲೇ ನಡೆದದ್ದನ್ನು ನೋಡಿ ಆ ಉಭಯ ಸ್ತ್ರೀಯರು ಹತಾಶರಾದರು. ಸಂತತಿಯ ಸಲುವಾಗಿ ಮಾಡಿದ ಯತ್ನಗಳೆಲ್ಲ ನಿಷ್ಫಲವಾಗಿ ತಿರುಗಿ ಅವೇ ನಮ್ಮ ದುಃಖಕ್ಕೆ ಕಾರಣವಾದವೆಂದು ಆ ಅಬಲೆಯರು ಗೋಳಿಟ್ಟರು. ಅವರಲ್ಲಿ ಸಂತತಿಯ ಚಿಂತೆಯೂ, ಗಂಡನು ಊನವಾದ ಚಿಂತೆಯೂ, ಸಂಸಾರ ಸಾಗಿಸುವ ಚಿಂತೆಯೂ ಒಮ್ಮೆಲೆ ಮುಗಿಬಿದ್ದು ಅವರ ದುಃಖವನ್ನು ಹೆಚ್ಚಿಸಿದವು. ಈ ಚಿಂತಾತ್ರಯಗಳಿಂದ ಅವರು ನಿರ್ಜೀವಿಗಳಾದರು. ಅವರಲ್ಲಿ ಸಮಾಧಾನವೆಂಬದು ಎಳ್ಳಷ್ಟು ಸಹ ಉಳಿಯದೆ ಅದರ ಸ್ಥಳವನ್ನು ತಳಮಳವು ಮಾತ್ರ ವ್ಯಾಪಿಸಿಕೊಂಡಿತು. ಹೀಗೆ ಉಭಯಹೆಂಡರೂ ಶೋಕಾಗ್ನಿಯಿಂದ ಬೆಂದು ಬೆಂಡಾಗುತ್ತಿರುವದನ್ನು ಕಂಡು ಗೋರೋಬನು ಒಂದು ದಿನ ಸಮಾಧಾನದಿಂದ ಹಿರಿಯ ಹೆಂಡತಿಯನ್ನು ಕುರಿತು—ಪ್ರಿಯೇ, ನೀವು ಇಬ್ಬರೂ ಯಾಕೆ ಇಷ್ಟು ದುಃಖಪಡುತ್ತಿರುವಿರಿ? ಚಿಂತಾಮಣಿಯನ್ನು ಧರಿಸಿದವರು ಚಿಂತೆ ಮಾಡುವರೇ? ಹುಚ್ಚೀ, ನಿನಗೆ ಇಷ್ಟು ಯಾಕೆ ತಿಳಿಯಬಾರದು? ಭಕ್ತವತ್ಸಲನಾದ ಪಾಂಡುರಂಗನ ದಯವಿರುತ್ತಿರಲು, ನಿಮಗೆ ಸಂಸಾರದ ಚಿಂತೆಯೂ, ಸಂತತಿಯ ಚಿಂತೆಯೂ ಯಾಕೆ? ಕಾಲಲ್ಲಿ ನಿಧಿಯನ್ನು ತುಳಿಯುತ್ತ ಮನೆ ಮನೆ ಬಿಕ್ಕೆಬೇಡುವ ಹತಭಾಗ್ಯರಂತೆ ನಿಮ್ಮ ಅವಸ್ಥೆಯಾಗಿರುವದು, ಎಂದು ನಾಲ್ಕು ಉಪದೇಶಪರಮಾತುಗಳನ್ನು ಹೇಳಿ ಆ ಉಭಯತರನ್ನು ಸಮಾಧಾನಗೊಳಿಸಿದನು.

ಮುಂದೆ ಕೆಲವು ದಿವಸಗಳ ಮೇಲೆ ಆಷಾಢ ಶು|| ೧೧ಯ ಪುಣ್ಯದಿವಸವು ಪ್ರಾಪ್ತವಾಯಿತು. ಗೋರೋಬನು ಇಬ್ಬರೂ ಹೆಂಡರನ್ನು ಸಂಗಡ ಕರಕೊಂಡು ಪಂಢರಪುರಕ್ಕೆ ಹೋದನು. ಅವನು ಮೊದಲು ದೇವದರ್ಶನಕ್ಕೆಂದು ಪಾಂಡುರಂಗನ ದೇವಾಲಯವನ್ನು ಪ್ರವೇಶಮಾಡಿದನು. ಆಗ ಗುಡಿಯಲ್ಲಿ ನಾಮದೇವನ ಕೀರ್ತನವು ನಡೆದಿತ್ತು. ದೇವರಿಗೆ ನಮಸ್ಕಾರವನ್ನು ಮಾಡಿ ಗೋರೋಬನು ಕೀರ್ತನಶ್ರವಣಕ್ಕೆ ಕುಳಿತನು. ಜ್ಞಾನದೇವಾದಿ ಮಹಾಜ್ಞಾನಿಗಳು ಆ ಕೀರ್ತನಸಭೆಯಲ್ಲಿ ಕುಳಿತುಕೊಂಡಿದ್ದರು. ಕೀರ್ತನಕ್ಕೆ ಒಳ್ಳೇರಂಗು ಬಂದಿತ್ತು. ಆಗ ಕೀರ್ತನಕಾರನಾದ ನಾಮದೇವನು ಶ್ರೋತೃಸಮುದಾಯಕ್ಕೆ ಕೈಗಳನ್ನು ಮೇಲಕ್ಕೆತ್ತಿ ಚಪ್ಪಾಳೆ ಬಾರಿಸಲು ಸೂಚಿಸಿದನು. ಕೂಡಲೆ ಶ್ರೋತೃಸಮುದಾಯವು ಅದರಂತೆ ಮಾಡಿತು. ಎಲ್ಲರೂ ಕೈಗಳನ್ನು ಮೇಲಕ್ಕೆ ಎತ್ತಿದ್ದನ್ನು ಕಂಡು ಗೋರೋಬನು ನಾಚಿಕೊಂಡನು. ನನಗೂ ಕೈಗಳಿದ್ದರೆ, ನಾನೂ ಈ ಸಮಯದಲ್ಲಿ ಕೈಗಳನ್ನು ಮೇಲಕ್ಕೆತ್ತಿ ಭಜನೆ ಮಾಡುತ್ತಿದ್ದೆನಲ್ಲ! ಎಂದು ಅವನಿಗೆ ಬಹಳ ವ್ಯಸನವಾಯಿತು. ಗೋರೋಬನ ಈ ಇಚ್ಛೆಯನ್ನು ತಿಳಿದು ಪಾಂಡುರಂಗನು ಅವನ ಮೇಲೆ ಪ್ರಸನ್ನನಾದನು. ಹೀಗೆ ಭಗವಂತನ ಕೃಪೆಯಾಗಲು, ಗೋರೋಬನ ಕೈಗಳು ಒಮ್ಮಿಂದೊಮ್ಮೆ ಚಿಗಿತವು. ಅವನು ಎಲ್ಲರೊಡನೆ ಚಪ್ಪಾಳೆಯನ್ನು ಬಾರಿಸ ಹತ್ತಿದನು. ಈ ಅದ್‌ಭೂತವನ್ನು ನೋಡಿ ಅಲ್ಲಿ ನೆರೆದ ಸಂತರಿಗೆಲ್ಲ ಆಶ್ಚರ್ಯವೆನಿಸಿತು.

ಈ ಮೇರೆಗೆ ಗಂಡನ ಕೈಗಳು ಚಿಗಿತದ್ದನ್ನು ಕಂಡು, ಗೋರೋಬನ ಹಿರಿಯ ಹೆಂಡತಿಯು ಪಾಂಡುರಂಗನನ್ನು ಕುರಿತು ಪ್ರಾರ್ಥಿಸಿದ್ದೇನಂದರೆ— "ಭಕ್ತವತ್ಸಲನೇ, ಪಾಂಡುರಂಗನೇ, ನನ್ನ ಗಂಡನು ನಿನ್ನ ಪರಮಭಕ್ತನಾಗಿರುವನು. ನಿನ್ನ ಭಜನೆಯಲ್ಲಿಯೇ ಮಗ್ನನಾಗಿ ನನ್ನ ಬಾಲಕನನ್ನು ಕೆಸರಿನಲ್ಲಿ ತುಳಿದುಬಿಟ್ಟಿರುವನು. ಈಗ ನಿನ್ನ ದಯದಿಂದ ನನ್ನ ಗಂಡನ ಕೈಗಳು ಚಿಗಿತವು; ಆದರೆ ನಾನು ಮಾತ್ರ ನನ್ನ ಮಗುವಿನ ವಿಯೋಗದುಃಖವನ್ನು ಇನ್ನೂ ಅನುಭವಿಸುತ್ತಲೇ ಇರುವೆನು. ದೇವಾಧಿದೇವನೆ, ನಾವು ನಿನ್ನ ದಾಸರಲ್ಲವೆ? ನಮ್ಮ ಕಷ್ಟವನ್ನು ನೋಡುತ್ತ ನೀನು ಹೀಗೆ ಸುಮ್ಮನೆ ಇರಬಹುದೇ?" ಈ ಬಗೆಯಾಗಿ ಸದ್‌ಭಾವನೆಯಿಂದ ಪ್ರಾರ್ಥಿಸಿದ್ದನ್ನು ಕೇಳಿ, ಚಕ್ರಪಾಣಿಯು ಸಂತುಷ್ಟನಾದನು. ಆ ಸಭೆಯೊಳಗಿಂದ ಗೋರೋಬನ ಚಿಕ್ಕ ಮಗುವು ಹರಿದಾಡುತ್ತ ಬರತೊಡ

ಗಿತು. ಆ ಬಾಲಕನನ್ನು ನೋಡಿದ ಕೂಡಲೆ ಆ ಇಬ್ಬರೂ ತಾಯಂದಿರಿಗೂ ಅತ್ಯಾನಂದವಾಗಿ ಅವರು ಅದನ್ನು ಎತ್ತಿ ಎದೆಗೆ ಅವಚಿಕೊಂಡರು. ಈಶ್ವರೇಚ್ಛೆಯಿಂದ ಕೈಗೂಡದಂಥ ಕೆಲಸಗಳು ಯಾವವೂ ಇಲ್ಲವೆಂದು ಸಭಿಕರು ಅಂದುಕೊಂಡರು. ಆಗ ಜಗನ್ಮಾತೆಯಾದ ರಖುಮಾಯಿಯು ಸ್ತ್ರೀಜಾತಿಯ ಪಕ್ಷವನ್ನು ಹಿಡಿದು ಗೋರೋಬನ ಆಣೆಯನ್ನು ಬಿಡಿಸಿ, ಅವನಿಗೆ ಹೆಂಡರ ಸಂಗಡ ಪ್ರಪಂಚಮಾಡಲು ಆಜ್ಞಾಪಿಸಿದಳು. ಗೋರೋಬನು ಆದಿಮಾಯೆಯ ಈ ಅಪ್ಪಣೆಯನ್ನು ಶಿರಸಾಮಾನ್ಯ ಮಾಡಿದನು.

ಬಳಿಕ ಗೋರೋಬನು ಎಲ್ಲ ಸಂತರನ್ನು ತನ್ನ ಮನೆಗೆ ಕರೆದೊಯ್ದು ಅಸನಾದ್ಯುಪಚಾರಗಳಿಂದ ಸತ್ಕರಿಸಿದನು. ನಿವೃತ್ತಿ, ಜ್ಞಾನದೇವ, ಸಾವತಮಾಳಿ ನಾಮದೇವ ಮೊದಲಾದ ಸಂತಜನರು ಆ ಮಾತು ಈ ಮಾತುಗಳನ್ನಾಡುತ್ತ ಕುಳಿತುಕೊಂಡರು. ಆಗ ಜ್ಞಾನೇಶ್ವರರು ಗೋರೋಬನನ್ನು ಕುರಿತು ವಿನೋದದಿಂದ ನುಡಿದದ್ದೇನಂದರೆ—"ನೀನು ನಮಗೆ ಆಸನವನ್ನು ಕೊಟ್ಟು ನಮ್ಮನ್ನು ಘಟಗಳಂತೆ ಪೂಜಿಸಿದ್ದರಿಂದ ನಮ್ಮಲ್ಲಿ ಪೂರ್ಣವಾಗಿ ಸುಟ್ಟವರಾರು, ಹಸಿಬಿಸಿ ಯಾರು ಎಂಬದನ್ನು ಪರೀಕ್ಷಿಸು; ನೀನು ಹ್ಯಾಗೂ ಕುಂಬಾರನೇ ಇರುವಿ; ನಿನಗೆ ಘಟ(ಕೊಡ)ಗಳನ್ನು ಪರೀಕ್ಷಿಸಲಿಕ್ಕೆ ಚನ್ನಾಗಿಬರುವದು" ಗೋರೋಬನು ಅವರ ಮಾತಿನ ಅರ್ಥವನ್ನು ಕಂಡುಹಿಡಿದು, ಕೂಡಲೆ ಗಡಿಗಿ ಬಡಿಯುವ ತಟ್ಟ ಮಣೆಯಿಂದ ಅಲ್ಲಿ ಕೂಡಿದ ಪ್ರತಿಯೊಬ್ಬ ಸಂತನ ತಲೆಯಮೇಲೆ ಪೆಟ್ಟುಹಾಕುತ್ತ ಬಂದು ಕಡೆಗೆ ನಾಮದೇವನ ತಲೆಯಮೇಲೆ ಅದರಂತೆ ಪೆಟ್ಟು ಹಾಕಿದನು. ನಾಮದೇವನಿಗೆ ಅದರ ಅಭಿಪ್ರಾಯವು ಗೊತ್ತಾಗಲಿಲ್ಲ. ಆಗ ಅವನು—ಗೋರೋಬಾ, ಇದೇನು ಮಾಡುತ್ತೀ? ಎಂದು ನುಡಿದನು. ಕೂಡಲೆ ಗೋರೋಬನು "ಕಚ್ಚಾ ಬೇ ಕಚ್ಚಾ" ಎಂದು ನುಡಿದು ನಕ್ಕು, ಎಲ್ಲ ಸಂತರನ್ನು ಕುರಿತು—ಇದೊಂದು ಘಟವು ಮಾತ್ರ ಹಸಿಬಿಸಿಯಿರುವದೆಂದು ನುಡಿದನು. ಅದನ್ನು ಕೇಳಿ ಮುಕ್ತಾಬಾಯಿಯೇ ಮೊದಲಾದವರು ಘೊಳ್ಳನೆ ನಕ್ಕರು. ಇದರಿಂದ ಅಭಿಮಾನಿಯಾದ ನಾಮದೇವನಿಗೆ ಬಲು ಅಸಮಾಧಾನವಾಯಿತು. ಹೀಗೆ ಅಪಮಾನವನ್ನು ಹೊಂದಿದ ಅವನು ನೆಟ್ಟಗೆ ಪಾಂಡುರಂಗನ ಕಡೆಗೆ ಹೋಗಿ ತನ್ನ ದುಃಖವನ್ನು ತೋಡಿಕೊಳ್ಳಹತ್ತಿದನು. ಪಾಂಡುರಂಗನು ನಾಮದೇವನು ಹೇಳಿದ್ದನ್ನೆಲ್ಲ ಕೇಳಿ ನಸುನಕ್ಕು— "ನಾಮದೇವಾ, ನೀನು ನಿಜವಾಗಿಯೇ ಹಸಿಬಿಸಿ (ಕಚ್ಚಾ) ಇರುತ್ತೀ; ನೀನು ನನ್ನ ಪರಮ ಭಕ್ತನಾಗಿದ್ದರೂ ನಿನಗೆ ನನ್ನ

ಸ್ವರೂಪವು ಇನ್ನೂ ತಿಳಿದಿಲ್ಲ. ಸಂತರು ನಿನಗೆ ಹಸಿಬಿಸಿಯೆಂದು ನಿರ್ಣಯಿಸಿದ್ದು ಯೋಗ್ಯವಿರುವದು. ನೀನು ಸದ್ಗುರುವಿಗೆ ಶರಣು ಹೋದ ಹೊರತು ನಿನ್ನ ಅಜ್ಞಾನವು ನಾಶವಾಗಲಾರದು. ಎಂದು ಹೇಳಿ ಅವನನ್ನು ವಿಸೋಬಾಖೇಚರ ರೆಂಬ ಸಂತರ ಕಡೆಗೆ ಕಳಿಸಿದನು. ಆ ಸಾಧುಗಳ ಸಹವಾಸದಿಂದ ಮುಂದೆ ಅವನು ಶ್ರೇಷ್ಠಜ್ಞಾನಿಯಾದನು. ನಾಮದೇವನ ಈ ಜ್ಞಾನಪೂರ್ಣತೆಗೆ ನಮ್ಮ ಗೋರಾ ಕುಂಬಾರನೇ ಕಾರಣನಾದನು!

---

# ಚೋಖಾಮೇಳ.



"ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮವಿಭಾಗಶಃ" ಎಂದು ಗೀತೆಯಲ್ಲಿ ಭಗವಂತನು ಹೇಳಿರುವನಷ್ಟೆ? ಕರ್ಮವಿಭಾಗದಿಂದ ನಾಲ್ಕು ವರ್ಣ ಗಳು ಭಗವಂತನಿಂದ ನಿರ್ಮಿತವಾಗಿದ್ದರೂ, ಆಯಾ ವರ್ಣಕ್ಕೆ ಭಗವಂತನ ಸಾನ್ನಿ ಧ್ಯವನ್ನು ಪಡೆಯಲು ಸಮಸಮಾನವಾದ ಹಕ್ಕುಂಟು. ಜಾತಿಗೆ ಭೇದವಾದರೂ ನೀತಿಗೆ ಭೇದವಿಲ್ಲ. ಯಾವ ಜಾತಿಯವನಾದರೇನು? ಭಗವಂತನಲ್ಲಿ ಪ್ರೇಮವನ್ನಿ ರಿಸಿದವನೇ ಪುಣ್ಯಶಾಲಿಯು! ಆವನನ್ನೇ ಭಗವಂತನು ಪ್ರೀತಿಸುವನು. ಸಮಾಜ ದಲ್ಲಿ ಅಂತ್ಯಜವರ್ಗವು ಕೀಳುತರದ್ದಾಗಿದ್ದರೂ ಅವರಲ್ಲಿಯೂ ಕೂಡ ಭಗವದ್ ಭಕ್ತಿಯಿಂದ ಲಕಲಕಿಸುವ ತೇಜೋಮೂರ್ತಿಗಳು ಹಲವರು ಆಗಿರುವರು. ಹಿಂದಕ್ಕೆ ಶ್ರೀ ಚಿದಂಬರದೀಕ್ಷಿತರ ಕಾಲದಲ್ಲಿ ಸಹ ನಂದನೆಂಬ ಅಂತ್ಯಜನು ಪರಮಭಕ್ತನಾಗಿ ಹೋದನು. ಪವಿತ್ರತೆಯಲ್ಲಿ ಅಂತಃಶುದ್ಧಿ-ಬಹಿಃಶುದ್ಧಿಗಳೆರಡೂ ಬರುತ್ತಿರಲು, ಬರಿಯ ಬಹಿಃಶುದ್ಧಿಯಿಂದ ಯಾರಿಗೂ ಶ್ರೇಷ್ಠತ್ವವು ಬರಲಾರದು. ಬಹಿಃಶುದ್ಧಿಗಿಂತ ಅಂತಃಶುದ್ಧಿಯೇ ಮುಖ್ಯವಾದದ್ದೆಂಬದನ್ನು ಎಲ್ಲರೂ ಲಕ್ಷ್ಯದ ದಲ್ಲಿಡತಕ್ಕದ್ದು. ಹೀಗೆ ಅಂತಃಶುದ್ಧಿಯಿಂದ ಭಗವಂತನ ಪೂರ್ಣಾನುಗ್ರಹಕ್ಕೆ ಪಾತ್ರರಾದವರಲ್ಲಿ ಅಂತ್ಯಜ ಜಾತಿಯವನಾದ ಚೋಖಾಮೇಳನ ಚರಿತ್ರವನ್ನು ನಮ್ಮ ವಾಚಕರಿಗಾಗಿ ಇಲ್ಲಿ ಕೊಡುವೆವು:—

ಚೋಖಾಮೇಳನು ಪಂಢರಪುರಕ್ಷೇತ್ರದಲ್ಲಿ ಇರುತ್ತಿದ್ದನು. ಅವನ ದೊಂದು ಗುಡಿಸಲವು ಆ ಕ್ಷೇತ್ರದ ಹೊರಭಾಗದಲ್ಲಿ ಸಜ್ಜನರಿಗೊಪ್ಪುವಂತೆ ಬಹು

ರಮ್ಯವಾಗಿತ್ತು, ಬಾಗಿಲಮುಂದಿರುವ ವೃಂದಾವನದ ಕಟ್ಟೆಯಲ್ಲಿ ತುಲಸಿಯ ಗಿಡಗಳು ಸತೇಜವಾಗಿ ಕಂಗೊಳಿಸುತ್ತಿದ್ದವು. ಎಲ್ಲ ಕಡೆಗೂ ಗೋಮಯದಿಂದ ಸಾರಿಸಿದ್ದರಿಂದ ಆ ಗುಡಿಸಲು ಇದ್ದ ಪ್ರದೇಶವು ನೋಡುವವರಿಗೆ ಋಷ್ಯಾಶ್ರಮದ ನೆನಪುಮಾಡಿಕೊಡುತ್ತಿತ್ತು. ಇಂತೊಪ್ಪುವ ಆ ಗುಡಿಸಲಿನಲ್ಲಿ ಚೋಖಾಮೇಳನು ತನ್ನ ಕುಲಪರಂಪರಾಗತವಾದ ಉದ್ಯೋಗದಿಂದ ಹೆಂಡಿರು-ಮಕ್ಕಳನ್ನು ಸಂರಕ್ಷಿಸುತ್ತ ಇರುತ್ತಿದ್ದನು.

ಚೋಖಾಮೇಳನ ನಿವಾಸಸ್ಥಾನವು ನಿರ್ಮಲವಿದ್ದಂತೆ ಅವನ ಮನಸ್ಸಾದರೂ ಅತ್ಯಂತ ನಿರ್ಮಲವಾಗಿತ್ತು. ಅವನು ಮಹಾಭಗವದ್ಭಕ್ತನು. ಪಾಂಡುರಂಗನ ದರ್ಶನವಿಲ್ಲದೆ ಅವನಿಗೆ ಎಂದೂ ಸಮಾಧಾನವೆನಿಸುತ್ತಿರಲಿಲ್ಲ. ಆ ಮಹಾತ್ಮನು ಪ್ರತಿನಿತ್ಯ ಪ್ರಾತಃಕಾಲದಲ್ಲೆದ್ದು ಪಾಂಡುರಂಗನ ಸ್ಮರಣೆಮಾಡಿ ಭೀಮಾನದಿಗೆ ಹೋಗುತ್ತಿದ್ದನು. ಅವನು ಅಲ್ಲಿ ಜಳಕಮಾಡಿ ಇಡಿಯ ಪಂಢರಪುರಕ್ಷೇತ್ರಕ್ಕೆ ಒಮ್ಮೆ ಪ್ರದಕ್ಷಿಣೆಯನ್ನು ಹಾಕಿ ಪಾಂಡುರಂಗನ ದೇವಾಲಯಕ್ಕೆ ಬರುತ್ತಿದ್ದನು. ತಾನು ಅಂತ್ಯಜನು, ತನ್ನನ್ನು ಶ್ರೇಷ್ಠವರ್ಣದವರು ಮುಟ್ಟಿಸಿಕೊಳ್ಳುವದಿಲ್ಲೆಂಬದು ಅವನಿಗೆ ಚೆನ್ನಾಗಿ ಗೊತ್ತಿತ್ತು. ತಾನು ಭಗವದ್ಭಕ್ತನಿರುವದರಿಂದ, ಮುಂದಿಯು ತನ್ನನ್ನು ಮುಟ್ಟಿಸಿಕೊಳ್ಳಬೇಕೆಂಬ ದುರಭಿಮಾನವೂ ಅವನಲ್ಲಿ ಇದ್ದಿಲ್ಲ. ನಿಜವಾದ ಸತ್ಪುರುಷರನ್ನು ದುರಭಿಮಾನಾದಿ ದುರ್ಗುಣಗಳು ಸೊಂಕುವವೇ? ಅವು ಅವರನ್ನು ಬಿಟ್ಟು ದೂರ ಹಾಯುವವು. ಚೋಖಾಮೇಳನು ದೇವಾಲಯದ ಮಹಾದ್ವಾರದ ಬಳಿಯಲ್ಲಿ ಓರೆಯಾಗಿನಿಂತು ಅಲ್ಲಿಂದಲೇ ಪಾಂಡುರಂಗನ ದರ್ಶನವನ್ನು ತೆಗೆದುಕೊಂಡು ಸಾಷ್ಟಾಂಗವಾಗಿ ನಮಸ್ಕರಿಸುತ್ತಿದ್ದನು. ಅವನು ಪಾಂಡುರಂಗನ ನಾಮಸ್ಮರಣಮಾಡುತ್ತ ಕೆಲವುಹೊತ್ತಿನವರೆಗೆ ಅಲ್ಲಿಯೇ ಕುಳಿತು ಬಳಿಕ ತನ್ನ ಮನೆಗೆ ಹೋಗುತ್ತಿದ್ದನು.

ಈ ಮೇರೆಗೆ ಚೋಖಾಮೇಳನ ನಿತ್ಯಕ್ರಮವಿರುತ್ತಿರಲು, ಅವನ ಈ ಭಕ್ತಿಮಾರ್ಗವು ದುರಭಿಮಾನಿಗಳಾದ ಉಚ್ಚಕುಲದ ಜನರಿಗೆ ಅಸಹ್ಯವಾಯಿತು. ಅವರು ಅವನನ್ನು ಮನಸೋಕ್ತವಾಗಿ ನಿಂದಿಸಹತ್ತಿದರು. ಹೀಗಿರಲು ಒಂದು ದಿನ ಒಬ್ಬ ಬ್ರಾಹ್ಮಣನು, ಚೋಖಾಮೇಳನು ಪಾಂಡುರಂಗನ ಗುಡಿಯಮುಂದೆ ಭಜನೆಮಾಡುತ್ತ ನಿಂತಿರುವದನ್ನು ಕಂಡು ಅವನಲ್ಲಿಗೆ ಹೋಗಿ—"ಚೋಖ್ಯಾ, ನಿನ್ನ ಈ ಅಹಂಭಾವವನ್ನು ನೋಡಿ ನಮಗೆ ನಗೆ ಬರುತ್ತದೆ; ನೀನು ಹೇಳಿಕೇಳಿ ಅಂತ್ಯಜನು; ಪಾಂಡುರಂಗನ ದರ್ಶನಾಧಿಕಾರವು ನಿನಗೆಲ್ಲಿ ಇರುವದು? ಇಂಥ

ನೀಚಜಾತಿಯವನಾದ ನಿನ್ನ ಮೇಲೆ ಪಾಂಡುರಂಗನ ಪ್ರೇಮವು ಯತ್ಕಿಂಚಿತವಾದರೂ ಇರಲಾರದು; ನೀನು ವ್ಯರ್ಥವಾಗಿ ಪಾಂಡುರಂಗನ ಭಜನೆಮಾಡಿ ದಣಿಕೊಳ್ಳಬೇಡ; ಭಾಗ್ಯಹೀನನಿಗೆ ಅಡವಡವಿ ತಿರುಗಿದರೂ ನಿಧಿಯು ಸಿಕ್ಕದಂತೆ ನಿನ್ನ ಅವಸ್ಥೆಯಾಗುವದು. ದೇವರನ್ನು ಭಜಿಸುವ ಹಾಗು ಪೂಜಿಸುವ ಅಧಿಕಾರವು ನಮಗುಂಟು; ಇಲ್ಲಿ ನೋಡು, ನಾನು ನಿಶ್ಶಂಕೆಯಿಂದ ಗರ್ಭಗುಡಿಯಲ್ಲಿ ಪ್ರವೇಶ ಮಾಡುತ್ತೇನೆ; ನಿನಗೆ ಹೀಗೆ ಹೋಗಲಿಕ್ಕೆ ಬರುವದೋ?" ಎಂಬದಾಗಿ ಚೋಖಾಮೇಳನನ್ನು ಚೆನ್ನಾಗಿ ಜರೆದು ನುಡಿದನು. ಬ್ರಾಹ್ಮಣನು ಚೋಖಾಮೇಳನಿಗೆ ಈ [illegible]ಯಾಗಿ ವಾಕ್‌ಪ್ರಹಾರ ಮಾಡಲಿಕ್ಕೆ ಏನೂ ಕಾರಣವಿದ್ದಿಲ್ಲ. ನಿರ್ನಿಮಿತ್ತವಾಗಿ ಬ್ರಾಹ್ಮಣನು ತನ್ನ ಭಕ್ತಿ ಮಾರ್ಗವನ್ನು ಹೀಯಾಳಿಸಿದ್ದಕ್ಕೆ ಚೋಖಾಮೇಳನು [illegible]ತಪ್ತನಾಗದೆ, ಸಮಾಧಾನವನ್ನು ತಾಳಿ—"ಬ್ರಾಹ್ಮಣಶ್ರೇಷ್ಠರೇ, ನೀವು ನನಗೆ ತಾಯಿತಂದೆಗಳಂತೆ ಇರುವಿರಿ; ನಿಮ್ಮಷ್ಟು ಪುಣ್ಯವು ನನಗೆಲ್ಲಿ ಬರಬೇಕು? ನಾನು ಕೇವಲ ನಿಮ್ಮ ಚರಣಗಳ ದಾಸನು; ಭೂಪೃಷ್ಠದಿಂದ ಬಹುದೂರ ಇರುವ ಸೂರ್ಯನಾರಾಯಣನು, ಭೂಮಿಯ ಮೇಲಿರುವ ಕಮಲಿನಿಯನ್ನು ಸಂತುಷ್ಟಬಡಿಸುವಂತೆಯೂ ಕೂರ್ಮವು ತನ್ನ ಮರಿಗಳಿಗೆ. ದರ್ಶನಮಾತ್ರದಿಂದಲೇ ಸ್ತನ್ಯಪಾನ ಮಾಡಿಸಿದಷ್ಟು ಸೌಖ್ಯವನ್ನು ಕೊಡುವಂತೆಯೂ ಪಾಂಡುರಂಗನು ಈ ನೀಚಜಾತಿಯ ಚೋಕ್ಯಾನನ್ನು ನಿಶ್ಚಯವಾಗಿ ಸಂರಕ್ಷಿಸುವನೆಂದು ನಾನು ನೆರೆನಂಬಿರುವೆನು. ಭಗವಂತನು ಶುದ್ಧಭಾವಕ್ಕೆ ಮೆಚ್ಚುವನೆಂಬ ಮಾತನ್ನು ತಮ್ಮಂಥವರಿಗೆ ನಾನು ಹೇಳುವಕಾರಣವಿಲ್ಲ" ಎಂದು ನುಡಿದನು. ಚೋಖಾಮೇಳನು ಹೀಗೆ ಮಹಾಜ್ಞಾನಿಯಂತೆ ಮಾತಾಡಿದ್ದನ್ನು ಕೇಳಿ, ಆ ಬ್ರಾಹ್ಮಣನಿಗೆ ಮತ್ತಷ್ಟು ಸಿಟ್ಟು ಬಂದಿತು. ಅವನು ಕೆಂಗಣ್ಣುಗಳಿಂದ ದಿಟ್ಟಿಸಿ ನೋಡಹತ್ತಲು, ಚೋಖಾಮೇಳನು ಬ್ರಾಹ್ಮಣನನ್ನು ನಮಸ್ಕರಿಸಿ ತನ್ನ ಮನೆಗೆ ಹೊರಟು ಹೋದನು.

ಮನೆಗೆ ಹೋದಬಳಿಕ ಚೋಖಾಮೇಳನು ಪಾಂಡುರಂಗನನ್ನು ಧ್ಯಾನಿಸುತ್ತ ಕುಳಿತುಬಿಟ್ಟನು; ತನ್ನ ಪರಮಭಕ್ತನಾದ ಚೋಖಾಮೇಳನಿಗೆ ಬ್ರಾಹ್ಮಣನಾಡಿದ ನಿಂದಾವ್ಯಂಜಕವಾದ ಮಾತುಗಳಿಂದ ಪಾಂಡುರಂಗನು ತಳಮಳಗೊಂಡನು. ಭಕ್ತರ ಅಪಮಾನವು ಭಗವಂತನಿಗೆ ಸಹನವಾಗುವದಿಲ್ಲ; ಅಂತೇ ಆತನಿಗೆ ಭಕ್ತವತ್ಸಲನೆಂಬಬಿರುದು ಪ್ರಾಪ್ತವಾಗಿರುತ್ತದೆ. ಚೋಖಾಮೇಳನಿಗೆ ಬ್ರಾಹ್ಮಣನ ನಿಷ್ಠುರವಚನಗಳಿಂದ ಅಸಮಾಧಾನವಾಗಿರಬಹುದೆಂದು ತಿಳಿದು, ಆದಿನ

ರಾತ್ರಿಯಲ್ಲಿ ಪಾಂಡುರಂಗನು ಅವನ ಮನೆಗೆ ಹೋದನು. ಚೋಖಾಮೇಳನು ತಾನು ಅಂತ್ಯಜನಾಗಿದ್ದರೂ ತನ್ನ ಶುದ್ಧಭಾವದಿಂದ ಪಾಂಡುರಂಗನನ್ನು ತಾನಿದ್ದಲ್ಲಿಗೆ ಬರಮಾಡಿಕೊಂಡನು.! ಭಕ್ತಿಯ ಮಹಿಮೆಯೇ ಅಂತಹದು!!

ಚೋಖಾಮೇಳನು ಭಗವಧ್ಧ್ಯಾನದಲ್ಲಿ ಮಗ್ನನಾಗಿರಲು, ಪಾಂಡುರಂಗನು ಅವನನ್ನು ಆಲಿಂಗಿಸಿ ಎಚ್ಚರಿಸಿದನು. ಚೋಖಾಮೇಳನು ಎಚ್ಚತ್ತು ಸಮ್ಮುಖದಲ್ಲಿ ಒಪ್ಪುವ ರುಕ್ಮಿಣೀರಮಣನನ್ನು ಕಣ್ಣುತುಂಬಾನೋಡಿ ಧನ್ಯತೆಯನ್ನು ಪ್ರಕಟಿಸಿದನು. ಆಗ ಆ ದೇವಭಕ್ತರ ಆನಂದಕ್ಕೆ ಎಣೆಯಿಲ್ಲದಾಯಿತು. ಚೋಖಾಮೇಳನು ಆನಂದಬಾಷ್ಪಗಳಿಂದ ಪಾಂಡುರಂಗನ ಪಾದಗಳನ್ನು ತೊಳೆದನು. ಬಳಿಕ ಆ ಭಕ್ತಪ್ರಿಯನಾದ ಪಾಂಡುರಂಗನು—"ಚೋಖಾಮೇಳಾ, ನಿನ್ನನ್ನು ನಾನು ನನ್ನ ಗುಡಿಗೆ ಕರಕೊಂಡು ಹೋಗುವೆನು; ನಡೆ. ನಿನ್ನಲ್ಲಿರುವ ಶುದ್ಧಭಾವವು ನನ್ನ ಹೊರತು ಇನ್ನಾರಿಗೂ ತಿಳಿಯದು." ಎಂದು ನುಡಿದು, ಆ ಭಕ್ತವರನೊಡನೆ ಗುಡಿಗೆ ನಡೆದನು. ಪಾಂಡುರಂಗನ ಪ್ರೇಮದಿಂದ ಚೋಖಾಮೇಳನು ಗರ್ಭಗುಡಿಯಲ್ಲಿ ಪ್ರವೇಸಿಶಿ ಅಲ್ಲಿ ದೇವರೊಡನೆ ಸಂಭಾಷಣೆ ಮಾಡುತ್ತ ಕುಳಿತುಕೊಂಡನು.

ಮಧ್ಯರಾತ್ರಿಯ ಸಮಯದಲ್ಲಿ ಗರ್ಭಗುಡಿಯೊಳಗೆ ಗುಣುಗುಣು ಸಪ್ಪಳವಾಗುವದನ್ನು ಕೇಳಿ ಪೂಜಾರಿಯು ಎಚ್ಚತ್ತು ಬಾಗಿಲವರೆಗೆ ಬಂದು ಮರೆಗೆ ನಿಂತುಕೊಂಡನು. ಚೋಖಾಮೇಳನ ದನಿಯ ಗುರ್ತು ಅವನಿಗೆ ಹತ್ತಿತು. ಆ ಕೂಡಲೆ ಅವನು ಗುಡಿಯ ಹೊರಗೆ ಹೋಗಿ ನಾಲ್ಕಾರು ಜನ ಬ್ರಾಹ್ಮಣರನ್ನು ಕರಕೊಂಡು ಬಂದನು. ಬಳಿಕ ಎಲ್ಲರೂ ಕೂಡಿ ಗುಡಿಯ ಬಾಗಿಲದ ಕೀಲಿಯನ್ನು ತೆಗೆದು ಒಳಗೆ ನೋಡುತ್ತಾರೆ, ಚೋಖಾಮೇಳನು ದೇವರ ಮುಂದೆ ಕುಳಿತುಕೊಂಡಿದ್ದನು. ಇದನ್ನು ಕಂಡು ಅವರ ಸರ್ವಾಂಗವು ತಪ್ತವಾಯಿತು. ಆಗ ಅವರು ಚೋಕ್ಯಾನ ರಟ್ಟೆಯನ್ನು ಹಿಡಿದು ಅವನನ್ನು ಹೊರಗೆ ಎಳೆದುಕೊಂಡು ಬಂದು ಚೆನ್ನಾಗಿ ತಳಿಸಿದರು. ಮುಂಜಾವಿನಲ್ಲಿ ಬ್ರಾಹ್ಮಣನು ಗುಡಿಯ ಬಾಗಿಲಲ್ಲಿ ನಿಲ್ಲಬೇಡವೆಂದು ಅಂದದ್ದಕ್ಕೆ, ಈ ನೀಚನು ದೇವರನ್ನು ಭ್ರಷ್ಟವಾಗ ಮಾಡಿದನೆಂದು ಅವರ ತಿಳುವಳಿಕೆಯಾಯಿತು. ಚೋಖಾಮೇಳನು ಗದಗದನೆ ನಡುಗಿ—ಸ್ವಾಮಿ, ನಾನು ದೇವರನ್ನು ಭ್ರಷ್ಟವಾಗ ಮಾಡಲಿಕ್ಕೆಂದು ಇಲ್ಲಿಗೆ ಬಂದಿಲ್ಲ. ಪಾಂಡುರಂಗನೇ ನನ್ನನ್ನು ಇಲ್ಲಿಗೆ ಕರಕೊಂಡು ಬಂದನು, ಎಂದು ನುಡಿದನು. ಆದರೆ ದುರಭಿಮಾನದಿಂದ ಪರಿಪೂರ್ಣರಾದ ಆ ಜನರಿಗೆ

ಚೋಖಾಮೇಳನ ನಿಸ್ಸೀಮವೂ, ನಿರ್ಮಲವೂ ಆದ ಭಕ್ತಿಯ ಮಹಿಮೆಯು ಹ್ಯಾಗೆ ತಿಳಿಯಬೇಕು? ಅವರು ಅವನ ಈ ಮಾತಿನಿಂದ ಮತ್ತಿಷ್ಟು ರೇಗಿಗೆದ್ದು ಅವನನ್ನು ಸಕುಟುಂಬವಾಗಿ ಪಂಢರಪುರದಿಂದ ಹೊರಗೆ ಹಾಕಿದರು. ದೀನ ನಾದ ಚೋಖಾಮೇಳನು ಭೀಮಾನದಿಯನ್ನು ದಾಟಿ ಒಂದು ಹೊಲದಲ್ಲಿ ಒಂದು ವೃಕ್ಷದ ಬುಡದಲ್ಲಿ ಇರಬೇಕಾಯಿತು. ಇಂಥ ವಿಪತ್ತುಗಳೇ ಸಜ್ಜನರನ್ನು ಪ್ರಕಟ ಮಾಡಲಿಕ್ಕೆ ಕಾರಣಗಳಾಗುವವು.

ಒಂದು ದಿನವಾದರೂ ಪಾಂಡುರಂಗನ ದರ್ಶನವಿಲ್ಲದಿದ್ದರೆ ವ್ಯಸನಪಡುತ್ತಿ ರುವ ಚೋಖಾಮೇಳನು ಈಗ ನಿರಂತರವಾಗಿ ಪಾಂಡುರಂಗನ ವಿಯೋಗವನ್ನು ಸಹನಮಾಡಿಕೊಂಡು ಪಂಢರಿಯನ್ನು ಬಿಟ್ಟು ಹೋಗಬೇಕಾದರೆ, ಅವನಿಗೆ ಎಷ್ಟು ಕಷ್ಟವಾಗಿದ್ದೀತೆಂಬದನ್ನು ವಾಚಕರೇ ತರ್ಕಿಸಬಹುದು. ಆ ಭಕ್ತ ಶ್ರೇಷ್ಠನು ತಾಯಿಯನ್ನಗಲಿದ ಕರುವಿನಂತೆ ಅತಿ ದೀನನಾಗಿ ಉಪಾಯಗಾಣದೆ ಪಂಢರಪುರಕ್ಕೊಂದು ನಮಸ್ಕಾರವನ್ನು ಮಾಡಿ ಮೇಲೆ ಹೇಳಿದಂತೆ ಒಂದು ವೃಕ್ಷದ ಆಶ್ರಯವನ್ನು ಹೊಂದಿದನು. "ಯೇ ಯಥಾ ಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ" ಎಂಬ ಗೀತಾ ವಚನದಂತೆ ಭಗವಂತನಿಗಾದರೂ ಚೋಖಾಮೇಳನ ವಿಯೋಗವು ಅಸಹ್ಯವಾಯಿತು. ಕೂಡಲೆ ಆತನು ಚೋಖಾ ಮೇಳನಿದ್ದಲ್ಲಿಗೆ ನಡೆದನು. ಆಗ ಚೋಖಾಮೇಳನು ಊಟಕ್ಕೆ ಕುಳಿತಿದ್ದನು. ಪಾಂಡುರಂಗನು ಚೋಖಾಮೇಳನು ಉಣ್ಣುತ್ತಿರುವ ಪರಿವಾಣದ ಮುಂದೆ ಕುಳಿತು ತಾನೂ ಉಣ್ಣಹತ್ತಿದನು. ಅಕಸ್ಮಾತ್ತಾಗಿ ಪಾಂಡುರಂಗನು ಬಂದದ್ದ ರಿಂದ ವಿಯೋಗದುಃಖದಿಂದ ಬಳಲುತ್ತಿರುವ ಚೋಖಾಮೇಳನಿಗೆ ಬಲು ಸಮಾ ಧಾನವಾಯಿತು. ಆಗ ಆತನು ಅತಿ ಹರುಷದಿಂದ ತನ್ನ ಹೆಂಡತಿಗೆ ಇನ್ನಿಷ್ಟು ಮೊಸರೂ-ರೊಟ್ಟೀ ಹಾಕು, ಎಂದು ಹೇಳಿದನು. ಅದರಂತೆ ಆ ಸ್ತ್ರೀಯು ಮೊಸ ರನ್ನು ಬಡಿಸಬರಲು, ಆಕೆಯ ಕೈಯೊಳಗಿನ ಚಟಿಗಿಯು ಕೈತಪ್ಪಿ ಕೆಳಗೆ ಬಿದ್ದದ್ದ ರಿಂದ ಪಾಂಡುರಂಗನ ಪೀತಾಂಬರವೆಲ್ಲ ಮೊಸರು ಮುಣುಗಿತು. ಹೀಗೆ ದೇವರ ಪೀತಾಂಬರವು ಹೊಲಸಾದದ್ದನ್ನು ನೋಡಿ, ಆ ಭಕ್ತನು—ಮೂರ್ಖಳೇ ಇದೇನು ಮಾಡಿದಿ? ಎದುರಿಗೆ ಪಾಂಡುರಂಗನು ನನ್ನ ಪರಿವಾಣದಲ್ಲಿ ಊಟಕ್ಕೆ ಕುಳಿತದ್ದು ನಿನಗೆ ಕಾಣುವದಿಲ್ಲವೇ? ಎಂದು ಹೆಂಡತಿಗೆ ಸಿಟ್ಟು ಮಾಡಿದನು.

ಕರ್ಮಧರ್ಮ ಸಂಯೋಗದಿಂದ ಅಲ್ಲಿಗೆ ಪಾಂಡುರಂಗ ದೇವರ ಪೂಜಾ ರಿಯು ಬಂದಿದ್ದನು. ಆತನು ಚೋಖಾಮೇಳನು ಕುಳಿತಲ್ಲಿರುವ ಒಂದುಲಿಂಬೀ

ಗಿಡದ ಮೇಲೇರಿ ಹಣ್ಣುಗಳನ್ನು ಹರಿಯುತ್ತಿದ್ದನು. ಚೋಖಾಮೇಳನು ಹೆಂಡತಿಗೆ ಅಂದ ಮಾತುಗಳನ್ನು ಅವನು ಕೇಳಿ ಸಿಟ್ಟಿನಿಂದ ಹುಚ್ಚಾದನು. ನಾನು ಬಂದದ್ದನ್ನು ನೋಡಿ, ಈ ಭ್ರಷ್ಟನು ನನ್ನ ಅಪಮಾನ ಮಾಡುವದಕ್ಕಾಗಿ ಹೀಗೆ ನುಡಿಯುವನೆಂದು ಅವನಿಗೆ ತೋರಿತು. ಆಗ ಅವನು ಮರವನ್ನು ಇಳಿದು ಚೋಖಾಮೇಳನನ್ನು ಕುರಿತು—ಎಲವೋ ನೀಚಾ, ನಿನ್ನಂಥ ಅಂತ್ಯಜಾಧಮನ ಹರಿವಾಣದಲ್ಲಿ ದೇವಾಧಿದೇವನಾದ ಪಾಂಡುರಂಗನು ಉಣ್ಣುವನೇ? ಮೂರ್ಖಾ, ವೇದಗಳಿಗೆ ಅಗೋಚರನಾದ ಆ ರುಕ್ಮಿಣೀ ರಮಣನು ನಮ್ಮಂಥ ಬ್ರಾಹ್ಮಣರು ವಿಶ್ವಪ್ರಯತ್ನಮಾಡಿದರೂ, ಪ್ರಸನ್ನನಾಗದಿರಲು, ನಿನ್ನಂಥ ಕ್ಷುದ್ರನ ಮುಂದೆ ಕೂತು ಉಣ್ಣುವನೆಂದರೆ ನಿಜವಾಗಿ ಕಾಣಬಹುದೇ? ನೀನು ನಮ್ಮ ದೇವರನ್ನು ಭ್ರಷ್ಟವಾಗಮಾಡಲಿಕ್ಕೆ ಇಚ್ಛಿಸುತ್ತೀ? ನಿಲ್ಲು, ನಿನಗೆ ಪ್ರಾಯಶ್ಚಿತ್ತವನ್ನು ಕೊಡುತ್ತೇನೆ, ಎಂದು ನುಡಿದು, ಕೈಯೊಳಗಿನ ಕೋಲಿನಿಂದ ಅವನನ್ನು ಒಳಿತಾಗಿ ಥಳಿಸಿದನು. ನಿರಪರಾಧಿಯಾದ ಚೋಖಾಮೇಳನು ಬ್ರಾಹ್ಮಣನ ಒಡಿಗಿಯ ಪೆಟ್ಟುಗಳನ್ನು ಸುಮ್ಮನೆ ಸಹನಮಾಡಿಕೊಂಡನು. ಆ ಸಾತ್ವಿಕನು ಬ್ರಾಹ್ಮಣನ ವಿಷಯವಾಗಿ ಏನೂ ಅನ್ನಲಿಲ್ಲ. ಸತ್ಪುರುಷರಾದವರು ದುರ್ಜನರ ವಿಷಯವಾಗಿ ಹೀಗೆ ಶಾಂತಿಯನ್ನು ತಾಳುವದು ಸ್ವಾಭಾವಿಕವೇ ಆಗಿರುವದು!

ಬಳಿಕ ಆ ಬ್ರಾಹ್ಮಣನು ಬಹು ದೊಡ್ಡ ಕೆಲಸ ಮಾಡಿದವನಂತೆ ಸಂತೋಷಪಡುತ್ತ, ಅಂತ್ಯಜನನ್ನು ಮುಟ್ಟಿದ್ದರಿಂದ ಸ್ನಾನಮಾಡಬೇಕೆಂದು ಭೀಮಾನದಿಗೆ ಹೋದನು. ಅವನು ಅಲ್ಲಿ ಸಚೇಲಸ್ನಾನಮಾಡಿ, ಒದ್ದೆಯನ್ನುಟ್ಟುಕೊಂಡು ಚೋಖಾಮೇಳನನ್ನು ದಂಡಿಸಿದ ಆನಂದದ ಸುದ್ದಿಯನ್ನು ತನ್ನ ಮಿತ್ರಮಂಡಲಿಯ ಮುಂದೆ ಯಾವಾಗ ಹೇಳೇನೆಂಬ ಕುತೂಹಲದಿಂದ ಪಾಂಡುರಂಗನ ದೇವಾಲಯಕ್ಕೆ ಬಂದನು. ಅವನು ಗುಡಿಯ ಬಾಗಿಲವನ್ನು ತೆರೆಯಲು, ಪಾಂಡುರಂಗನಿಗೆ ಉಡಿಸಿದ ಪೀತಾಂಬರವು ನಿಜವಾಗಿಯೇ ಮೊಸರಿನಿಂದತೊಯ್ದುದ್ದು ಕಂಡಿತು. ಆಗ ಬ್ರಾಹ್ಮಣನು ಬೆಟ್ಟಿಬಿದ್ದು, ಇದೇನು ಚಮತ್ಕಾರವೆಂದು ಯೋಚಿಸಿದನು. ಅವನಿಗೆ ನಡೆದ ಪ್ರಕಾರವೆಲ್ಲ ಹೊಳೆದು ಪರಮಾವಧಿಯಾಗಿ ಪಶ್ಚಾತ್ತಾಪವಾಯಿತು. ಪಾಂಡುರಂಗನು ಚೋಖಾಮೇಳನಲ್ಲಿ ಉಂಡದ್ದು ಅವನಿಗೆ ನಿಜವೆಂದು ಕಂಡುಬಂದಿತು. ಅವನು ಪಾಂಡುರಂಗನ ಮೂರ್ತಿಯನ್ನು ದಿಟ್ಟಿಸಿ ನೋಡಿದನು. ಆಗ ಆ ಮೂರ್ತಿಯ ಎರಡೂ ಗಲ್ಲಗಳ ಮೇಲೆ ದೊಡ್ಡ ದೊಡ್ಡ ಬಾಸಾಳಗಳು ಮೂಡಿದ್ದು ಅವನಿಗೆ ಕಂಡಿತು. ಇದರಿಂದಂತೂ ಆತ್ಮಕೃತಿಯ ಸ್ಮರಣ

ವಾಗಿ ಪೂಜಾರಿಯು ಬಹಳ ಅನುತಾಪದಲ್ಲಿ ಬಿದ್ದನು. ಅವನಲ್ಲಿ ಚೋಖಾಮೇಳನ ವಿಷಯವಾಗಿ ಪೂಜ್ಯಬುದ್ಧಿಯು ಉತ್ಪನ್ನವಾಯಿತು. ಅವನ ದುರಭಿಮಾನವು ಹೇಳಹೆಸರಿಲ್ಲದೆ ಹೋಯಿತು. ಆತನು ಪಶ್ಚಾತ್ತಾಪದಿಂದ ಪರಿಶುದ್ಧನಾಗಿ ತಡಮಾಡದೆ ನೆಟ್ಟಗೆ ಚೋಖಾಮೇಳನಲ್ಲಿಗೆ ಹೋದನು. ಅವನು ಚೋಖಾಮೇಳನ ಚರಣಗಳನ್ನು ಗಟ್ಟಿಯಾಗಿ ಹಿಡಕೊಂಡು— ಭಕ್ತಶ್ರೇಷ್ಠನೇ, ನಾನು ಮಹಾಪಾತಕಿಯು ಇದ್ದೇನೆ. ನನ್ನ ಸರ್ವ ಅಪರಾಧಗಳನ್ನು ಕ್ಷಮಿಸಿ, ನನ್ನನ್ನು ಅನುಗ್ರಹಿಸು, ಎಂದು ಪ್ರಾರ್ಥಿಸಿ, ದೇವಾಲಯದೊಳಗೆ ತಾನು ಕಂಡ ಎಲ್ಲ ಸಂಗತಿಗಳನ್ನು ಹೇಳಿದನು. ಅದನ್ನು ಕೇಳಿ ಚೋಖಾಮೇಳನು ಬ್ರಾಹ್ಮಣನನ್ನು ಸಮಾಧಾನಪಡಿಸಿದನು. ತುಸು ಹೊತ್ತಿನ ಮೊದಲು ಆ ಬ್ರಾಹ್ಮಣನು ತನ್ನನ್ನು ದುಃಖಪಡಿಸಿದ್ದನ್ನು ಮರೆತು ಚೋಖಾಮೇಳನು ಅವನ ಕೂಡ ಪ್ರೀತಿಯಿಂದ ಮಾತಾಡತೊಡಗಿದನು. ಸಜ್ಜನರಿಗೆ ಕ್ಷಮೆಯೇ ಮೇಲಾದ ಧನುಸ್ಸಾಗಿರುವದು.

ನಂತರ ಆ ಬ್ರಾಹ್ಮಣನು ಗುಡಿಗೆ ಬರಬೇಕೆಂದು ಚೋಖಾಮೇಳನನ್ನು ಪ್ರಾರ್ಥಿಸಿದನು. ಆ ಭಕ್ತರಾಜನು ಬ್ರಾಹ್ಮಣನ ವಿನಂತಿಯನ್ನು ಮನ್ನಿಸಿ ಅವನೊಡನೆ ದೇವಾಲಯಕ್ಕೆ ಬಂದನು. ಪೂಜಾರಿಯು ಲಗುಬಗೆಯಿಂದ ಕೀಲಿಯನ್ನು ತೆಗೆದು ಚೋಖಾಮೇಳನನ್ನು ಗರ್ಭಗುಡಿಯಲ್ಲಿ ಕರಕೊಂಡು ಹೋದನು. ಈ ಭಕ್ತಶ್ರೇಷ್ಠನು ಗುಡಿಯಲ್ಲಿ ಕಾಲಿಡಲು ಪಾಂಡುರಂಗನಿಗೆ ಪರಮಹರುಷವಾಯಿತು. ಚೋಖಾಮೇಳನು ದೇವರ ಮುಂದೆನಿಂತು ಪ್ರಾರ್ಥಿಸುವದೊಂದೇ ತಡ; ದೇವರ ಗಲ್ಲಗಳಮೇಲಿರುವ ಬಾಸಾಳಗಳು ಮಾಯವಾದವು. ಮೂರ್ತಿಯು ಮತ್ತೆ ಸುಮನೋಹರವಾಗಿ ತೋರಹತ್ತಿತು. ಈ ಚಮತ್ಕಾರವು ಹಾ, ಹಾ ಅನ್ನುವಷ್ಟರಲ್ಲಿ ಊರತುಂಬೆಲ್ಲ ಹಬ್ಬಿತು. ಜನರು ಗುಡಿಯಲ್ಲಿ ನೆರೆದರು. ಚೋಖಾಮೇಳನನ್ನು ನಿಂದಿಸುವ ಜನರು ಅನುತಾಪಪಟ್ಟು ಆತನಿಗೆ ಶರಣುಬಂದರು. ಭಗವದನುಗ್ರಹದಿಂದ ಚೋಖಾಮೇಳನು ಪರಿಶುದ್ಧನಾದನೆಂದು ಎಲ್ಲರೂ ಅನ್ನಹತ್ತಿದರು. ಅಂದಿನಿಂದ ಆ ಭಕ್ತಶ್ರೇಷ್ಠನು ದೇವರ ಗುಡಿಯೊಳಗೆ ನಿಶ್ಶಂಕೆಯಿಂದ ಬರಹತ್ತಿದನು. ಪ್ರತ್ಯಕ್ಷ ಭಗವಂತನೇ ಕೃಪೆಮಾಡಿದ ಬಳಿಕ ಪತಿತರು ಪಾವನರಾಗುದದೇನಾಶ್ಚರ್ಯವು?

ಪ್ರಿಯವಾಚಕರೇ, ಭಾಗೀರಥಿಯು ಸರ್ವರ ಮಲಾಪಹರಣವನ್ನು ಮಾಡುವಂತೆ ಪಾಂಡುರಂಗನಲ್ಲಿದ್ದ ಚೋಖಾಮೇಳನ ಶುದ್ಧಭಾವವು ಅವನನ್ನು ಪವಿತ್ರೀಕರಿಸಿತು! ಈ ಮಹಾನುಭಾವನಂಥ ಶುದ್ಧ ಭಾವನೆಯವರು ಯಾವ ಜಾತಿ

ಯಲ್ಲಿ ಹುಟ್ಟಿದರೂ ಅವರು ಲೋಕಪೂಜ್ಯರಲ್ಲವೆ? ಇದರ ಮರ್ಮವನ್ನರಿಯದೆ ನಾನು ಹೆಚ್ಚು ನಾನು ಹೆಚ್ಚು ಎಂದು ಬಡಿದಾಡುವ ಜಾತಿ ಜಾತಿಗಳನ್ನು ನೋಡಿದರೆ ನಿಜವಾದ ಧಾರ್ಮಿಕನಿಗೆ ವ್ಯಸನವಾಗದೆ ಇರದು! ಜಾತಿಯ ದುರಭಿಮಾನವು ಹುರಿದುಹೋಗಿ, ಸಮಾಜದಲ್ಲಿ ಸ್ವಚ್ಛವಾದ ಪ್ರೇಮಪ್ರಕಾಶವು ಬೀಳಬೇಕಾದರೆ ಇಂಥ ಮಹಾನುಭಾವರ ಸಚ್ಚರಿತ್ರಗಳ ಸೂಕ್ಷ್ಮಾವಲೋಕನವು ಅತ್ಯವಶ್ಯವೆಂಬದನ್ನು ಬರೆಯುವ ಕಾರಣವಿಲ್ಲ. ಈ ಮಹಾನುಭಾವನ ಚರಿತ್ರದಿಂದ ಭಗವಂತನು ಶ್ರೇಷ್ಠತ್ವವನ್ನು ಯಾತಕ್ಕೆ ಕೊಟ್ಟಿರುವನೆಂಬದು ಸ್ಪಷ್ಟವಾಗಿ ತಿಳಿಯುವಂತಿರುವದು. ತಾವು ಶ್ರೇಷ್ಠರೆಂಬ ಅಭಿಮಾನವನ್ನು ತಾಳುವಂಥವರು ತಮ್ಮಲ್ಲಿ ಶುದ್ಧಭಾವನೆಯು ಎಷ್ಟರಮಟ್ಟಿಗೆ ಇರುವದೆಂಬದನ್ನು ತೂಗಿ ನೋಡಿಕೊಳ್ಳುವದು ಇಷ್ಟವಾಗಿರುವದು!

---

## ಸೂರದಾಸ.



ಈ ಜಗತ್ತಿನಲ್ಲಿ ಮನುಷ್ಯರೂಪದಿಂದ ಹುಟ್ಟಿ ಪರಮಾತ್ಮನ ಅಗಾಧ ಲೀಲೆಗಳನ್ನು ವರ್ಣಿಸುತ್ತಲೂ, ಅವನ ನಾಮಸಂಕೀರ್ತನೆಯನ್ನು ಮಾಡುತ್ತಲೂ, ಜನರನ್ನು ಪುನೀತರನ್ನಾಗಿ ಮಾಡಿ, ಕೇವಲ ದೇವಾಂಶರೆಂದು ಖ್ಯಾತಿಯನ್ನು ಪಡೆದಂಥ ಅವತಾರಿಕ ಸತ್ಪುರುಷಸಮುದಾಯದಲ್ಲಿ ಸೂರದಾಸನೊಬ್ಬನಾಗಿರುವನು. ಈ ಮಹಾಪುರುಷನು ಭರತಖಂಡದಲ್ಲಿ ಪುಣ್ಯಪ್ರದಾಯಕವೂ, ಶ್ರೀಕೃಷ್ಣಪರಮಾತನ ಪ್ರೇಮಸ್ಥಾನವೂ ಆದ ಮಥುರೆಯಲ್ಲಿ ಹುಟ್ಟುಗುರುಡನಾಗಿ ಜನಿಸಿದನು. "ಬೀಜಕ್ಕೆ ಬಿಟ್ಟುದುದನ್ನು ಹೀಚಿನಲ್ಲಿಯೇ ನೋಡು." ಎಂಬ ನಾಣ್ಣುಡಿಯಂತೆ ಬಾಲ್ಯದೆಶೆಯಲ್ಲಿಯೇ ಸೂರದಾಸನ ಶಾಂತಸ್ವಭಾವವೂ, ವಿಮಲಸದ್ಗುಣಗಳೂ ಪ್ರಕಟವಾಗುತ್ತಿದ್ದವು. ಇವನ ದೇವಬ್ರಾಹ್ಮಣರಲ್ಲಿದ್ದ ಶ್ರದ್ಧೆಯೂ, ಪರಮಾತ್ಮನಲ್ಲಿದ್ದ ಅವಿಚಲವಾದ ಭಕ್ತಿಯೂ, ಭಗವನ್ನಾಮಭಜನೆಯ ಲವಲವಿಕೆಯೂ ಅವರ್ಣನೀಯವಾಗಿದ್ದವು. ದೊಡ್ಡವನಾದ ಮೇಲಂತೂ ಈ ಮಹಾತ್ಮನ ದೇವರ ಮೇಲಿನ ನಿಷ್ಠೆಯು ಹೆಚ್ಚು ಹೆಚ್ಚು ವೃದ್ಧಿಂಗತವಾಗುತ್ತ ನಡೆಯಿತು. ಹುಟ್ಟುಗುರುಡನಾದ ಈ ಪುಣ್ಯಶಾಲಿಗೆ ಪ್ರತ್ಯಕ್ಷ ಮೂರ್ತಿಪೂಜೆಗೆಯ್ಯುವದು

ದುಃಸಾಧ್ಯವಾಗಿದ್ದ ಪ್ರಯುಕ್ತ ಇವನು ಎಲ್ಲಿಯಾದರೂ ನಿರ್ಜನಪ್ರದೇಶದಲ್ಲಿ ಕುಳಿತು, ಮಾನಸಪೂಜೆಯಲ್ಲಿ ಆಸಕ್ತನಾಗಿ ಆನಂದಭರಿತನಾಗುತ್ತಿದ್ದನು. ಇವನು ಸ್ವಲ್ಪ ಕಾಲದಲ್ಲಿಯೇ ಅಸಮಾನನಾದ ಗವಾಯಿಯೂ, ಅಪ್ರತಿಮಕೀರ್ತನಕಾರನೂ ಆದನಲ್ಲದೆ ದಿನಾಲು ಪರಮಾತ್ಮನಿಗೋಸುಗ ಒಂದೊಂದು ಹೊಸ ಹೊಸ ಪದ್ಯವನ್ನು ರಚಿಸಿ ಗಾನ ಮಾಡಹತ್ತಿದನು. ಸಜ್ಜನರದರ್ಶನಾದಿಗಳಿಂದ ಪುನೀತನಾಗುವದಕ್ಕೂ, ಸತ್ಪುರುಷರ ಚರಿತ್ರಗಳನ್ನು ಓದುವದಕ್ಕೂ ತನಗೆ ದುಃಸಾಧ್ಯವಿರುವದನ್ನು ನೆನೆದುಕೊಂಡು ಒಮ್ಮೊಮ್ಮೆ ಇವನು ಬಹುಪರಿಯಾಗಿ ಮಿಡುಕುತ್ತಿದ್ದನು; ಆದರೆ ಪೂರ್ವಾರ್ಜಿತಕರ್ಮಕ್ಕೆ ಯಾರೇನು ಮಾಡುವರು? ಎಂದು ತನ್ನಷ್ಟಕ್ಕೆ ತಾನೇ ಸಮಾಧಾನವನ್ನು ಹಚ್ಚಿಕೊಂಡು ಸುಮ್ಮನಾಗುವನು. ಈ ಮಹಾನುಭಾವನು ತನ್ನ ಆಯುಷ್ಯದ ಸದ್ವಿನಿಯೋಗವನ್ನು ಮಾಡುತ್ತ ಕುಸು ದಿವಸಗಳಲ್ಲಿಯೇ ಬ್ರಹ್ಮಜ್ಞಾನವನ್ನು ಸಂಪಾದಿಸಿದನು. ಇದರಿಂದ ನಮ್ಮ ಚರಿತ್ರನಾಯಕನಿಗೆ ತನ್ನ ಪೂರ್ವಜನ್ಮದ ಸ್ಮರಣೆಯು ಚೆನ್ನಾಗಿ ಆಯಿತು.

ಒಂದಾನೊಂದುಸಮಯದಲ್ಲಿ ಇವನ ಅನುಯಾಯಿಗಳು—ಪುಣ್ಯಾಶಾಲಿಯೇ ನೀನೀಪರಿಯಾಗಿ ಶ್ರಮಬಡುತ್ತ ಭಗವದ್ದಯೆಯನ್ನು ಸಂಪಾದಿಸಿದರೂ, ನಿನ್ನ ಅಂಧತ್ವವು ಏಕೆಪರಿಹಾರವಾಗಲೊಲ್ಲದು? ಎಂದು ಇವನಿಗೆ ಪ್ರಶ್ನಮಾಡಿದರು. ಆಗ ಸೂರದಾಸನು "ಕ್ಷರಾಕ್ಷರನಾದ ಶ್ರೀಮನ್ನಾರಾಯಣನು ನರರೂಪಿಯಾಗಿ ದ್ವಾಪರಯುಗದಲ್ಲಿ ಅವತರಿಸಿದಾಗ ಅವನು ಸಾಮಾನ್ಯಮನುಷ್ಯರಂತೆ ತನ್ನ ಪತ್ನಿಯಾದ ಸತ್ಯಭಾಮೆಯೊಡನೆ ಪ್ರಣಯಕಲಹದ ಮೂಲಕ ಮಾತಾಡುವದನ್ನು ಬಿಟ್ಟಿದ್ದನಲ್ಲದೆ ಕೆಲವುದಿನಗಳ ವರೆಗೆ ಅವಳ ಅಂತಃಪುರಕ್ಕೆ ಹೋಗುವದನ್ನೂ ತ್ಯಜಿಸಿದ್ದನು. ತನ್ನ ಪ್ರಿಯರಮಣನು ಅನೇಕ ದಿನಗಳಾದರೂ ತನ್ನ ಮಂದಿರಕ್ಕೆ ಬಾರದಿರಲು ಸತ್ಯಭಾಮೆಯು ಅತ್ಯಂತ ವ್ಯಾಕುಲಿತಳಾಗಿ ವಿರಹವ್ಯಥೆಯನ್ನು ಸಹಿಸದಂತಾದಳು. ಕೃಷ್ಣನ ಮನಸ್ಸಿನಲ್ಲಿ ತನ್ನ ಬಗ್ಗೆ ಅನುರಾಗವನ್ನು ಹೇಗೆ ಹುಟ್ಟಿಸಬಹುದು; ಅವನನ್ನು ಇಲ್ಲಿಗೆ ಯಾವ ತರದಿಂದ ಬರಮಾಡಿಕೊಳ್ಳಬಹುದು. ಎಂಬಿವೇ ಮೊದಲಾದ ವಿಚಾರತರಂಗಗಳಲ್ಲಿ ಸತ್ಯಭಾಮೆಯು ಮಗ್ನಳಾಗಿರಲು, ಯಾದವಕುಲೋತ್ಪನ್ನನಾದ ಅಕ್ರೂರನ ಆಗಮನವು ಅಲ್ಲಿ ಅಕಸ್ಮಾತ್ತಾಗಿ ಸಂಭವಿಸಿತು. ಪತಿದರ್ಶನೋತ್ಸುಕಳಾದ ಅವಳು ಈ ಮಹಾಮಹಿಮನಿಂದಾದರೂ, ತನ್ನ ಬಯಕೆಯು ಕೈಗೂಡಬಹುದೆಂದು ಯೋಚಿಸಿ, ಅವನನ್ನು ಕುರಿತು, ಪತಿಸಂದರ್ಶನದ ತನ್ನ ಅಭೀಷ್ಟವನ್ನು ಅರುಹಿದಳು.

ಸತ್ಯಭಾಮೆಗೆ ಶ್ರೀ ಕೃಷ್ಣಪರಮಾತ್ಮನ ದರ್ಶನವನ್ನು ಮಾಡಿಸುವದು ದುಸ್ಸಾಧ್ಯವಿರುವದೆಂದೂ ಇವಳ ಪ್ರಾಣವನ್ನು ವಿರಹಾಗ್ನಿಯು ನಿರರ್ಥಕವಾಗಿ ದಹಿಸಿಬಿಡುವದೆಂದೂ ಅಕ್ರೂರನು ತಿಳಿದು, ತಾನೇ ಶ್ರೀ ಕೃಷ್ಣನ ವೇಷವನ್ನು ತಕ್ಕೊಂಡು ಇವಳಿಗೆ ಸಮಾಧಾನವನ್ನೀಯುವದು ಸಯುಕ್ತಿಕವೆಂದು ನಿರ್ಧರಿಸಿ, ನಿನ್ನಿಷ್ಟಯಂತೆ ನಿನ್ನೆಡೆಗೆ ಶ್ರೀ ಕೃಷ್ಣನನ್ನು ಕಳುಹಿಸುವೆನೆಂದು ಅವನು ಆಕೆಗೆ ಹೇಳಿ ಹೋದನು. ಇತ್ತ ಸತ್ಯಭಾಮೆಯು ತನ್ನ ಮನೋಬಯಕೆಯು ಕೈಗೂಡುವ ಸಮಯವು ಪ್ರಾಪ್ತವಾಗುವದೆಂಬ ಸಂತೋಷದಿಂದ ತಾನು ರಮಣನನ್ನು ಹೇಗೆ ಸನ್ಮಾನಿಸಬೇಕು? ಆತನ ಎದುರಿಗೆ ಹೇಗೆ ನಿಲ್ಲಬೇಕು? ಏನೆಂದು ಮಾತಾಡಬೇಕು? ಎಂಬಿವೇ ಮೊದಲಾದ ವಿರಹವಿಚಾರದಲ್ಲಿ ಆಸಕ್ತಳಾಗಿ ಆ ದಿನವನ್ನು ಕಳೆದಳು.

ಮರುದಿನ ಅಕ್ರೂರನು ಶ್ರೀ ಕೃಷ್ಣವೇಷವನ್ನು ಧರಿಸಿ, ಸತ್ಯಭಾಮೆಯ ಅಂತಃಪುರಕ್ಕೆ ಪ್ರಾಪ್ತನಾದನು. ಇನ್ನು ಆತನು ಭಾಮೆಯೊಡನೆ ಅವಳ ಮನೋತೃಪ್ತಿಗಾಗಿ ಅನೇಕ ಪ್ರಣಯ ಲೀಲೆಗಳನ್ನು ಪ್ರಾರಂಭಿಸಬಹುದೆಂದು ಆಲೋಚಿಸುವಷ್ಟರಲ್ಲಿ ಸರ್ವವ್ಯಾಪಿಯೂ, ಸರ್ವಾಂತರ್ಯಾಮಿಯೂ ಆದ ಶ್ರೀ ಕೃಷ್ಣನು, "ಇನ್ನು ಇವರೀರ್ವರಿಗೆ ಅವಕಾಶವನ್ನಿತ್ತರೆ, ಅನರ್ಥವಾಗಬಹುದೆ"ಂದು ತಿಳಿದು, ತತ್‌ಕ್ಷಣವೇ ಭಾಮೆಯ ಅಂತಃಪುರದಲ್ಲಿ ಪ್ರಕಟನಾದನು. ಆಗ ಅವನು ಛದ್ಮವೇಷಧಾರಿಯಾದ ಅಕ್ರೂರನನ್ನು ಕುರಿತು—"ಇಂಥ ಕಾರ್ಯದಲ್ಲಿ ಪ್ರವರ್ತಿಸಿದ್ದಕ್ಕಾಗಿ ಕಲಿಯುಗದಲ್ಲಿ ನೀನು ಜನ್ಮಾಂಧನಾಗಿ ಹುಟ್ಟಿ, ಸಾಂಸಾರಿಕ ಯಾತನೆಯನ್ನನುಭವಿಸು" ಎಂದು ಶಾಪವನ್ನು ಕೊಟ್ಟನು. ಸತ್ಯಭಾಮೆಯು ನಿಜವಾದ ವಿಚಾರವನ್ನು ಮಾಡದೆ, ವಿರಹಾತುರದಿಂದ ಇಂಥ ಅಯೋಗ್ಯಕಾರ್ಯವನ್ನಾರಂಭಿಸಿದ್ದಕ್ಕಾಗಿ, ಆಕೆಗೆ ಮೃತ್ಯುಲೋಕದಲ್ಲಿ ದಾಸಿಯಾಗಿ ಸೇವಿಸುವಂತೆ ಶಾಪವನ್ನು ಕೊಟ್ಟನು. "ಬಾಂಧವರೇ, ಕಾಲಾನುರೋಧದಿಂದ ಕಲಿಯುಗವು ಪ್ರಾಪ್ತಿಯಾಗಲು, "ಬಿತ್ತಿದ್ದನ್ನು ಬೆಳಕೋ" ಎಂಬ ಗಾದೆಗೆ ಸರಿಯಾಗಿ ಆ ಅಕ್ರೂರನ ಆತ್ಮವು ಈ ಜನ್ಮಾಂಧವಾದ ಶರೀರ ಗೃಹವನ್ನು ಪ್ರವೇಶಿಸಿ, ಸೂರದಾಸನೆಂಬ ಹೆಸರಿನಿಂದ ತೊಳಲಾಡುತ್ತಿರುವದು. ಶ್ರೀ ಕೃಷ್ಣನ ಶಾಪದಿಂದ ಯೋಗಭ್ರಷ್ಟನಾದ ನಾನು ಆತನ ಚರಣಕಮಲಗಳು ಸಿಗುವವರೆಗೂ ಎಂಥೆಂಥ ಭವಯಾತನೆಯನ್ನು ಅನುಭವಿಸುವೆನೋ ಹೇಳಲಿಕ್ಕಾಗದು," ಎಂದು ಹೇಳಿದನು.

ಈ ಆಶ್ಚರ್ಯಕರವಾದ ಸೂರದಾಸನ ಪೂರ್ವಜನ್ಮದ ಚರಿತ್ರೆಯನ್ನು ಕೇಳಿ ಸರ್ವ ಜನರು ಬೆರಗಾದರು. ಈತನು ಸತ್ಯವಾಗಿಯೂ ದೇವಾಂಶವಾಗಿರುವ

ನೆಂದು ಅನ್ನಹತ್ತಿದರು ಇವನ ಬೋಧವನ್ನೂ, ಹರಿಕೀರ್ತನೆಯನ್ನೂ ಕೇಳುವ ದಕ್ಕಾಗಿ ಅನೇಕ ಜನರು ಬರಹತ್ತಿದರು. ಪರಮಾತ್ಮನಲ್ಲಿ ಅಚಲವಾದ ಭಕ್ತಿ ಯುಳ್ಳವನೂ, ಪ್ರಾಸಾದಿಕ ಕವಿಯೂ ಆದ ನಮ್ಮ ಚರಿತ್ರನಾಯಕನು ಎಲ್ಲರನ್ನೂ ಆನಂದಭರಿತರನ್ನಾಗಿ ಮಾಡುತ್ತಿದ್ದನು. ಒಮ್ಮೆ ಮಥುರೆಯಲ್ಲಿ ಉತ್ಸವವಾಗುವ ಸಮಯದಲ್ಲಿ ಹುಟ್ಟುಗುರುಡನಾದ ನಮ್ಮ ಸೂರದಾಸನಿಗೆ ಶ್ರೀಕೃಷ್ಣಪರಮಾತ್ಮ ನನ್ನು ನೋಡುವ ಇಚ್ಛೆಯು ಉತ್ಪನ್ನವಾಯಿತು. ಆಗ ಅವನು ಮನೆಯಿಂದ ಹೊರಟು ಬೀಳುತ್ತ ಏಳುತ್ತ ಕೋಲಿನ ಸಹಾಯದಿಂದ ದೇವಾಲಯದ ಮಹಾ ದ್ವಾರದವರೆಗೆ ಬಂದು ಮುಟ್ಟಿದನು. ಅಲ್ಲಿ ಸಾಷ್ಟಾಂಗಪ್ರಣಾಮವನ್ನು ಮಾಡಿ, ಪರಮಾತ್ಮನನ್ನು ಕುರಿತು:—ಹೇ ದೀನಬಂಧುವೇ, ಸದಾಕಾಲ ನಿನ್ನ ನಾಮಾ ಮೃತವನ್ನೇ ಗಾನಮಾಡುತ್ತಿರುವ ನನಗೆ ಈ ಅವಸ್ಥೆಯನ್ನು ಯಾಕೆ ಕೊಟ್ಟಿರುವಿ? ಕೇವಲ ಸತ್ಯಭಾಮೆಯ ಸಮಾಧಾನಕ್ಕೋಸ್ಕರವಾಗಿಯೇ ನಾನು ನಿನ್ನ ವೇಷ ಧರಿಸಿ, ಆಕೆಯ ಅಂತಃಪುರದಲ್ಲಿ ಪ್ರವೇಶಮಾಡಿದ ಸಮಯದಲ್ಲಿ ನಾನು ಶುದ್ಧ ಮನಸ್ಕನಿದ್ದೆನೆಂಬದನ್ನು ನೀನರಿಯೆಯಾ? ಹಾಗಾದರೆ ನೀನು ಶಾಪವನ್ನೇಕೆ ಕೊಟ್ಟೆ? ಜನ್ಮಾಂತರ ಹೊಂದಿದ ನನಗೆ ಈ ಕಲಿಯುಗದಲ್ಲಿ ನಿನ್ನ ರೂಪವು ಹೇಗೆ ಗೋಚರವಾಗಬೇಕು? ಹೇ ಭಕ್ತವತ್ಸಲ, ದೀನದಯಾಳುವೇ, ಭಕ್ತಾಭಿಮಾನಿ ಯೆಂಬ ಬಿರುದನ್ನು ಧರಿಸಿದ ನೀನು ನನ್ನನ್ನು ಹೇಗೆ ಸಮಾಧಾನವನ್ನು ಬಡಿ ಸುವೆ? ಎಂದು ಪ್ರಾರ್ಥಿಸಿ ಕಣ್ಣೀರು ಸುರಿಸಿದನು. ಅವನ ಈ ತರದ ಶುದ್ಧಾಂ ತಃಕರಣದಿಂದ ಹೊರಡುತ್ತಿರುವ ಪ್ರೇಮೋದ್ಗಾರಗಳಿಗೆ ಪರಮಾತ್ಮನ ಅಂತಃಕರ ಣವು ಕರಗಿ ನೀರಾಗಿ ಆ ಭಕ್ತನ ಮನೋಭೀಷ್ಟವನ್ನು ಪೂರಯಿಸಿದನು.

ಆಗ ಸೂರದಾಸನು ಸಗುಣ ಪರಮಾತ್ಮನ ರೂಪವನ್ನು ನೋಡಿ, ಆನಂದ ಬಾಷ್ಪಗಳನ್ನು ಸುರಿಸಹತ್ತಿದನು. ನಂತರ ಸಾಷ್ಟಾಂಗ ಪ್ರಣಾಮವನ್ನು ಮಾಡಿ "ಹೇ ಭಕ್ತಾಭಿಮಾನಿಯೇ, ದೀನಬಂಧುವೇ ನಿನ್ನ ದರ್ಶನದಿಂದ ನಾನು ಕೃತಾರ್ಥ ನಾದೆನು. ನೇತ್ರಗಳ ಮುಖ್ಯೋದ್ದೇಶವು ನಿನ್ನ ಸ್ವರೂಪಾವಲೋಕನವೇ ಆಗಿ ರವದು. ತತ್ಪ್ರಯುಕ್ತ ಅದೀಗ ಸಂಪ್ರಾಪ್ತಿಯಾಯಿತು. ಈ ಸಂಸಾರದ ಅನೇಕ ವ್ಯವಹಾರಗಳಲ್ಲಿ ಹಲಕೆಲವು ಸಾರೆ ಈ ನೇತ್ರಗಳ ದುರುಪಯೋಗವಾಗಿ ಮನುಷ್ಯನು ವಿಷಯವ್ಯಾಮೋಹದ ಕೈವಶನಾಗುವನು. ಅದಕಾರಣದಿಂದ ಪೂರ್ವಸ್ಥಿತಿಯನ್ನೇ ದಯಪಾಲಿಸಿ, ನಿನ್ನ ನಾಮಾಮೃತವನ್ನೇ ಭಜಿಸುವ ಭಗವದ್ ಭಕ್ತನಾಗುವಂತೆ ನನ್ನನ್ನು ಅನುಗ್ರಹಿಸು." ಎಂದು ಪ್ರಾರ್ಥಿಸಿದನು. ಕೂಡಲೆ

ಭಕ್ತಾಭಿಮಾನಿಯಾದ ಶ್ರೀ ಕೃಷ್ಣನು ಸೂರದಾಸನ ಕೋರಿಕೆಯಂತೆ ಅವನ ನೇತ್ರ ಗಳನ್ನು ಮೊದಲಿದ್ದಂತೆ (ಕುರುಡ) ಮಾಡಿದನು.

ಇದೇ ರೀತಿಯಿಂದ ಸೂರದಾಸನು ಧ್ಯಾನಯೋಗದಲ್ಲಿ ನಿಮಗ್ನನಾಗಿ ಹರಿ ನಾಮ ಸಂಕೀರ್ತನೆಯಲ್ಲಿಯೇ ಕಾಲಕಳೆಯುತ್ತಿರಲು, ಭಾರತಭೂಮಿಯಲ್ಲಿ ಪುಣ್ಯಸ್ಥಾನವೆನಿಸಿಕೊಂಡ ಉಜ್ಜಯಿನೀ ನಗರದಲ್ಲಿ ಪುಣ್ಯಶಾಲಿಯಾದ ಒಬ್ಬ ರಾಜನು ರಾಜ್ಯವಾಳುತ್ತಿದ್ದನು. ಇವನ ಆಶ್ರಯದಲ್ಲಿ ಅನೇಕ ಗಾಯನ ಶಾಸ್ತ್ರ ವಿಶಾರದರಾದ ಗವಾಯಿಗಳಿರುತ್ತಿದ್ದರು. ಇವರಲ್ಲಿ ತಾನಸೇನನೆಂಬವನು ಅಸ ಮಾನ ಗವಾಯಿಯು. ಇವನ ಗಾಯನಕ್ಕೆ ಆರಂಭವಾದ ಕೂಡಲೆ ದೀಪಗಳು ತಮ್ಮಿಂದ ತಾವೇ ಹತ್ತುವದೂ, ಅರ್ಧಕುಸುಮಗಳೂ ತಮ್ಮಿಂದ ತಾವೇ ಅರಳು ವದೂ, ಇವೇ ಮೊದಲಾದ ಅಲೌಕಿಕ ಕಾರ್ಯಗಳಾಗುತ್ತಿದ್ದವು. ತಾನಸೇನನು ಗಾಯನಶಾಸ್ತ್ರವಿಶಾರದನಿದ್ದನಲ್ಲದೆ, ನಿಜವಾದ ಮರ್ಮಜ್ಞನೂ, ಅತ್ಯಂತ ನಿರಭಿ ಮಾನಿಯೂ ಇದ್ದನು. ಒಂದಾನೊಂದು ದಿನ ರಾಜನು ತಾನಸೇನನ ಮನಸ್ಸಿನ ಪರೀಕ್ಷೆಗೋಸುಗ ಅವನನ್ನು ಕುರಿತು—"ನಿನ್ನಂಥ ಗಾಯನ ವಿದ್ಯಾವಿಶಾರ ದನೂ, ಅಪ್ರತಿಮ ಕವಿತಾಕೋವಿದನೂ, ಸರ್ವಜನಾನಂದದಾಯಕನೂ ಆದ ಮನುಷ್ಯನನ್ನು ನಾನೆಲ್ಲಿಯೂ ಕಾಣಲಿಲ್ಲ; ನಿನ್ನಂಥ ಅಲೌಕಿಕ ರತ್ನವು ಈ ರಾಜ್ಯ ದಲ್ಲಿದ್ದದ್ದು ನಮ್ಮ ಪೂರ್ವಾರ್ಜಿತ ಭಾಗ್ಯವು; ನೀನು ಸರ್ವಸ್ವಾರ್ಥವನ್ನು ಪರಿ ತ್ಯಜಿಸಿ, ನಮ್ಮಲ್ಲಿ ಭೂಷಣಾಸ್ಪದನಾಗಿಯೂ, ಸ್ಥಿರವಾಗಿಯೂ ಇದ್ದದ್ದಕ್ಕೆ ನಾವೆಷ್ಟು ಹೊಗಳಿದರೂ ಸ್ವಲ್ಪವೇ" ಎಂದು ಹಲವು ಪರಿಯಾಗಿ ಮುಖಸ್ತುತಿ ಯನ್ನು ಮಾಡಿದನು.

ಆಗ ಚಾಣಾಕ್ಷನಾದ ತಾನಸೇನನು, ರಾಜನ ಮನೋಗತವನ್ನು ಕೂಡಲೆ ಗೊತ್ತುಹಿಡಿದು, "ರಾಜಾಧಿರಾಜನೇ, ಸಂಪೂರ್ಣವಿಚಾರಕ್ಕೆ ಆಸ್ಪದ ಕೊಡದೆ; ಈ ತರದ ಮುಖಸ್ತುತಿಗೆ ಮರುಳಾಗುವ ಹುಚ್ಚ ಗಾಯಕನು ನಾನಲ್ಲ. ಜಗತ್ತಿ ನಲ್ಲಿ ಸೇರಿಗೆ ಸವ್ವಾಸೇರು ಇರುವದು ಸ್ವಾಭಾವಿಕವು; ಬ್ರಹ್ಮದೇವರಿಗೆ ಸೃಷ್ಟಿ ರಚನಾಚಾತುರ್ಯದಿಂದುಂಟಾದ ಗರ್ವವನ್ನು ವಿಶ್ವಾಮಿತ್ರನ ನೂತನ ಜಗದ್ರಚ ನೆಯು ಹೋಗಲಾಡಿಸಲಿಲ್ಲವೇ? ಅಗಸ್ತ್ಯಮಹಾಮುನಿಯ ಆಚಮನ ಮಾತ್ರ ದಿಂದ ಅಹಂಕಾರಿಯಾದ ಸಮುದ್ರನಾಥನು ಪಶ್ಚಾತ್ತಾಪಪಡಲಿಲ್ಲವೆ? ಭೀಮಾ ರ್ಜುನರ ಗರ್ವವನ್ನು ಶ್ರೀಕೃಷ್ಣನು ಗಾರುಡಿಯಾಗಿ ಪರಿಹರಿಸಲಿಲ್ಲವೇ? ಹೀಗಿದ್ದು ಪಾಮರನಾದ ನಾನೆಷ್ಟರವನು? ಎಂಥ ಗವಾಯಿಯು? ನನ್ನಂಥವರು ಜಗತ್ತಿನಲ್ಲಿ

ವಿರಲವೆಂದೆನ್ನುವ ನಿಮ್ಮ ಮಾತುಗಳು ಯಥಾರ್ಥವೇ?'' ಎಂದು ಉತ್ತರಕೊಟ್ಟನು.

ತಾನಸೇನನ ಈ ತರದ ನಿಗರ್ವದ ವಾಣಿಯನ್ನು ಕೇಳಿ, ರಾಜನು ಸಂತೋಷಭರಿತನಾಗಿ, "ಸುವಿಚಾರಿಯೇ ನೀನನ್ನುವದು ಯಥಾರ್ಥವಿದೆ. ಆದರೆ ಸರ್ವ ಗುಣಗಳಿಂದಲೂ ನಿನ್ನನು ಸರಿಗಟ್ಟುವವನು ಸಿಗಲಿಕ್ಕಿಲ್ಲವೆಂದು ನನ್ನ ತಿಳುವಳಿಕೆ ಇದೆ. ಅದು ತಪ್ಪಾಗಿದ್ದರೆ ನನ್ನ ಸಂಶಯ ನಿವಾರಣೆಮಾಡಬೇಕು.'' ಎಂದನು.

ಆಗ ತಾನಸೇನನು—ಭೂಪತಿಯೇ, ಶ್ರೀಕೃಷ್ಣಪರಮಾತ್ಮನ ವಾಸಸ್ಥಳವಾಗಿದ್ದ ಮಥುರೆಯಲ್ಲಿ ಸೂರದಾಸನೆಂಬ ಭಗವದ್ಭಕ್ತನಿರುವನು. ಆತನು ಪೂರ್ವ ಜನ್ಮದಲ್ಲಿ ಯಾದವ ಕುಲದಲ್ಲಿ ಹುಟ್ಟಿದ ಅಕ್ರೂರನೆಂದು ಜನರು ಅನ್ನುತ್ತಿರುವರು. ಆ ಸೂರದಾಸನು ಜನ್ಮಾಂಧನು; ಅವನ ಸ್ಫೂರ್ತಿದಾಯಕವಾದ ಹರಿನಾಮ ಸಂಕೀರ್ತನವೂ ಅಪ್ರತಿಮ ಕವಿತ್ವಶಕ್ತಿಯೂ ಯಾವ ನಾಸ್ತಿಕನನ್ನಾದರೂ ಆನಂದಸಾಗರದಲ್ಲಿ ಮುಳುಗಿಸದೆ ಬಿಡವು, ಎಂದು ಹೇಳಿದನು. ಕೂಡಲೆ ಮಥುರೆಯಲ್ಲಿದ್ದ ಸೂರದಾಸನನ್ನು ತನ್ನ ದರ್ಬಾರಕ್ಕೆ ಕರೆತರಬೇಕೆಂದು ರಾಜನು ಸೇವಕ ಜನರಿಗೆ ಹೇಳಿ ಕಳುಹಿದನು. ಭಗವನ್ನಾಮ ಭಜಕನೂ ಹರಿನಾಮ ಸಂಕೀರ್ತನಲೋಲನೂ ಆದ ಸೂರದಾಸನು ರಾಜಾಜ್ಞೆಯಂತೆ ದರಬಾರಕ್ಕೆ ಬರಲು, ರಾಜನು ಅವನ ಆಗಮನದಿಂದ ಸಂತುಷ್ಟನಾಗಿ ಅವನಿಗೆ ಯೋಗ್ಯ ಸನ್ಮಾನವನ್ನು ಮಾಡಿ ಅವನ ಹರಿಕೀರ್ತನ ಶ್ರವಣದ ಬಗ್ಗೆ ತನ್ನ ಆತುರತೆಯನ್ನು ತೋರಿಸಿದನು.

ಶ್ರೀಹರಿ ಲೀಲೆಗಳನ್ನು ಭೂಲೋಕದ ಜೀವಿಗಳಿಗೆ ಬೋಧಿಸಿ ಅವರನ್ನು ಮುಮುಕ್ಷುಗಳನ್ನಾಗಿ ಮಾಡಬೇಕೆಂದು ಅವತಾರ ಧಾರಣಮಾಡಿರುವ ನಮ್ಮ ಸೂರದಾಸನು ರಾಜನ ಈ ತರದ ಅಭಿಲಾಷೆಗೆ ಕೂಡಲೆ ಸಮ್ಮತಿಸಿದನು. ವೀಣಾ ಮೃದಂಗಗಳ ಸಿದ್ಧತೆಯಾದೊಡನೆಯೇ ಹರಿಕೀರ್ತನಾರಂಭವಾಯಿತು. ಮೊದಲೇ ಭಗವದ್ಭಕ್ತನು ಅದರಲ್ಲಿಯೂ ಕೂಡ ಪ್ರಾಸಾದಿಕವಾಣಿಯುಳ್ಳವನು; ಕೇಳುವದೇನದೆ? ಅವನ ಕೀರ್ತನಶ್ರವಣಕ್ಕಾಗಿ ದೇವಾಧಿದೇವತೆಗಳು ಕೂಡ ಆಕಾಶದಲ್ಲಿ ಬಂದು ನಿಂತರು. ರಂಭಾ ಮೇನಕೆ ಮೊದಲಾದ ಅಪ್ಸರಾಸ್ತ್ರೀಯರು ಇವನ ಗಾಯನವಿದ್ಯೆಗೆ ನಾಚಿಕೊಂಡರು. ಪ್ರತ್ಯಕ್ಷ ಶ್ರೀಮನ್ನಾರಾಯಣನೇ ಅದೃಶ್ಯರೂಪದಿಂದ ಬಂದು ಆ ಸಭೆಯಲ್ಲಿ ನೃತ್ಯವನ್ನು ಮಾಡಹತ್ತಿದನು. ಇಂಥ ಭಕ್ತಶಿರೋಮಣಿಯ ರಸಾಳವಾದ ವಾಣಿಯಿಂದ ದೇವಾಧಿದೇವತೆಗಳಿಗೇ ಈ ತೆರವಾಗಿ ಆನಂದವಾಗಿರಲು ಸಭಿಕರಾದ ನರಜೀವಿಗಳಿಗಾದ ಆನಂದವನ್ನೆಷ್ಟೆಂದು

ವರ್ಣಿಸಬೇಕು? ನೇತ್ರದ್ವಯಗಳಲ್ಲಿ ಆನಂದಭಾಷ್ಪಗಳು ಉದುರುತ್ತಿದ್ದ ರಾಜನು ಎದ್ದು ಬಂದು ಸೂರದಾಸನ ಕಾಲಿಗೆರಗಿದನಲ್ಲದೆ, ಅವನಿಗೆ ಗಾಢಾಲಿಂಗನವನ್ನು ಕೊಟ್ಟನು. ಆ ಕೀರ್ತನ ಶ್ರವಣದಿಂದ ರಾಜನಲ್ಲಿ ವೈರಾಗ್ಯವು ಅಂಕುರಿಸಿತು. ಆಗ ಅವನು ಸೂರದಾಸನನ್ನು ಬಹಳವಾಗಿ ಸ್ತುತಿಸಿ ಸಿಂಹಾಸನದಮೇಲೆ ಕೂಡ್ರಿಸಿ ವಿಧಿಪೂರ್ವಕವಾಗಿ ಪೂಜಿಸಿದನು. ಅಂದಿನಿಂದ ಆ ರಾಜಧಾನಿಯಲ್ಲಿಯ ಎಲ್ಲ ಜನರ ಮುಖದಲ್ಲಿಯೂ ನಮ್ಮ ಚರಿತ್ರನಾಯಕನ ನಾಮವೇ ಭಗವನ್ನಾಮವಾಗಿ ಪರಿಣಮಿಸಿತು. ವಾಚಕಮಹಾಶಯರೇ, ನೋಡಿದಿರಾ ಭಗವದ್ಭಕ್ತರ ಆಟವನ್ನು!

ಇದೇ ಮೇರೆಗೆ ಅಲ್ಲಿ ಸೂರದಾಸನ ಕೀರ್ತನವು ತಿಂಗಳೆರಡು ತಿಂಗಳು ಸಾಗಿತು. ಒಂದಾನೊಂದು ದಿನ ರಾಜಸತಿಯರೆಲ್ಲರು ಕೂಡಿ ಸೂರದಾಸನ ಕೀರ್ತನವನ್ನು ಅಂತಃಪುರದಲ್ಲಿ ಮಾಡಿಸಬೇಕೆಂದು ರಾಜನಿಗೆ ಆಗ್ರಹದಿಂದ ಪ್ರಾರ್ಥಿಸಿದರು. ಸೂರದಾಸನು ನಿಜವಾದ ಭಗವದ್ಭಕ್ತನಿರುವದರಿಂದಲೂ, ಜನ್ಮಾಂಧನಿರುವದರಿಂದಲೂ ರಾಜನು ರಾಣಿಯರ ಮಾತಿಗೆ ಒಪ್ಪಿದನು. ರಾಜಾಜ್ಞೆಯಂತೆ ಅಂತಪುರದಲ್ಲಿ ಸರ್ವಸಿದ್ಧತೆಯಾದೊಡನೆಯೇ ನಮ್ಮ ಚರಿತ್ರನಾಯಕನು ತನ್ನ ಮೇಳದ ಸಿದ್ಧತೆಯನ್ನು ಮಾಡಿಕೊಂಡು ಕೀರ್ತನವನ್ನು ಉಪಕ್ರಮಿಸಿದನು. ಭಕ್ತಶಿರೋಮಣಿಯಾದ ಸೂರದಾಸನ ರಸಾಲವಾಣಿಯು ರಾಣಿಯರ ಕರ್ಣರಂಧ್ರವನ್ನು ಪ್ರವೇಶಿಸಿ ಅವರ ಹೃದಯವನ್ನು ನೀರನ್ನಾಗಮಾಡಿಬಿಟ್ಟಿತು. ಸರ್ವರೂ ಚಿತ್ರದೊಳಗಿನ ಗೊಂಬೆಗಳಂತೆ ಕುಳಿತು ಆನಂದಬಾಷ್ಪಗಳನ್ನು ಧಾರಾಳವಾಗಿ ಸುರಿಸಹತ್ತಿದರು. ಈ ರಾಜಾಂಗನೆಯರಲ್ಲಿ ಶ್ರೀಕೃಷ್ಣನ ಶಾಪದಿಂದ ದಾಸಿಯಾಗಿ ಅವತೀರ್ಣಳಾಗಿದ್ದ ಸತ್ಯಭಾಮೆಯೂ ಇದ್ದಳು. ಕೀರ್ತನಶ್ರವಣದಿಂದ ಅವಳಲ್ಲಿ ಆನಂದೋದ್ರೇಕವು ಉದ್ಭವಿಸಿ ಅವಳಿಗೆ ಪೂರ್ವಜನ್ಮದ ಸಂಸ್ಮರಣವಾಯಿತು. ಆಗ ಅವಳು ತಾನು ಮಾಡಿದ ಕರ್ಮದ ಕ್ಷಮೆಗೋಸುಗ ಶ್ರೀಹರಿಯನ್ನು ಪ್ರಾರ್ಥಿಸಿದಳು. ಭಕ್ತಾಭಿಮಾನಿಯಾದ ಪರಮಾತ್ಮನು ಕೂಡಲೆ ಅವರನ್ನು ತನ್ನ ಚರಣಗಳಲ್ಲಿ ಐಕ್ಯರನ್ನಾಗಿ ಮಾಡಿಕೊಂಡನು.



# ದಾಮಾಜಿಪಂತ



ಯಾವ ಮನುಷ್ಯನ ಸತ್ಕೀರ್ತಿಯು ದಿಗಂತದಲ್ಲಿ ಹಬ್ಬಿರುವದೋ ಆ ಮನುಷ್ಯನು ನಿಜವಾಗಿ ದೊಡ್ಡ ಯೋಗ್ಯತೆಯುವನಿರಲಿಕ್ಕೆ ಬೇಕು. ಹೀಗೆ ಕೀರ್ತಿಶೇಷರಾದವರಲ್ಲಿ ಇಹಲೋಕದ ಶ್ರೇಷ್ಠತ್ವಕ್ಕೆ ಮೆಚ್ಚಿ ಕಷ್ಟಾಳುತನದಿಂದ ದುಡಿದವರಿಗಿಂತ ಪಾರಲೌಕಿಕದ ಶ್ರೇಷ್ಠಪದವಿಗಾಗಿ ಕಾಯಾವಾಚಾ ಮನಸ್ಸಿನಿಂದ ಪರೋಪಕಾರಾದಿ ಸತ್ಕರ್ಮಗಳನ್ನು ಮಾಡಿರುವವರೇ ಶ್ರೇಷ್ಠರು. ಅದರಲ್ಲಿಯೂ ಕಷ್ಟಕಾಲದಲ್ಲಿ ಮಾಡಿದ ಪರೋಪಕಾರದ ಶ್ರೇಯಸ್ಸು ವಿಶೇಷವಾಗಿರುವದು. ಪ್ಲೇಗ, ಕಾಲರಾ, ಇನ್‌ಫ್ಲುಎಂಝಾದಂಥ ಸಾಂಕ್ರಮಿಕರೋಗದ ದಿವಸಗಳಲ್ಲಿ ರೋಗಪೀಡಿತರಿಗೆ ಔಷಧೋಪಚಾರಗಳಿಂದ ಶಕ್ತಿಮೀರಿ ಸಹಾಯ ಮಾಡುವದೂ, ದುಷ್ಕಾಲದ ದಿವಸಗಳಲ್ಲಿ ಅನ್ನ-ವಸ್ತ್ರಗಳನ್ನು ಕೊಟ್ಟು ಹೊಟ್ಟೆಗಿಲ್ಲದೆ ಸಾಯುತ್ತಿರುವ ಅಶನಾಭಾವದ ಜನರನ್ನು ಬದುಕಿಸುವದೂ ಬಹುದೊಡ್ಡ ಕೆಲಸಗಳಾಗಿರುವವು. ಇಂಥ ಪರೋಪಕಾರಕೆಲಸಗಳಿಂದ ಕರ್ತೃವಿನ ಪ್ರಖ್ಯಾತಿಯು ಬಹುಬೇಗ ಆಗುವದಲ್ಲದೆ, ಜಗದೊಡೆಯನ ಅನುಗ್ರಹವಾದರೂ ಅವನಿಗೆ ತತ್ಕಾಲದಲ್ಲಿ ಆಗುವದು. ಒಂದು ಭಯಂಕರ ದುಷ್ಕಾಲದಲ್ಲಿ ತನ್ನ ಸ್ವಾಧೀನದಲ್ಲಿದ್ದ ಸರಕಾರೀ ಕಾಳಿನ ಸಂಗ್ರಹವನ್ನು ಕೇವಲ ಪರೋಪಕಾರಕ್ಕಾಗಿ ಲೂಟಿ ಮಾಡಿಸಿ ಬಹುಜನ ಕಂಗಾಲರ ಜೀವಗಳನ್ನು ಬದುಕಿಸಿ ಶ್ರೀ ಪಾಂಡುರಂಗನ ಅನುಗ್ರಹಕ್ಕೆ ಪಾತ್ರನಾದ ದಾಮಾಜಿಪಂತನೆಂಬ ಭಗವದ್‌ಭಕ್ತನ ಚರಿತ್ರವನ್ನು ಈಗಿನ ಈ ಭಯಂಕರ ದುಷ್ಕಾಲದಲ್ಲಿ ಎಲ್ಲರೂ ವಿಶೇಷವಾಗಿ ವಿಪುಲ ಧಾನ್ಯಸಂಗ್ರಹವುಳ್ಳ ಆಸ್ತಿವಂತ ಜನರು ಓದಿ ಅದರಂತೆ ಯಥಾಶಕ್ತಿ ನಡೆಯುವದು ಅವಶ್ಯವಿದ್ದದರಿಂದ ಅದನ್ನು ಇಲ್ಲಿ ಬರೆಯತೊಡಗುವೆವು.

ಪ್ರಪಂಚದಲ್ಲಿದ್ದು ಪಾರಮಾರ್ಥವನ್ನು ಹ್ಯಾಗೆ ಸಾಧಿಸಬೇಕೆನ್ನುವದಕ್ಕೆ ನಮ್ಮ ದಾಮಾಜಿಪಂತನೇ ಸಾಕ್ಷಿಯಾಗಿದ್ದಾನೆ. ದಾಮಾಜಿಯು ಉದಾರನೂ, ಧೈರ್ಯಶೀಲನೂ, ಮಹಾಜ್ಞಾನಿಯೂ ಆಗಿದ್ದನು. ಬೀದರ ಬಾದಶಹನಲ್ಲಿ ಅವನಿಗೆ ಚಾಕರಿಯಿತ್ತು. ಚಾಕರಿಮಾಡಿ ಉಪಜೀವಿಸುತ್ತಿದ್ದರೂ ಅವನು ಸಂಸಾರದಲ್ಲಿ ಕೇವಲ ಆಸಕ್ತನಾಗಿರುತ್ತಿದ್ದಿಲ್ಲ. • ಪರಮಾತ್ಮನಲ್ಲಿ ಮನಸ್ಸನ್ನಿರಿಸಿ ಧ್ಯಾನಮಗ್ನನಾಗಿರುತ್ತಿದ್ದನು. ದಾಮಾಜಿಪಂತನ ಮನೆಯಿಂದ ಅಥಿತಿಗಳು ವಿಮುಖ

ರಾಗಿ ಹೋದರೆಂಬದು ಕೇಳಿ ಸಹ ಗೊತ್ತಿದ್ದಿಲ್ಲ. ದಾಮಾಜಿಯು ಒಳ್ಳೇ ನಂಬಿಗಸ್ತನೂ, ಬುದ್ಧಿವಂತನೂ ಇದ್ದದರಿಂದ ಬೇದರಬಾದಶಹನು ಅವನನ್ನು ಮಂಗಳವೇಢಾಪರಗಣೆಯ ಸುಭೇದಾರನನ್ನಾಗಿ ನೇಮಿಸಿದನು. ಅಂದಿನಿಂದ ಅವನು ಆ ಮಂಗಳವೇಢೆಯಲ್ಲಿಯೇ ಕುಟುಂಬಪರಿವಾರದಿಂದೊಡಗೂಡಿ ಕಾಲಕ್ರಮಿಸುತ್ತಿದ್ದನು. ಮಂಗಳವೇಢೆಯು ಸೊಲ್ಲಾಪುರ ಜಿಲ್ಲೆಯಲ್ಲಿ ಪಂಢರಪುರ ಕ್ಷೇತ್ರದ ಸಮೀಪದಲ್ಲಿರುತ್ತದೆ.

ಹೀಗೆ ದಾಮಾಜಿಯು ಮಂಗಳವೇಢೆಯ ಸುಭೇದಾರನಾಗಿ ಪ್ರಜಾಪರಿಪಾಲನೆ ಮಾಡುತ್ತಿರಲು, ಒಮ್ಮೆ ಭೂಮಂಡಲದಲ್ಲಿ ಈಗಿನಂಥ ಭಯಂಕರದುಷ್ಕಾಲವು ಬಿತ್ತು. ಆದರೆ ಈಗಿನ ದುಷ್ಕಾಲಕ್ಕೂ ದಾಮಾಜಿಪಂತನ ಕಾಲದ ದುಷ್ಕಾಲಕ್ಕೂ ಭೂಮ್ಯಾಕಾಶದಷ್ಟು ಅಂತರವಿದೆ. ಯಾಕಂದರೆ ಈಗಿನ ದುಷ್ಕಾಲದಲ್ಲಿ ಮಳೆಯಾಗದ್ದರಿಂದ ಎಲ್ಲೆಲ್ಲಿಯೂ ಪೈರುಗಳು ಬೆಳೆಯದೆ ಜನರಿಗೆ ಅಶನಾಭಾವವಾಗಿದೆ. ಆದರೂ ಜಲಮಾರ್ಗ, ಲೋಹಮಾರ್ಗ ಮುಂತಾದ ಸಾಧನಗಳಿಂದ ಬೆಳೆಬೆಳೆದ ಕಡೆಯ ಹಾಗು ಸಿಲಕು ಇದ್ದ ರಂಗೂನ ಕಲ್ಕತ್ತಾ ಮೊದಲಾದ ಕಡೆಯ ಧಾನ್ಯಗಳನ್ನು ದೇಶದಲ್ಲೆಲ್ಲ ಸಾಗಿಸಿ ದುಷ್ಕಾಲದ ರೌದ್ರರೂಪವನ್ನು ತುಸುಮಟ್ಟಿಗಾದರೂ ಶಾಂತಗೊಳಿಸಲಿಕ್ಕೆ ಆಸ್ಪದವಿದೆ. ಆಗ ಈ ತರದ ಒಂದೂ ಸಾಧನಗಳು ಇರದ್ದರಿಂದಲೂ, ಅಲ್ಲಲ್ಲಿ ಲೂಟಿಗಾರರು ಗುಂಪುಗೂಡಿಕೊಂಡು ಪ್ರವಾಸಿಕರನ್ನು ಸುಲಿಯುತ್ತಿದ್ದುದರಿಂದಲೂ ದೇಶದಲ್ಲಿ ಬೀಳುವ ಬರಗಾಲಗಳು ಜನರಿಗೆ ಬಹಳ ಕೇಡನ್ನುಂಟುಮಾಡುತ್ತಿದ್ದವು. ಅದರಿಂದ ದುಷ್ಕಾಲಗ್ರಸ್ತರಾದ ಸಾವಿರಾರು ಜನರ ಪ್ರಾಣಗಳು ಹಾರಹತ್ತಿದ್ದವು. ಅಂಥ ಆ ದುಷ್ಕಾಲದಲ್ಲಿ ಪಂಢರಪುರದಿಂದ ಹಸಿದು ಕಂಗಾಲಾದ ಒಬ್ಬ ಬ್ರಾಹ್ಮಣನು ದಾಮಾಜಿಪಂತನ ಮನೆಗೆ ಬಂದನು. ದಾಮಾಜಿಯು ಅವನನ್ನು ಚೆನ್ನಾಗಿಸತ್ಕರಿಸಿ, ಊಟ ಉಪಚಾರ ಮಾಡಿಸಿದನು. ಸಂತೃಪ್ತವಾಗುವರೆಗೆ ಭೋಜನ ಮಾಡಿದ ಬಳಿಕ ಆ ಬ್ರಾಹ್ಮಣನಿಗೆ ಪರಮಾನಂದವಾಯಿತು. ಆದರೆ ಅವನಿಗೆ ಕ್ಷುಧಾಕ್ರಾಂತರಾದ ತನ್ನ ಹೆಂಡಿರು ಮಕ್ಕಳ ನೆನವು ಆದ ಕೂಡಲೆ ಬಹಳ ದುಃಖವಾಯಿತು. ಆಗ ಅವನು ಕಣ್ಣೀರು ದುರಿಸಿ ಶೋಕಮಾಡತೊಡಗಿದನು. ದಾಮಾಜಿಯು ಬ್ರಾಹ್ಮಣನ ಆ ದೈನ್ಯಾವಸ್ಥೆಯನ್ನು ಕಂಡು ತನ್ನ ಸೇವಕರನ್ನು ಕರೆದು ಎರಡು ಖಂಡಗ ಧಾನ್ಯವನ್ನು ಕೊಟ್ಟು ಅದನ್ನು ಪಂಢರಪುರದಲ್ಲಿರುವ ಆ ಬ್ರಾಹ್ಮಣನ ಕುಟುಂಬದವರಿಗೆ ತಲುಪಿಸಿ ಬರಬೇಕೆಂದು ಹೇಳಿದನು. ಆ ಮೇರೆಗೆ ಧಾನ್ಯವನ್ನು ತಕ್ಕೊಂಡು ಸೇವ

ಕರೊಡನೆ ಬ್ರಾಹ್ಮಣನು ತನ್ನ ಮನೆಗೆ ಬಂದು ತಾನು ಯಾಚನೆ ಮಾಡಿ ತಂದ ಸಾಮುಗ್ರಿಯನ್ನು ಮನೆಯ ಮುಂಗಿಗೆ ತೋರಿಸಹತ್ತಿದನು.

ಮನುಷ್ಯನ ಸ್ವಭಾವವು ಮಂದಿಯು ಸೊತ್ತನ್ನು ಅಪಹರಿಸುವದರಲ್ಲಿಯೇ ಯಾವಾಗಲೂ ಮಗ್ನವಾಗಿರುತ್ತದೆ. ಅದರಲ್ಲಿಯೂ ದುಷ್ಕಾಲದಂಥ ಕಠಿಣಕಾಲ ದಲ್ಲಿ ತಂದೆ, ತಾಯಿ, ಮಕ್ಕಳು ಮೊದಲಾದವರ ಪರಿವೆ ಸಹ ಮಾಡದೆ ಮೊದಲು ತನ್ನ ಒಡಲು ತುಂಬಿಕೊಳ್ಳುವ ಪ್ರಯತ್ನವನ್ನು ಪ್ರತಿಯೊಬ್ಬನು ಕೈಕೊಳ್ಳುವ ನೆಂಬ ಮಾತು ಅನುಭವಸಿದ್ಧವಾಗಿದೆ. ಅಂಥ ಭಯಂಕರ ದುಷ್ಕಾಳದಲ್ಲಿ ಆ ಬ್ರಾಹ್ಮಣನಲ್ಲಿ ಒಮ್ಮೆಲೆ ಎರಡು ಖಂಡಗ ಧಾನ್ಯಬಂದು ಬಿದ್ದಮೇಲೆ ಊರ ಜನರು ಕೇಳುವರೇ? ಅವರು ಪಾಪ, ಪುಣ್ಯ, ದಯ, ಭಯ ಮುಂತಾದವುಗ ಳನ್ನು ಎಣಿಸಿದೆ, ಹಾ ಹಾ, ಅನ್ನುವಷ್ಟರಲ್ಲಿ ಆ ಧಾನ್ಯವನ್ನೆಲ್ಲ ಲೂಟಿ ಮಾಡಿಬಿಟ್ಟ ರು. ಆ ಬಡಬ್ರಾಹ್ಮಣನು ಪುನಃ ವಿಪತ್ತಿಗೆ ಗುರಿಯಾದದ್ದರಿಂದ ಶೋಕಮಾಡ ತೊಡಗಿದನು. ಅವನು ರೋದನ ಮಾಡುವಾಗ ತನಗೆ ವಿಪುಲವಾದ ಧಾನ್ಯ ವನ್ನು ಕೊಟ್ಟಂಥ ಮಂಗಳವೇಢೆಯ ಸುಭೇದಾರದಾಮಾಜಿಪಂತನ ದಾತೃತ್ವ ವನ್ನು ಹೊಗಳುತ್ತಲೂ, ಪಂಢರಪುರದ ಲೂಟಿಗಾರರನ್ನು ಬೊಗಳುತ್ತಲೂ ಇರುವದನ್ನು ಬುಭುಕ್ಷಿತರಾದ ಎಷ್ಟೋಜನರು ಕೇಳಿದರು. ಕೂಡಲೆ ಅವರು ತಮ್ಮ ಆಪ್ತೇಷ್ಟರೊಡನೆ ಮಂಗಳವೇಢೆಯಲ್ಲಿರುವ ದಾಮಾಜಿಪಂತನಲ್ಲಿಗೆ ಅತಿಥಿ ಗಳಾಗಿ ಹೊರಟರು. ಅವರು ಪ್ರಯಾಣ ಮಾಡುವಾಗ ತಮ್ಮೊಡನೆ ಹಳ್ಳಿಪಳ್ಳಿಯ ಜನರನ್ನೂ ಕರಕೊಂಡು ನಡೆದರು. ಹೀಗೆ ಆ ದುಷ್ಕಾಲಗ್ರಸ್ತ ಸಾವಿರಗಟ್ಲೆ ಜನರ ಒಂದೊಂದು ಗುಂಪಿನಂತೆ ಎಷ್ಟೋ ಟೋಳಿಗಳು ಮಂಗಳವೇಢೆಗೆ ಬಂದವು. ದಾಮಾಜಿಯು ಆ ವಾರ್ತೆಯನ್ನು ಸೇವಕರ ಮುಖದಿಂದ ಕೇಳಿದನು. ಅಷ್ಟರಲ್ಲಿ ಆ ಜನರು ಅವನ ಸಮ್ಮುಖದಲ್ಲಿ ಬಂದು ಅವನನ್ನು ಬಹಳ ದೈನ್ಯಾವ ಸ್ಥೆಯಿಂದ ಸ್ತುತಿಸಹತ್ತಿದರು. ಆಗ ದಾಮಾಜಿಸುಭೇದಾರನು ಆ ಎಲ್ಲ ಅತಿಥಿಗ ಳಿಗೆ ಸಾಷ್ಟಾಂಗಪ್ರಣಾಮ ಮಾಡಿ ಪಂಢರಿನಾಥನೇ ಇವರೆಲ್ಲರ ರೂಪದಿಂದ ಅತಿಥಿಯಾಗಿ ಬಂದಿರುವನೆಂದು ಮನಸ್ಸಿನಲ್ಲಿ ದೃಢವಾಗಿ ಭಾವಿಸಿದನು. ಆಕಸ್ಮಿಕ ವಾಗಿ ಬಂದ ಇಷ್ಟು ಜನ ಕ್ಷುಧಿತರನ್ನು ನೋಡಿ ಅವನ ಅಂತಃಕರಣವು ಕರಗಿ ಹೋಯಿತು. ತನ್ನ ಸ್ವಂತದ ಮನೆಯಲ್ಲಿ ಈ ಎಲ್ಲ ಬುಭುಕ್ಷಿತರನ್ನು ಸಂತೃಪ್ತಿ ಗೊಳಿಸುವಷ್ಟು ಸಾಮುಗ್ರಿ ಇಲ್ಲದಿರುವದನ್ನು ತಿಳಿದು ಅವನಿಗೆ ಪರಮ ದುಃಖವಾಯಿತು. ಅಷ್ಟರಲ್ಲಿ ಅವನಿಗೆ ಒಂದು ಮಾತು ತಟ್ಟನೆ ನೆನಪಾಯಿತು.

ಆಗ ಅವನು ವಿಚಾರ, ಪುನರ್ವಿಚಾರ, ಶಂಕೆ, ಪ್ರತಿಶಂಕೆಗಳಿಗೇನೂ ಗುರಿಯಾಗದೆ ಒಮ್ಮೆಲೆ ತನ್ನ ಸೇವಕರಿಗೆ ಆಜ್ಞಾಪಿಸಿದನೇನಂದರೆ—"ಸೇವಕರೇ ಶ್ರೀಪಾಂಡುರಂಗಸ್ವರೂಪಿಗಳಾಗಿ ಬಂದಿರುವ ಈ ಬುಭುಕ್ಷಿತ ಅತಿಥಿವರ್ಗಕ್ಕೆ ನನ್ನ ವಶದಲ್ಲಿರುವ ಸರಕಾರೀಧಾನ್ಯಗಳ ಸಂಗ್ರಹಾಲಯಗಳನ್ನು ತೆರೆದು ಕೊಡಿರಿ. ಈ ಜನರು ತಮ್ಮ ಇಚ್ಛಾ ತೃಪ್ತಿಯಾಗುವವರೆಗೆ ಧಾನ್ಯವನ್ನು ಒಯ್ಯಲಿ" ದಾಮಾಜಿಪಂತನ ಈ ತರದ ಪರಮೋದಾರತನದ ಮಾತುಗಳನ್ನು ಕೇಳಿದ ಮಾತ್ರದಿಂದಲೇ ಆ ಬುಭುಕ್ಷಿತರ ಹಪಾಪೆಯು (ಆಶೆಯು) ಬಹುಮಟ್ಟಿಗೆ ಕಡಿಮೆಯಾಯಿತು. ಆಗ ಸೇವಕರು ನಾನಾತರದ ಧಾನ್ಯಗಳ ಉಗ್ರಾಣಗಳ ಕೀಲಿಗಳನ್ನು ತೆಗೆದು ಮುಕ್ತದ್ವಾರ ಮಾಡಲು, ದುಷ್ಕಾಲಪೀಡಿತಜನರು ಬೇಕಾದಷ್ಟು ಧಾನ್ಯವನ್ನು ಒಯ್ದು ಆ ವರ್ಷದ ದುಷ್ಕಾಲದಿಂದ ಪಾರಾದರು. ಅವರು ಆ ದಾಮಾಜಿಪಂತನ ಆ ಪರಮೌದಾರ್ಯದ ಕೃತಿಗೆ ಬಹಳ ಸಂತುಷ್ಟರಾಗಿ ಅವನನ್ನು ಹಾಡಿಹರಿಸಿದರು. ಆದರೆ ದಾಮಾಜಿಯು ತಾನು ಇಂಥ ದುಷ್ಕಾಲದಲ್ಲಿ ಇಷ್ಟು ಜನರಿಗೆ ಅನ್ನಕೊಟ್ಟೆನೆಂದು ಹೆಮ್ಮೆಗೊಳ್ಳಲಿಲ್ಲ. ಇಷ್ಟೇ ಅಲ್ಲ; ಅವನ ಮನಸ್ಸಿನಲ್ಲಿ ಕೂಡ ಆ ದುಷ್ಟವಿಚಾರವು ಒಲಿಲ್ಲ.

ಇತ್ತ ದಾಮಾಜಿಯು ಸರಕಾರೀಸಂಗ್ರಹದೊಳಗಿನ ಧಾನ್ಯವನ್ನು ದುಷ್ಕಾಲಪೀಡಿತರಿಂದ ಲೂಟಿಮಾಡಿಸಿದ ಸಂಗತಿಯು ಕೆಲವು ದುರ್ಜನರ ಮನಸ್ಸಿಗೆ ಬರಲಿಲ್ಲ. ಹೀಗಾಗುವದು ಸಹಜವೇ! ದಾಮಾಜಿಯ ಕೈಕೆಳಗಿನ ಮುಖ್ಯ ಚಿಟಣೀಸನೇ ಈ ದುರ್ಜನರ ಅಗ್ರೇಸರನಿದ್ದನು. ಅವನು ಆ ಧಾನ್ಯಲೂಟಿಮಾಡಿಸಿದ ಸಂಗತಿಯನ್ನು ಬಾದಶಹನಿಗೆ ಕುಹಕರೀತಿಯಿಂದ ತಿಳಿಸಿ ಬಾದಶಹನು ದಾಮಾಜಿಯಮೇಲೆ ಸಿಟ್ಟಿಗೇಳುವಂತೆ ಮಾಡಿದನು. ಆದರೆ ದಾಮಾಜಿಯು ಈ ಕೃತ್ಯವನ್ನು ಮಾಡುವಾಗ ಮುಚ್ಚುಮರೆಯಾಗಿ ಮಾಡಿದ್ದಿಲ್ಲ. ಮುಂದೆ ಬಾದಶಹನಿಂದ ಆಗಬಹುದಾದ ಪ್ರಾಣಾಂತಶಿಕ್ಷೆಗೆ ಸಹ ತಾನು ಗುರಿಯಾಗಲಿಕ್ಕೆ ಸಿದ್ಧನಾಗಿಯೇ ಧಾನ್ಯ ಲೂಟಿಮಾಡಿಸಿದ್ದನು.

ಪರೋತ್ಕರ್ಷದ್ವೇಷಿಯಾದ ಆ ದಾಮಾಜಿಯ ಚಿಟಣೀಸನ ಪತ್ರವನ್ನೋದಿ ಬೀದರಬಾದಶಹನು ಸಿಟ್ಟಿನಿಂದ ನಡುಗಹತ್ತಿದನು. ಆ ಕೃದ್ಧನು ಯಾವ ವಿಚಾರವನ್ನೂ ಮಾಡದೆ, ರಾಜಧಾನ್ಯದ ಲೂಟಿಮಾಡಿಸಿದ ತಪ್ಪಿಗಾಗಿ ದಾಮಾಜಿಪಂತನನ್ನು ಕ್ರೂರತನದಿಂದ ಕೊಲ್ಲಿಸಬೇಕೆಂದು ನಿಶ್ಚಯಿಸಿ, ಅವನನ್ನು ಹಿಡಿದು ತರುವದಕ್ಕಾಗಿ ಸೇವಕರನ್ನು ಕಳುಹಿಸಿದನು. ರಾಜದೂತರು ಮಂಗಳವೇಢೆಗೆ

ಬಂದು ಹರಿಧ್ಯಾನಮಗ್ನನಾದ ದಾಮಾಜಿಗೆ ರಾಜಶಾಸನವನ್ನು ತೋರಿಸಿದರು. ಆ ಆಜ್ಞಾಪತ್ರವನ್ನು ನೋಡಿ ದಾಮಾಜಿಯು ಜೀವದ ಹೆದರಿಕೆಯಿಂದ ನಡುಗಿದ ನೇನು? ಅಥವಾ ಈ ಕೃತ್ಯವನ್ನು ಯಾವ ನೀಚರೋ ರಾಜನಿಗೆ ತಿಳಿಸಿದರೆಂದು ಅವರಿಗೆ ಶಪಿಸುತ್ತಲೂ, ತನ್ನ ದುರ್ದೈವವನ್ನು ಕುರಿತು ಅಳುತ್ತಲೂ ಕುಳಿತ ನೇನು? ಇಲ್ಲ, ದಾಮಾಜಿಯು ಆ ತರದ ಕ್ಷುದ್ರವಿಚಾರದವನಿದ್ದಿಲ್ಲ; ಪರೋಪಕಾರಕ್ಕಾಗಿ ತನ್ನಿಂದ ಅಪರಾಧವಾಗಿರುವದರಿಂದ, ಅದಕ್ಕೆ ಯೋಗ್ಯವಾದ ಶಿಕ್ಷೆಯನ್ನನುಭೋಗಿಸುವದು ತನ್ನ ಕರ್ತವ್ಯವೆಂದು ತಿಳಿದುಕೊಂಡು ಆ ರಾಜದೂತರ ಸಂಗಡ ಬೀದರಕ್ಕೆ ಹೊರಟನು. ತಾನು ಬೀದರಕ್ಕೆ ತಲುಪುತ್ತಲೆ ತನ್ನಅಂತವಾಗಿ ರಾಜಸೇವೆಯಿಂದ ವಿಮುಕ್ತನಾಗಬೇಕಾಗುವದೆಂಬದೊಂದೇ ವಿಚಾರದಲ್ಲಿ ಆತನ ಮನಸ್ಸು ತೊಡಗಿತ್ತು. ಆಗ ಆತನು ಆ ದೂತರಿಗೆ—ಅಪ್ಪಗಳಿರಾ, ನಾನು ತಪ್ಪಗಾರನಿರುವದು ನಿಜ. ರಾಜಾಜ್ಞೆಯನ್ನು ಪಾಲಿಸಲಿಕ್ಕೆ ನಾನು ಸಿದ್ಧನಿದ್ದೇನೆ. ಸ್ವಸಂತೋಷದಿಂದಲೇ ನಾನು ಬೀದರಿಗೆ ಬರುವೆನು. ಆದರೆ ಅಲ್ಪಾಯುಷಿಯಾದ ನಾನು ಕಟ್ಟಕಡೆಗೊಮ್ಮೆ ಶ್ರೀಪಾಂಡುರಂಗನ ದರ್ಶನವನ್ನು ತಕ್ಕೊಳ್ಳಬೇಕೆಂದು ಬಯಸುತ್ತೇನೆ. ಆದ್ದರಿಂದ ನೀವು ನನ್ನನ್ನು ಪಂಢಪುರಕ್ಕೆ ಕರೆದೊಯ್ದು ಅಲ್ಲಿ ಶ್ರೀ ವಿಠೋಬನ ದರ್ಶನ ಮಾಡಿಸಿರಿ'' ಎಂದು ವಿಜ್ಞಾಪಿಸಿಕೊಂಡನು.

ದಾಮಾಜಿಯ ಹಂಬಲದಂತೆ ಆ ಸೇವಕರು ದಾಮಾಜಿಪಂತನನ್ನು ಪಂಢರಿಗೆ ಕರೆದೊಯ್ದರು. ಅಲ್ಲಿ ಮುಟ್ಟುತ್ತಲೆ ಪಂತನು ಸ್ನಾನವಾಡಿ ಶ್ರೀ ಪಂಢರಿನಾಥನ ಎದುರಿಗೆ ದಂಡವತ್ ನಮಸ್ಕಾರ ಹಾಕಿದನು. ಇಟ್ಟಂಗಿಯ ಮೇಲೆ ನಿಂತಿದ್ದ ಆ ಮೂರ್ತಿಯನ್ನು ನೋಡಿ ಅವನ ಅಂತಃಕರಣವು ಸದ್ಗದಿತವಾಯಿತು. ಆಗ ಅವನು ಆ ಮೂರ್ತಿಯನ್ನು ಆಲಿಂಗಿಸಿದ ಬಳಿಕ ಸಮ್ಮುಖದಲ್ಲಿ ಎರಡೂ ಕೈಗಳನ್ನು ಜೋಡಿಸಿಕೊಂಡು ನಿಂತು—ನಾನು ಮಹಾಪರಾಧಿಯಾಗಿರುವದರಿಂದ ಬಾದಶಹನ ಕೋಪಕ್ಕೆ ಗುರಿಯಾಗಿರುವೆನು. ಇನ್ನು ನನ್ನ ಶಿರಚ್ಛೇದವಾಗುವದು ನಿಶ್ಚಿತವು; ಅಷ್ಟರಲ್ಲಿ ನಿನ್ನ ಈ ಮಹಾಪಾದಗಳ ದರ್ಶನವಾದ್ದರಿಂದ ನಾನು ಕೃತಾರ್ಥನೇ ಸರಿ. ಇದೇ ನನ್ನ ಜೀವಿತದಲ್ಲಿಯ ಕಟ್ಟಕಡೆಯ ದರ್ಶನವು; ಈ ದಿವಸ ನನ್ನ ಮೇಲೆ ನಿನ್ನ ಸದಯಾಂತಃಕರಣವಿರಲಿ ಎಂದು ಪ್ರಾರ್ಥಿಸಿದನು. ಇಷ್ಟು ಮಾತಾಡುವಷ್ಟರಲ್ಲಿ ದಾಮಾಜಿಯ ಕಣ್ಣೊಳಗಿಂದ ಅಶ್ರುಗಳು ಧಾರೆಗಟ್ಟಿ ಸುರಿಯಹತ್ತಿದವು. ಇತ್ತ ತೀವ್ರ ನಡೆಯೆಂದು ದೂತರು ದಾಮಾಜಿಯನ್ನು ಅವಸರಪಡಿಸಹತ್ತಿದರು. ಆಗಿನ ಆ ದಾಮಾಜಿಪಂತನ ಅವಸ್ಥೆಯನ್ನು ನೋಡಿ ಕ್ಷೇತ್ರ

ವಾಸಿಗಳಿಗೆ ಬಹಳ ದುಃಖವಾಯಿತು. ಕಡೆಗೆ ಭಗವಂತನ ಆ ಮೂರ್ತಿಯ ಚರಣಗಳ ಕಡೆಗೆ ನೋಡುತ್ತ ನೋಡುತ್ತ ಆ ವಿಯೋಗದುಃಖಿಯಾದ ದಾಮಾಜಿಯು ಶಿಪಾಯಿಗಳ ಸ್ವಾಧೀನನಾಗಿ ಬೇದರದ ಹಾದಿಯನ್ನು ಹಿಡಿದನು.

ಅನನ್ಯಾಶ್ಚಿಂತಯಂತೋಮಾಮ್ ಯೇಜನಾಃಪರ್ಯುಪಾಸತೇ
ತೇಷಾಂನಿತ್ಯಾಭಿಯುಕ್ತಾನಾಂಯೋಗಕ್ಷೇಮಂ ವಹಾಮ್ಯಹಂ

ಯಾವನು ನನ್ನನ್ನು ಸರ್ವವಿಧದಿಂದಲೂ ಆಶ್ರಯಿಸಿರುವನೋ, ಅವನ ಯೋಗಕ್ಷೇಮಗಳನ್ನು ನಾನು ನೋಡಿಕೊಳ್ಳುವೆನು'' ಎಂಬ ಭಗವದುಕ್ತಿಯಂತೆ ದಾಮಾಜಿಯ ಬೆನ್ನು ಕಾಯಲಿಕ್ಕೆ ಸ್ವತಃ ಶ್ರೀ ಪಂಢರೀನಾಥನೇ ಸಿದ್ಧನಾಗಬೇಕಾಯಿತು. ದಾಮಾಜಿಗೆ ಬೇದರದಲ್ಲಿ ಎಲ್ಲಿ ಅಪಮಾನವಾಗುವದೋ ಎಂಬ ವಿಚಾರದಿಂದ ಭಕ್ತಕೈವಾರಿಯಾದ ಪಂಢರಿನಾಥನು ದಾಮಾಜಿಪಂತನ ಸಂಕಟನಿವಾರಣಕ್ಕಾಗಿ ಬೇದರಕ್ಕೆ ಹೊಲೆಯಾಳಾಗಿ ಹೋದನು. ಅವನು ಅಚ್ಚ ಕರಿಬಣ್ಣದವನಾಗಿದ್ದನು. ಒಂದೇ ಒಂದು ಲಂಗೋಟಿಯು ಅವನ ವಸ್ತ್ರವಾಗಿತ್ತು. ತಲೆಗೆ ಒಂದು ಹರಕುರುಮಾಲವನ್ನು ಸುತ್ತಿದ್ದನು. ಅವನು ಒಂದು ರಗಟಿಕಂಬಳಿಯ ಕೊಪ್ಪಿಯನ್ನು ಹೊತ್ತಿದ್ದನು. ಕಾಲಲ್ಲಿ ಹರಕು ಮೆಟ್ಟುಗಳನ್ನು ಧರಿಸಿ ಬೇದರಬಾದಶಹನ ಖಜಾನಿಗೆ ಹೋಗಿ ತಲೆಬಾಗಿಲಲ್ಲೇ ನಿಂತು ಬಾದಶಹನಿಗೆ ಬಗ್ಗಿ ಬಗ್ಗಿ ಮುಜುರೆ ಮಾಡಿದನು. ಆಗ ಬಾದಶಹನು ದ್ವಾರಪಾಲಕರಿಂದ ಅವನ್ಯಾರೆಂದು ಕೇಳಿಸಲು ಆ ದಿಟ್ಟವಾದ ಭಗವನ್ಮೂರ್ತಿಯು—ನಾನು ಮಂಗಳವೇಢೆಯ ಸುಭೇದಾರರಾದ ದಾಮಾಜಿಪಂತರ ಚಾಕರನು; ನನ್ನ ಹೆಸರು ವಿಠೂಮಹಾರ. ದಾಮಾಜಿಸುಭೇದಾರರು ಮೊನ್ನೆ ಸರಕಾರೀ ಸಂಗ್ರಹದೊಳಗಿನ ಎಲ್ಲ ಧಾನ್ಯವನ್ನು ದುಷ್ಕಾಲಗ್ರಸ್ತಜನರಿಗೆ ಮಾರಿ ಬಂದ ಹಣವನ್ನು ನನ್ನೊಡನೆ ಸನ್ನಿಧಿಗೆ ಒಪ್ಪಿಸಲು ಕಳಿಸಿರುವರು. ಇಗೋ ತಕ್ಕೊಳ್ಳಿರಿ. ಅವರ ಈ ಪತ್ರವನ್ನು; ಎಣಿಸಿಕೊಳ್ಳಿರಿ. ಈ ಹಣವನ್ನು; ಎಂದು ಮಾತಾಡಲು, ದಾಮಾಜಿಯ ವಿಷಯಕ್ಕೆ ತೀರ ಸಂತಾಪಗೊಂಡಿದ್ದ ಆ ಬಾದಶಹನಿಗೆ ಬಹಳ ಆಶ್ಚರ್ಯವಾಯಿತು. ಆಗ ಅವನು ಮುಖ್ಯ ವಜೀರನನ್ನು ಕುರಿತು—ವಿಠೂಮಹಾರನ ಕೈಯಲ್ಲಿರುವ ಆ ಪತ್ರವನ್ನು ಓದಿರಿ. ಅದರಲ್ಲಿ ಬರೆದಿರುವದೇನೆಂಬದನ್ನಾದರೂ ನೋಡುವ; ಮೊನ್ನೆ ಮಂಗಳವೇಢೆಯ ಚಿಟಣೀಸನಿಂದ ಬಂದ ಸುದ್ದಿಗೂ, ಈ ಸುದ್ದಿಗೂ ಮಹದಂತರವಿದೆ ಆದ್ದರಿಂದ ಈ ಪತ್ರವನ್ನು ಓವಿ ಸರಿಯಾದ ಅಭಿಪ್ರಾಯವನ್ನು ನನಗೆ ತಿಳಿಸಿರಿ, ಎಂದು ಆಜ್ಞಾಪಿಸಿದನು. ಕೂಡಲೆ ವಜೀರನು ವಿಠೂಮಹಾರನು ತಂದಿ

ದ್ದ ಲಕ್ಕೋಟಿಯನ್ನು ಒಡೆದು ಒಳಗಿನ ಪತ್ರವನ್ನು ಓದಹತ್ತಿದನು. ಅದರಲ್ಲಿ ಪದ್ಧತಿಯಂತೆ ಮೇಲ್ವಿಳಾಸಬರೆದು ಕೆಳಗೆ ಈ ಪ್ರಕಾರದ ಮಜಕೂರು ಬರೆದಿತ್ತು.

"ಸ್ವದೇಶದಲ್ಲಿ ಭಯಂಕರವಾದ ದುಷ್ಕಾಲ ಬಿದ್ದು ಅಸಂಖ್ಯಾಕ ಜನರು ಕೂಳಿಲ್ಲದೆ ಸಾಯುವದನ್ನು ನೋಡಿ ರಾಜರ ಕಲ್ಯಾಣಕ್ಕಾಗಿ ನಾನು ರಾಜಸಂಗ್ರಹದೊಳಗಿನ ಏಳುನೂರು ಖಂಡಗ ಧಾನ್ಯವನ್ನು ಒಂದು ರೂಪಾಯಿಗೆ ಒಂದು ಪಡಿಯಂತೆ ಮಾರಿರುವೆನು. ಮತ್ತು ಆ ಬಾಬತು ಸಲ್ಲತಕ್ಕ ಎಲ್ಲ ಹಣವನ್ನು ಈ ನಮ್ಮ ವಿಶ್ವಾಸಕ್ಕೆ ಪಾತ್ರನಾದ ವಿಠೂಮಹಾರನ ಕೂಡ ಸನ್ನಿಧಿಗೆ ರವಾನಿಸಿರುವೆನು. ಲೆಖ್ಖದಂತೆ ಹಣವನ್ನು ಎಣಿಸಿಕೊಂಡು ಇವನೊಡನೆ ಪಾವತಿಯನ್ನು ಕಳಿಸುವದಾಗಬೇಕು. ಇತ್ಯಾದಿ"

ಆ ಪತ್ರದೊಳಗಿನ ಈ ಅಭಿಪ್ರಾಯವನ್ನು ಕೇಳಿ ದರ್ಬಾರದೊಳಗಿನ ಎಲ್ಲ ಜನರಿಗೆ ಬಹಳ ಸೋಜಿಗವೆನಿಸಿತು. ಮೇಲಿನ ದರದಂತೆ ಏಳುನೂರು ಖಂಡಗಗಳಿಗಾಗುವ ಬೆಲೆಯ ಲೆಖ್ಖವನ್ನು ಮಾಡಲು ಅದು ವಿಪುಲವಾಯಿತು. ಇಷ್ಟು ಅಗಣಿತ ಹಣವನ್ನು ಈ ವಿಠೂಮಹಾರನೊಬ್ಬನೇ ತಂದಿರುವ ಬಗೆಯಾದರೂ ಹೇಗೆ? ಈಗಿನಂತೆ ಆಗ ನೋಟುಗಳೂ, ಹುಂಡಿಗಳೂ ಚಲಾವಣೆಯಲ್ಲಿದ್ದಿಲ್ಲ. ಅದ್ದರಿಂದ ಅವರು ಆಶ್ಚರ್ಯಪಟ್ಟದ್ದು ಸಹಜವೇ! ಇದರಲ್ಲಿ ಏನಾದರೂ ಮೋಸವಿರಬಹುದೆಂದು ಆ ಜನರು ಭಾವಿಸಿದರು. ಆಗ ವಜೀರನು ಹಣವೆಲ್ಲಿರುವದು ಎಂದು ವಿಠೂಮಹಾರನನ್ನು ದರ್ಪದಿಂದ ಕೇಳಲು, ಧನಿಯರೇ ಒಡ್ಡಿ ಒಡ್ಡಿಯಂತೆ ಇಡುವೆನು ಎಣಿಸಿ ತಕ್ಕೊಳ್ಳಬೇಕು ಎಂದು ನುಡಿದು ತಲೆಗೆ ಸುತ್ತಿದ್ದ ಹರಕ ರುಮಾಲದ ಚುಂಗಿನೊಳಗೆ ಕಟ್ಟಿದ್ದ ಒಂದು ಪುಟ್ಟ ಚೀಲವನ್ನು ತೆಗೆದನು. ಆ ಚೀಲವನ್ನು ನೋಡಿದಾಗಂತೂ ಸಭಿಕರ ನಗೆಯು ಹಿಡಿಸದಾಯಿತು! ಪಾಪ, ಮಹಾಮಾಯಿಕನಾದ ಶ್ರೀಪಾಂಡುರಂಗನ ಕಪಟನಾಟಕವನ್ನು ಅವರೇನು ಬಲ್ಲರು! ಬಳಿಕ ವಿಠೋಬನು ತನ್ನ ಆ ಚೀಲದೊಳಗಿಂದ ಒಡ್ಡಿಗಟ್ಲೆ ಹಣವನ್ನು ತೆಗೆತೆಗೆದು ಇಡಹತ್ತಿದನು. ಖಜೀನದಾರರು ಎಣಿಸಿಕೊಂಡು ರಾಜಬೊಕ್ಕಸದಲ್ಲಿ ತುಂಬಹತ್ತಿದರು. ಎಷ್ಟು ಹಣವನ್ನು ತೆಗೆದರೂ ವಿಠೋಬನ ಆ ಚಿಕ್ಕ ಚೀಲವು ಹಣದಿಂದ ತುರಿಬಿಯೇ ಇರುತ್ತಿತ್ತು. ರಾಜನಿಗೆ ಮುಟ್ಟಬೇಕಾಗಿದ್ದ ಹಣವೆಲ್ಲವೂ ಮುಟ್ಟಿತು. ಆದರೂ ಚೀಲವು ತುಂಬಿದ್ದು ತುಂಬಿದಂತೆಯೇ ಇತ್ತು. ಎವೆಯಿಕ್ಕದೆ ಈ ಚಮತ್ಕಾರವನ್ನು ನೋಡುತ್ತಿದ್ದ ಬಾದಶಹನಲ್ಲಿ ವಿಠೂಮಹಾರನ ವಿಷಯಕ್ಕೆ ಬಹಳ ಆದರವುಂಟಾಯಿತು. ಆಗ ಹಣಮುಟ್ಟಿದ ಪಾವತಿಯನ್ನು

ವಿಠೂಮಹಾರನಿಗೆ ಕೊಟ್ಟನು. ಆಗ ಬಾದಶಹನು ದಾಮಾಜಿಯು ನಿರಪರಾಧಿ ಯೆಂದು ತಿಳಿದು ಅವನಿಗೆ ಸನ್ಮಾನದ ಪತ್ರಬರೆದು ಅದನ್ನೂ ಉಡುಗರೆಯನ್ನೂ ತನ್ನ ಸೇವಕರೊಡನೆ ಕಳಿಸಿಕೊಟ್ಟನಲ್ಲದೆ, ವಿಠೋಬನಿಗೆ ಅಮೂಲ್ಯವಾದ ಉಡು ಪನ್ನು ಕೊಟ್ಟನು. ಆಗ ವಿಠೂಮಹಾರನು ಸಂತೋಷಪಟ್ಟು ಬಾದಶಹನಿಗೆ ಮುಜುರೆಮಾಡಿ ರಾಜದೂತರೊಡನೆ ಮಂಗಳವೇಢೆಗೆ ನಡೆದನು.

ವಿಠೋಬನು ಹಣಕೊಟ್ಟು ಹೋದ ಕೆಲಹೊತ್ತಿನಲ್ಲಿಯೇ ಮೊದಲಿನ ರಾಜದೂತರು ದಾಮಾಜಿಯನ್ನು ನೆರೆಹಿಡಕೊಂಡು ಬಂದು ಬಾದಶಹನ ಎದುರಿಗೆ ನಿಲ್ಲಿಸಿದರು, ಆಗ ಬಾದಶಹನು ಅವನನ್ನು ಬಂಧಮುಕ್ತನನ್ನಾಗ ಮಾಡಿ ಅವನಿಗೆ ದೃಢವಾದ ಆಲಿಂಗನವನ್ನಿತ್ತನು. ಮತ್ತು ತತ್ಪೂರ್ವದಲ್ಲಿ ನಡೆದ ವಿಠೂಮಹಾ ರನ ಸಂಬಂಧದ ಎಲ್ಲ ಸಂಗತಿಯನ್ನು ಹೇಳಿದನು. ಬಾದಶಹನು ಹೇಳಿದ ಸಂಗ ತಿಯನ್ನು ಕೇಳಿ ದಾಮಾಜಿಯು--ಎಲೈ ನಿರ್ಗುಣ, ನಿರ್ವಿಕಾರನಾದ ಪಾಂಡು ರಂಗನೇ ನನಗೋಸ್ಕರ ಹೊಲೆಯರವನ ವೇಷತಾಳಿ ಮಹಾಜಡವಾದ ದ್ರವ್ಯವ ನ್ನು ತಲೆಯಮೇಲೆ ಹೊತ್ತುಕೊಂಡು ಬಂದಿಯಲ್ಲವೆ? ಕೋಟಿಸೂರ್ಯರ ತೇಜ ಕ್ಕಿಂತಲೂ ಶ್ರೇಷ್ಠವಾದ ತೇಜದಿಂದ ಮಿನುಗುವ ಕಿರೀಟವು ಯಾವ ನಿನ್ನ ಶಿರ ಸ್ಸನ್ನು ಅಲಂಕರಿಸುತ್ತಿರುವದೋ, ಆ ತಲೆಗೆ ಹರಕು ಚಿಂದಿಯನ್ನು ನನಗೋ ಸುಗ ಸುತ್ತಿಕೊಂಡಿಯಾ? ಶಂಖಚಕ್ರಗಳಿಂದ ಭೂಷಿತವಾದ ಹಸ್ತಗಳಲ್ಲಿ ಕೋಲ ನ್ನು ಹಿಡಿದಿದ್ದೆಯಾ ಪೀತಾಂಬರವನ್ನು ಬಿಟ್ಟು ಲಂಗೋಟಿಯನ್ನು ಧರಿಸಿದ್ದಿಯಾ? ಸುಶೋಭಿತಗಳಾದ ನೂಪುರ ಪೈಜಣಗಳನ್ನು ಧರಿಸುವ ಪಾದಗಳಲ್ಲಿ ಹರಕು ಮೆಟ್ಟುಗಳನ್ನು ಮೆಟ್ಟಿದ್ದೆಯೊ? ಹಾ ದೇವಾ, ನನ್ನ ಸಲುವಾಗಿ ನೀನು ಎಷ್ಟು ಕಷ್ಟಪಡಬೇಕಾಯಿತಲ್ಲ! ಎಂದು ಹಲವು ಪ್ರಕಾರವಾಗಿ ಹಲುಬಿದನು. ತಾನು ಪಾಂಡುರಂಗನಿಗೆ ಎಷ್ಟು ಕಷ್ಟಕೊಟ್ಟೆನಲ್ಲ ಎಂದು ನೆನಿಸಿ ಬಿಕ್ಕಿಬಿಕ್ಕಿ ಅಳಹತ್ತಿ ದನು. ಆಗ ಸಮ್ಮುಖದಲ್ಲಿದ್ದ ಬಾದಶಹನ ಅಂತಃಕರಣವು ಕರಗಿತು; ದಾಮಾ ಜಿಯ ಸಲುವಾಗಿ ಜಗತ್ಪಾಲಕಪ್ರಭುವೇ ದಾಸನಾಗಿ ಬಂದುದನ್ನು ನೆನಿಸಲು, ಬಾದಶಹನಲ್ಲಿ ವೈರಾಗ್ಯವುಂಟಾಗಿ ಅವನು ದಾಮಾಜಿಯ ದಾಸನಾದನು. ಆಗ ದಾಮಾಜಿಯು ಬಾದಶಹನಿಗೆ ಹೇಳಿದ್ದೇನಂದರೆ--ಕೇವಲ ಶೋಭೆಗಾಗಿ ಧರಿಸುವ ಅಲಂಕಾರಗಳಿಂದ ಹಿತವಾಗುವದೊತ್ತಟ್ಟಿಗೇ ಉಳಿದು ಪ್ರಾಣಕ್ಕೆರವಾಗುವ ಪ್ರಸಂಗ ಬರುವಂತೆ ಯಾವ ಸುಭೇದಾರಿಕೆಯಿಂದ ನನಗೆ ಕಲ್ಯಾಣವಾಗಬೇಕಾ ಗಿರುವದೋ ಅದೇ ಸುಭೇದಾರಿಯಿಂದ ನನ್ನ ಪರಮಪ್ರಿಯ ದೇವರಿಗೆ ಕಷ್ಟಪಡಿಸ

ಬೇಕಾದ್ದರಿಂದ, ಇನ್ನು ಮುಂದೆ ನನಗೆ ನಿಮ್ಮ ಆ ಸುಭೇದಾರಿಯು ಬೇಕಾಗಿಲ್ಲ. ಪ್ರಭುಗಳು ರಾಜೀನಾಮೆಯನ್ನು ಸ್ವೀಕರಿಸಿ ಪಂಢರಪುರದಲ್ಲಿ ವಾಸಮಾಡಲಿಕ್ಕೆ ನನಗೆ ಅಪ್ಪಣೆಕೊಡಬೇಕು'' ಆಗ ಬಾದಶಹನಾದರೂ ದಾಮಾಜಿಗೆ ಒಳ್ಳೇ ಗೌರವದ ಉತ್ತರ ಕೊಟ್ಟನು. ಅದೇನಂದರೆ ಯಾವನ ದೃಢಭಕ್ತಿಯ ಬಗ್ಗೆ ಪ್ರತ್ಯಕ್ಷ ಭಗವಂತನೇ ಋಣಿಯಾಗಿ ನಡಿಯುವನೋ, ಅಂಥ ನಿನ್ನನ್ನು ನಮ್ಮ ಸೇವಕನೆಂದು ಎಣಿಸುವ ಬಗೆಯೆತ್ತ? ದಾಮಾಜೀ, ಪರಮೇಶ್ವರನೇ ನಿನಗೆ ಅಂಕಿತನಾದ್ದರಿಂದ ನೀನು ಎಲ್ಲ ಜಗತ್ತಿನ ಸ್ವಾಮಿಯಾದೆ. ನಿನ್ನಿಂದಲೇ ಶ್ರೀಹರಿಯು ದರ್ಶನವು ನಮಗಾದದ್ದು. ಆದ್ದರಿಂದ ನಿನಗೆ ಆಜ್ಞೆ ಮಾಡುವ ಅಧಿಕಾರವು ನಮಗೆಲ್ಲಿರುವದು?

ಇತ್ತ ಬೇದರದಲ್ಲಿ ದಾಮಾಜಿ ಹಾಗು ಬಾದಶಹ ಇವರಲ್ಲಿ ಮೇಲೆ ಬರೆದಂತೆ ಸಂಭಾಷಣ ನಡೆದಿರಲು, ಅತ್ತ ವಿಠೂಮಹಾರನು (ಪಾಂಡುರಂಗನು) ಹೊಲೆಯವೇಷದಿಂದಲೇ ಮಂಗಳವೇಡೆಗೆ ಹೋಗಿ ದಾಮಾಜಿಯ ಮನೆಯವರಿಗೆ ಅವನ ಕುಶಲವನ್ನು ತಿಳಿಸಿ ಪಂಢರಿಗೆ ನಡೆದನು. ದಾಮಾಜಿಪಂತನಾದರೂ ಕೂಡಲೆ ಬಾದಶಹರ ಚಾಕರಿಗೆ ರಾಮರಾಮಮಾಡಿ, ಪಂಢರಪುರದಲ್ಲಿ ಹೆಂಡಿರು ಮಕ್ಕಳೊಡನೆ ಕಾಯಮವಾಗಿ ಇರಹತ್ತಿದನು! ಆ ದಾಮಾಜಿಪಂತ ಭಗವದ್ಭಕ್ತನ ಕೀರ್ತಿಯು ಭುವನತ್ರಯದಲ್ಲಿ ಈಗಲೂ ಮೆರೆಯುತ್ತಿರುವದು.

---

# ನರಸೀಮೇಹತಾ.



ಪೂರ್ವದಲ್ಲಿ ಕೈಲಾಸಪತಿಯಾದ ಶ್ರೀ ಶಂಕರನು ಭಕ್ತಜನರ ಕಲ್ಯಾಣಕ್ಕಾಗಿ ಜುನಾಗಡ ಎಂಬ ಊರಲ್ಲಿ ಒಬ್ಬ ನಾಗರಬ್ರಾಹ್ಮಣನ ಉದರದಲ್ಲಿ ನರಸೀ ಮೆಹತಾ ಎಂಬ ಹೆಸರಿನಿಂದ ಅವತರಿಸಿದನು. ನರಸಿಯು ಏಳುವರ್ಷದವನಾಗುವಷ್ಟರಲ್ಲಿ ಆತನ ತಂದೆತಾಯಿಗಳಿಬ್ಬರೂ ಮರಣಹೊಂದಿದ್ದರಿಂದ ಅವನು ಪರದೇಶಿಯಾದನು. ಅವನ ಚಿಕ್ಕ-ದೊಡ್ಡಪ್ಪನ ಮಕ್ಕಳು ಬಹುಜನರು ಇದ್ದದರಿಂದ ಅವರಲ್ಲಿಯು ಕೆಲವರು ಅವನನ್ನು ಸಂರಕ್ಷಿಸಿದರು. ಅವನು ಚಿಕ್ಕಂದಿನಲ್ಲಿ ಬಹು ಆಟಗೂಳಿಯಾಗಿದ್ದನು. ಚಿಣಿಕೋಲು, ಚಂಡು ಬೊಗರಿ, ತಿಳ್ಳಿ

ಮೊದಲಾದ ಆಟಗಳಲ್ಲಿ ಸದಾ ಮಗ್ನನಾಗಿರುತ್ತಿದ್ದನು. ನರಸಿಯು ವಿದ್ಯಾಭ್ಯಾಸ ಮಾಡದಿರುವದಕ್ಕೂ ಅವನ ಉಡಾಳತನಕ್ಕೂ ಬೇಸತ್ತಿದ್ದ ಅವನ ಅತ್ತಿಗೆಯು ಒಂದು ದಿನ ಅವನಿಗೆ ಚೆನ್ನಾಗಿ ಸಿಟ್ಟುಮಾಡಿದಳು. ಅತ್ತಿಗೆಯ ಆ ಬೈಗಳಿಂದ ನರಸಿಗೆ ಬಹಳ ಕೆಡಕೆನಿಸಿತು. ವೃದ್ಧಾಪ್ಯದಲ್ಲಿ ಪುತ್ರಶೋಕವಾಗುವದೂ ತಾರುಣ್ಯದಲ್ಲಿ ಭಾರ್ಯಾವಿಯೋಗವಾಗುವದೂ ಬಾಲ್ಯದಲ್ಲಿ ಮಾತಾಪಿತರು ತೀರಿಕೊಳ್ಳುವದೂ ಇವೆಲ್ಲ ಈಶ್ವರೀಕ್ಷೋಭಗಳೆಂದು ತಿ[illegible] ಆ ನರಸೀ ಮೆಹತಾನು ಅಂಥ ಆ ಚಿಕ್ಕವಯಸ್ಸಿನಲ್ಲಿಯೇ ಅರಣ್ಯಕ್ಕೆ ತೆರಳಿದನು. ಧ್ರುವನಂತೆ ಅಡವಡವಿ ತಿರುಗುವಾಗ ಅವನಿಗೊಂದು ಹಾಳು ದೇಗುಲವು ಕಂಡಿತು.

ಆ ಗುಡಿಯು ಸದಾಶಿವನದಾಗಿತ್ತು. ನರಸಿಯು ಗುಡಿಯಲ್ಲಿ ಹೊಕ್ಕು, ದೇವರನ್ನು ಬಹಳ ಪ್ರಕಾರದಿಂದ ಸ್ತುತಿಸಿದನು; ಮತ್ತು ಅನ್ನ-ನೀರುಗಳನ್ನು ತ್ಯಜಿಸಿ ಆ ಶಿವಲಿಂಗಕ್ಕೆ ಅವನು ತನ್ನ ಶರೀರವನ್ನೇ ಅರ್ಪಿಸಿಬಿಟ್ಟನು. ಹೀಗೆ ಅವನು ಆ ಲಿಂಗದಮೇಲೆ ಏಳುದಿವಸಗಳವರೆಗೆ ಬಿದ್ದುಕೊಂಡು ಸಾಂಬನನ್ನು ನೆನಿಸಲು, ಗಂಧಾದಿ ಸಕಲ ಉಪಚಾರಗಳಿಂದ ಪೂಜಿಸಿ ತನ್ನನ್ನು ತೋಷಿಸಲೆತ್ನಿಸುವ ಭಕ್ತರಿಗಿಂತ ತನ್ನ ಶರೀರವನ್ನೇ ಅರ್ಪಿಸಿದ್ದ ನರಸೀಮೇಹತಾನ ಭಾವಕ್ಕೆ ಪ್ರಸನ್ನನಾದ ಗೌರೀವರನು ಅವನನ್ನು ಸ್ವಹಸ್ತದಿಂದ ಎಬ್ಬಿಸಿದನು. ಕೂಡಲೆ ನರಸಿಯು ಆ ಪ್ರಭುವಿನಡಿದಾವರೆಗಳಿಗೆರಗಿದನು. ಆಗ ವರಗಳನ್ನು ಬೇಡಿಕೋ ಎಂದು ದೇವನು ಅನುಜ್ಞೆಮಾಡಲು, ನರಸಿಯು ಯಾವ ವರವನ್ನೂ ಕೇಳಿಕೊಳ್ಳಲಿಲ್ಲ. ಯಾವಕಾಲಕ್ಕೆ ಯಾವ ಅಲಂಕಾರಗಳನ್ನು ತೊಡಿಸುವದರಿಂದ ಕೂಸಿಗೆ ಶೋಭೆಯುಂಟಾಗುವದೆಂಬದನ್ನು ತಾಯಿಯು ತಿಳಿದಿರುವಂತೆ ಭಕ್ತನ ಕಲ್ಯಾಣವು ಯಾವವರಗಳಿಂದ ಆಗುವದೆಂಬದನ್ನು ಭಕ್ತಕೈವಾರಿಯೇ ಬಲ್ಲನೆಂಬ ನಿಶ್ಚಯಭಾವದಿಂದ ನರಸಿಯು ವರಗಳನ್ನು ಕೇಳಿಕೊಳ್ಳಲಿಲ್ಲ. ಇದರಿಂದ ನರಸಿಯು ಒಳ್ಳೇ ಚತುರ ಭಕ್ತನಿರುವನೆಂದು ಊಹಿಸಿ, ಹೀಗೆ ಸಂಪೂರ್ಣವಾಗಿ ತನ್ನನ್ನು ಆಶ್ರಯಿಸಿರುವ ಭಕ್ತನಿಗೆ ತನ್ನ ಪ್ರಿಯದೈವತದ ದರ್ಶನಮಾಡಿಸಿ ಕೃತಾರ್ಥಗೊಳಿಸಬೇಕೆಂಬ ಉದ್ದೇಶದಿಂದ ಶ್ರೀ ಶಂಕರನು ಅವನಿಗೆ ಗೋಪಿಯ ವೇಷವನ್ನು ಕೊಟ್ಟು ಅವನನ್ನು ಸಂಗಡ ಕರಕೊಂಡು ಕಾಲಿಂದೀ ತೀರದಲ್ಲಿ ಗೋಪಿಯರೊಡನೆ ರಾಸಕ್ರೀಡೆಯನ್ನಾಡುತ್ತಿದ್ದ ಶ್ರೀಕೃಷ್ಣಪರಮಾತ್ಮನಲ್ಲಿಗೆ ಹೋದನು.

ನರಸಿಯು ಅಲ್ಲಿ ಶ್ರೀ ಪರಮಾತ್ಮನಿಗೆ ಸಾಷ್ಟಾಂಗಪ್ರಣಾಮ ಮಾಡಿದನು. ಆಕಾಶದಲ್ಲೆಲ್ಲ ಹರಡಿದ ನಕ್ಷತ್ರಗಳಲ್ಲಿ ಧ್ರುವನಕ್ಷತ್ರವು ತನ್ನ ಉಜ್ವಲ ತೇಜದಿಂದ

ನೋಡುವವರಿಗೆ ತಟ್ಟನೆ ಕಾಣುವಂತೆ ನರಸಿಯು ಗೋಪೀವೇಷದಲ್ಲಿದ್ದರೂ ಪರಮಾತ್ಮನು ಅವನನ್ನು ಕೂಡಲೆ ಕಂಡುಹಿಡಿದನು. ಆಗ ಆ ನಯನ ಮನೋಹರ ರೂಪಧಾರಿಣಿಯಾದ ಗೋಪಿಯ ಬಗ್ಗೆ ಶಂಕರನನ್ನು ಕೇಳಿ ನಿಜವೃತ್ತ ತಿಳಿದವನಾದ ಕೃಷ್ಣನು ನರಸಿಗೆ ಗಾಢಾಲಿಂಗನ ಕೊಟ್ಟು—ನರಸೀಮೆಹತಾನು ಕಲಿಯುಗದಲ್ಲಿಯೇ ದ್ವಾಪರಯುಗದೊಳಗಿನ "ರಾಸಕ್ರೀಡೆ"ಯನ್ನು ನೋಡಿದ್ದರಿಂದ ಅವನು ಆ ರಾಸಕ್ರೀಡೆಯನ್ನು ಕುರಿತು ಕಾವ್ಯವನ್ನು ಮಾಡಬೇಕೆಂದು ಆಜ್ಞಾಪಿಸಿದನು. ಹಾಗು "ನೀನು ನೆನಿಸಿದಾಗ ನಿನಗೆ ನನ್ನ ಲೀಲೆಗಳೆಲ್ಲ ದೃಗ್ಗೋಚರವಾಗುವವು." ಎಂದು ಅವನಿಗೆ ವರವಿತ್ತನು. ಬಳಿಕ ನರಸಿಯು "ರಾಸಕ್ರೀಡೆ"ಯ ಕಾವ್ಯವನ್ನು ಗುಜರಾಥೀ ಭಾಷೆಯಲ್ಲಿ ರಚಿಸಿದನು. ಆ ಮಧುರ ಕಾವ್ಯವನ್ನು ಈಗಲೂ ಆ ಪ್ರಾಂತದ ಜನರು ಒಳ್ಳೇ ಪ್ರೇಮದಿಂದ ಅನ್ನುವರು.

ಈ ಪ್ರಕಾರ ನರಸಿಯು ವರವನ್ನು ಪಡೆದು, ಆ ಅರಣ್ಯದಲ್ಲಿಯೇ ಹರಿನಾಮ ಸಂಕೀರ್ತನ ಮಾಡುತ್ತ ತಿರುಗುತ್ತಿದ್ದನು. ದನಗಳನ್ನು ಮೇಯಿಸಲಿಕ್ಕೆ ಬರುತ್ತಿದ್ದ ದನಗಾಹಿಗಳಿಗೆ ನರಸಿಯ ಕೀರ್ತನವು ಒಳ್ಳೇ ರುಚಿಸಿದ್ದರಿಂದ ದಿನಾಲು ಆ ದನಗಾಹಿಗಳ ಮೇಳವು ಕೀರ್ತನ ಕೇಳುವದಕ್ಕಾಗಿ ಅವನನ್ನು ಸುತ್ತುತ್ತಿತ್ತು. ಇತ್ತ ನರಸಿಯು ಮನೆಯಿಂದ ಒಮ್ಮೆಲೆ ಇಲ್ಲದಂತಾಗಲು, ಅವನ ಅಣ್ಣಂದಿರು ಅವನನ್ನು ಹುಡುಕುತ್ತಲೇ ಇದ್ದರು. ದನಗಾಹಿಗಳಿಂದ ಅವನ ಇರವನ್ನು ಕಂಡು, ಅವರು ನರಸಿಗೆ ತಿಳಿಹೇಳಿ ಅವನನ್ನು ಪುನಃ ಮನೆಗೆ ಕರೆತಂದರು.

ಇಷ್ಟು ಸ್ವಲ್ಪ ಅವಧಿಯೊಳಗಾಗಿ ಕೇವಲ ಉಲುಕೋಚಿವೃತ್ತಿಯು ಅಳಿದು ಹೋಗಿ ತೀರ ಗಂಭೀರ ಹಾಗು ಭಾವಿಕ ವೃತ್ತಿಯು ನರಸಿಯಲ್ಲಿ ನೆಲೆಗೊಂಡದ್ದನ್ನು ನೋಡಿ ಆ ಊರ ಜನರಿಗೆ ಬಹಳ ಆಶ್ಚರ್ಯವೆನಿಸಿತು. ಹಾಗು ಅವರು ನರಸಿಯ ವಿಷಯದಲ್ಲಿ ಪೂಜ್ಯಭಾವವುಳ್ಳವರಾದರು. ಅದೇ ಊರ ಒಬ್ಬ ಭಾವಿಕ ಬ್ರಾಹ್ಮಣನು ನರಸಿಗೆ ತನ್ನ ಉಪವರಳಾದ ಮಗಳನ್ನು ಕೊಟ್ಟು ವಿವಾಹ ಮಾಡಿದನು. ಗೃಹಸ್ಥಾಶ್ರಮಿಯಾದ ಬಳಿಕ ನರಸಿಗೆ ಒಬ್ಬ ಸುಕುಮಾರ ಮಗನೂ ಒಬ್ಬ ಸುಂದರಳಾದ ಕನ್ಯೆಯೂ ಜನಿಸಿದರು.

ಕಬ್ಬಿಣಕ್ಕೆ ಪರಿಸಮಣಿಯು ಸ್ಪರ್ಶವಾದ ಕೂಡಲೆ ಅದು ಉತ್ತಮವಾದ ಚಿನ್ನವಾಗುವಂತೆ, ಅನಾಥ ಹಾಗು ಆಟಗೂಳಿಯಾದ ನರಸಿಗೆ ಶ್ರೀಹರಿಯ ಅನುಗ್ರಹವಾದ ಬಳಿಕ ಯಾವದರ ಕೊರತೆಯಾಗಬೇಕು? ಅವನಿಗೆ ಎಲ್ಲವೂ ಅನು

ಕೂಲವಾಗಿದ್ದವು. ಅವನ ವೃತ್ತಿಯು ಕೇವಲ ಸಾತ್ವಿಕವಾಗಿತ್ತು. ಅವನು ದಿನಾಲು ತಾಳ, ವೀಣೆಗಳನ್ನು ಬಾರಿಸುತ್ತ ಶ್ರೀಹರಿಯ ಸಾಮಗಾನಮಾಡಿ ಶ್ರೀಹರಿಯ ಪದಗಳನ್ನು ರಚಿಸಿ, ಅಯಾಚಿತವೃತ್ತಿಯಿಂದ ಕಾಲಕ್ಷೇಪ ಮಾಡುವನು.

ಜುನಾಗಡದ ಹತ್ತರವೇ ಶಾಮಪುರವೆಂಬ ಊರಲ್ಲಿ ತ್ರಿಪುರಾಂತಕನೆಂಬ ಹೆಸರಿನ ಒಬ್ಬ ಸಾವುಕಾರನಿರುತ್ತಿದ್ದನು. ಅವನ ಕನ್ಯೆಯು ಉಪವರಳಾದ ಕಾರಣ ವರನನ್ನು ಗೊತ್ತುಮಾಡುವ ಸಲುವಾಗಿ ಆತನು ತಮ್ಮ ಕೃಷ್ಣಂಭಟ್ಟ ಎಂಬ ಹೆಸರಿನ ಪುರೋಹಿತನನ್ನು ಕಳುಹಿದ್ದನು. ಕೃಷ್ಣಂಭಟ್ಟನು ದೇಶ ದೇಶ ತಿರುಗಿದರೂ ಎಲ್ಲಿಯೂ ಯೋಗ್ಯಸ್ಥಳವು ದೊರೆಯಲಿಲ್ಲ; ಕಟ್ಟಕಡೆಗೆ ಅವನು ನಮ್ಮ ನರಸೀಮೆಹತಾನ ಮನೆಗೆ ಬಂದನು. ನರಸಿಯ ಮಗನೊಬ್ಬನು ವರನಿದ್ದದರಿಂದ ಆ ಭಟ್ಟನು ಅವನ ಮುಂದೆ ತನ್ನ ಯಜಮಾನನ ಕನ್ಯೆಯ ವಿಷಯದ ಮಾತು ತೆಗೆದನು. ಆಗ ವಧೂವರರ ಜಾತಕಗಳನ್ನು ನೋಡಿಸಲು ಅವು ಕೂಡಿಬಂದವು. ಆಗ ಭಟ್ಟನು ವರನನ್ನು ನಿಶ್ಚಯಿಸಿಕೊಂಡು ಶಾಮಪುರಕ್ಕೆ ಹೋಗಿ ತ್ರಿಪುರಾಂತಕನಿಗೆ ಎಲ್ಲ ಸಂಗತಿಯನ್ನು ತಿಳುಹಿದನು. ನರಸಿಯ ಮಗನನ್ನು ವರನಾಗಿ ಗೊತ್ತುಪಡಿಸಿದ್ದು ತ್ರಿಪುರಾಂತಕ ಹಾಗು ಅವನ ಆಪ್ತೇಷ್ಟರ ಮನಸ್ಸಿಗೆ ಬರಲಿಲ್ಲ. ಇಂಥ ದರಿದ್ರಸ್ಥಳವನ್ನು ಗೊತ್ತುಮಾಡಿಕೊಂಡು ಬಂದ ಬಗ್ಗೆ ಅವರು ಕೃಷ್ಣಭಟ್ಟನನ್ನು ಬಹಳವಾಗಿ ದೂರಿದರು; ಮತ್ತು ಹುಡುಗೆಯ ದುರ್ದೈವಕ್ಕಾಗಿ ಬಹಳ ಚಡಪಡಿಸಿದರು. ನರಸಿಯಂಥ ದರಿದ್ರನೂ, ವಿರಕ್ತನೂ, ಉದಾಸೀನನೂ, ಕೀರ್ತನಕಾರನೂ, ಸ್ವಂತದ ಮಾನಾಪಮಾನಗಳ ಪರವೆಯಿಲ್ಲದವನೂ ಆದ ನೆಂಟನು ತಮಗೆ ಬೇಡವೆಂದು ತ್ರಿಪುರಾಂತಕನು ಪುರೋಹಿತನನ್ನು ಕುರಿತು ಖಂಡಿತವಾಗಿ ಹೇಳಿಬಿಟ್ಟನು.

ಯಜಮಾನನ ಈ ತರದ ದುರುತ್ತರಗಳನ್ನು ಕೇಳಿ ಕೃಷ್ಣಂಭಟ್ಟನು ಮನಸ್ಸಿನಲ್ಲಿ ಬಹಳ ವ್ಯಾಕುಲನಾದನು. ಹೆಣ್ಣಿನ ಕಡೆಯ ಪುರೋಹಿತನು ಗೊತ್ತುಮಾಡಿದ ವರನನ್ನು ಆ ಪಕ್ಷದ ಯಜಮಾನನು ಸಮ್ಮತಿಸದೆ ಆ ನಿಶ್ಚಯವನ್ನು ಮುರಿದರೆ, ಆ ಪುರೋಹಿತನು ತನ್ನದೊಂದು ಕೈಬೆರಳನ್ನು ಕೊಯ್ದು ವರನಿಗೆ ಒಪ್ಪಿಸುವ ರೂಢಿಯು ಆ ದೇಶದಲ್ಲಿ ಪ್ರಚಾರದಲ್ಲಿತ್ತು. ಅದರಂತೆ ತಾನು ಮಾಡುವೆನೆಂದು ಕೃಷ್ಣಂಭಟ್ಟನು ಯಜಮಾನನಿಗೆ ನಿವೇದಿಸಿದನು. ತನ್ನ ಸಲುವಾಗಿ ಪುರೋಹಿತನಿಗುಂಟಾಗುವ ಸಂಕಟವನ್ನೂ ಮಾನಹಾನಿಯನ್ನೂ ಅರಿತು ತ್ರಿಪುರಾಂತಕನು ಬೇರೊಂದು ಯುಕ್ತಿಯನ್ನು ಕಂಡುಹಿಡಿದನು. ಪುರೋಹಿತನ ಕೈಬೆ

ರಳೂ ತುಂಡಾಗ ಬಾರದು, ತನ್ನ ಕನ್ಯೆಯೂ ನರಸಿಯು ಮನೆಗೆ ಬೀಳಬಾರದು ಇಂಥ ತುಂಟತನದ ಆ ಯುಕ್ತಿ ಯಾವದೆಂದರೆ . ನರಸಿಯು ಆನೆ, ಕುದುರೆ, ರಥ ಮೊದಲಾದ ಐವತ್ತು ವಾಹನಗಳನ್ನೂ, ವಿಪುಲದ್ರವ್ಯ, ಅಮೂಲ್ಯವಾದ ವಸ್ತ್ರ-ಒಡಿವೆ, ಹಾಗು ಹಲವುಜನ ದಾಸ-ದಾಸಿಯುರನ್ನೂ ಕೂಡಿಕೊಂಡು ಬಂದು ನಾಳೆಯೇ ಲಗ್ನವನ್ನು ತೀರಿಸಿಕೊಳ್ಳಬೇಕು. ಇದಕ್ಕೆ ತಪ್ಪಿದರೆ ನರಸಿಯು ತಾನಾಗಿಯೇ ಕನ್ಯೆಯನ್ನು ನಿರಾಕರಿಸಿದ ಹಾಗಾಗುವದರಿಂದ ಪುರೋಹಿತರು ಅಂಗುಲಿಯನ್ನು ಚ್ಛೇದಿಸಿಕೊಳ್ಳುವ ಕಾರಣವು ಉಳಿಯುವದಿಲ್ಲ. ಎಂದನು.

ಯಜಮಾನನ ಈ ಕುಹಕ ಮನೋಗತವು ಧೂರ್ತನಾದ ಕೃಷ್ಣಂಭಟ್ಟನಿಗೆ ತಿಳಿದಕೂಡಲೆ ಅವನು ಧೈರ್ಯಗುಂದಲಿಲ್ಲ. ಅವನು ಸ್ವತಃ ಮಹಾಭಾವಿಕನಿದ್ದದರಿಂದಲೂ, ನರಸಿಯ ಮಹಾ ಯೋಗ್ಯತೆಯನ್ನು ಬಲ್ಲವನಾದ್ದರಿಂದಲೂ ಶುಭೇಚ್ಛುವಾದ ಆ ಭಟ್ಟನು ಕೂಡಲೆ ನರಸಿಯ ಬಳಿಗೆ ಹೋದನು. ಹಾಗು ಸಾವುಕಾರನ ವಿಪರೀತ ಕರಾರುಗಳನ್ನು ಕೇಳಿಕೊಂಡು ನರಸಿಯು ಒಂದು ವೇಳೆ ಅದಕ್ಕೆ ಒಪ್ಪದಿದ್ದರೆ ತನ್ನ ಅಪಮಾನವಾಗಬಹುದೆಂದು ಅವನು ನರಸಿಗೆ ಸಾವುಕಾರನ ಇತರ ಯಾವ ಮಾತುಗಳನ್ನೂ ಹೇಳದೆ, "ಸಾವುಕಾರನಲ್ಲಿಯ ಕೆಲವೊಂದು ಅಡಚಣಿಯ ಮೂಲಕ ಲಗ್ನವನ್ನು ಮುಂದೆ ಹಾಕುವಂತಿಲ್ಲ, ನಾಳಿನ ಶುಭ ಮುಹೂರ್ತದಲ್ಲಿ ಲಗ್ನವಾಗಲೇಬೇಕು. ಕಾರಣ ತಾವು ತಮ್ಮ ಪರಿವಾರದೊಡನೆ ನಾಳೆಯೇ ಶಾಮಪುರಕ್ಕೆ ಬರತಕ್ಕದ್ದು" ಎಂಬಿವಿಷ್ಟು ಸಂಗತಿಗಳನ್ನು ಮಾತ್ರ ತಿಳಿಸಿ ಹೋದನು.

ಇತ್ತ ಸಾವುಕಾರನು ತನ್ನ ಯೋಜನೆಯಿಂದ ಬಂದ ಅನಿಷ್ಟವು ನಿವಾರಣವಾಯಿತೆಂದು ಮನದಲ್ಲಿ ಹಿಗ್ಗಿ ಲಗ್ನದ ಯಾವ ಸೌರಣೆಯನ್ನೂ ಮಾಡದೆ ಕುಳಿತುಬಿಟ್ಟನು. ಆದರೆ ಇತ್ತ ನರಸಿಯು ಮರುದಿನ ಬೆಳಗಾಗುತ್ತಲೆ ಸ್ನಾನಾದಿ ವಿಧಿಗಳನ್ನು ತೀರಿಸಿ ಕೃಷ್ಣಪೂಜೆಯನ್ನು ಮಾಡಿದನು; ಹಾಗು ಕೈಯಲ್ಲಿ ತಂಬೂರಿ ತಾಳಗಳನ್ನು ಹಿಡಿದುಕೊಂಡು ಮಿಕ್ಕ ವೈಷ್ಣವಭಕ್ತರೊಡನೆಯೂ ಹೆಂಡತಿ-ಪುತ್ರ-ಕನ್ಯೆಯರೊಡನೆಯೂ ಹರಿನಾಮಸಂಕೀರ್ತನ ಗೆಯ್ಯುತ್ತ ಮಗನ ಲಗ್ನಕ್ಕಾಗಿ ಶಾಮಪುರದ ಹಾದಿಯ ಹಿಡಿದನು. ತಮ್ಮಂಥ ದರಿದ್ರನೆಂಟರನ್ನು ನೋಡಿದಕೂಡಲೆ ಸಾವುಕಾರನು ಲಗ್ನವನ್ನು ಮುರಿದು ಎಲ್ಲಿ ತಮ್ಮ ಅಪಮಾನ ಮಾಡಿ ಕಳಿಸುವನೋ ಎಂಬ ಕಲ್ಪನೆಯು ಕೂಡ ನರಸೀಮೇಹತಾನಲ್ಲಿ ಬರದ್ದರಿಂದ, ಅವನು ಏಕೋಭಾವದಿಂದ ನಾಮಸಂಕೀರ್ತನ ಮಾಡುತ್ತ ಆನಂದದಿಂದ ನಡೆದಿ

ದ್ದನು. ಇಂಥ ಅನನ್ಯಗತಿಕನಾದ ಭಕ್ತನ ಮಾನಾಪಮಾನದ ಪರವೆಯು ಶ್ರೀಹರಿಗಲ್ಲದೆ ಇನ್ನಾರಿಗಿರಬೇಕು? ಆಗ ನರಸಿಯ ಅಪಮಾನವಾಗದ ಹಾಗೆ ಲಗ್ನಸಮಾರಂಭದ ಸಿದ್ಧತೆಯನ್ನಿಡುವ ಭಾರವು ಆ ಪರಮಾತ್ಮನ ಮೇಲೆಯೇ ಬಿದ್ದಿತು. ಆಗ ದ್ವಾರಕಾಧೀಶನಾದ ಶ್ರೀಹರಿಯು ಉದ್ಧವ, ಅಕ್ರೂರ, ವಾಲ್ಮೀಕಿ, ನಾರದ, ತುಂಬರ, ಹನುಮಾನ ಮೊದಲಾದ ಭಕ್ತರನ್ನು ಕೂಡಲೆ ಕರೆಸಿಕೊಂಡನು. ಮಿತ್ರವಿಂದಾ, ಲಕ್ಷ್ಮಣಾ, ಯಾಜ್ಞಜಿತಿ ಮುಂತಾದ ಅಷ್ಟನಾಯಕಿಯರು ಬೀಗರ ಕಡೆಯವರಾಗಿ ನರಸೀಮೆಹತಾನ ಮಗನ ಲಗ್ನಕ್ಕೆ ಹೋಗಬೇಕಾಯಿತು. ಆನೆ, ಕುದುರೆ, ರಥ, ಪಲ್ಲಕ್ಕಿಗಳೆಲ್ಲ ಸಿದ್ಧವಾಗಿ ಮಂಗಲವಾದ್ಯಗಳು ಮೊಳಗ ತೊಡಗಿದವು. ಋದ್ಧಿ-ಸಿದ್ಧಿಯರನ್ನು ಸಂಗಡ ಕರಕೊಂಡು ರುಕ್ಮಿಣೀದೇವಿಯು ಮುಖ್ಯ ಬೀಗಿತ್ತಿಯಾಗಿ ಹೊರಟಳು. ಈ ಪ್ರಕಾರದ ಸನ್ನಾಹಯುಕ್ತನಾದ ಶ್ರೀಪರಮಾತ್ಮನು ನರಸಿಯು ನಾಮಗಾನಮಾಡುತ್ತ ನಡೆದಿದ್ದ ಸ್ಥಳದಿಂದ ಸ್ವಲ್ಪ ಮುಂದೆ ನಡೆದಿದ್ದನು.

ಶಾಮಪುರವು ಸಮೀಪಿಸುತ್ತಲೆ ತಾವು ಸರ್ವಸನ್ನಾಹದೊಡನೆ ಬಂದಿರುವೆವೆಂದು ಶ್ರೀಕೃಷ್ಣನು ಸಾವುಕಾರನಿಗೆ ಹೇಳಿಕಳುಹಿದನು. ಈ ಸುದ್ದಿಯನ್ನು ಕೇಳಿ ಸಮುದ್ರವನ್ನು ಕಂಡು ಗೊಡರಗಪ್ಪೆಯು ಬೆರಗಾಗುವಂತೆಯೂ ಪಚ್ಛರತ್ನವನ್ನು ಕಂಡು ಕಾಜುಮಣಿಗಳು ತೇಜೋವಿಹೀನವಾಗುವಂತೆಯೂ, ಪಂಡಿತನನ್ನು ಕಂಡು ಮೂರ್ಖನು ಬೆದರುವಂತೆಯೂ ಗರ್ವಿಷ್ಠನಾದ ಸಾವುಕಾರನು ವಿಸ್ಮಯಗೊಂಡನು. ಆಗ ಅವನು ಊರ ಪ್ರಮುಖ ಗೃಹಸ್ಥರೊಡನೆ ನರಸಿಯನ್ನು ಇದಿರ್ಗೊಳ್ಳಲು ಹೋಗಿ ಅವನ ಕಾರಭಾರಿಯಾದ ಪರಮಾತ್ಮನಿಗೆ ಭೆಟ್ಟಿಯಾದನು. ಆಯುಷ್ಯಕ್ಷೀಣವಾದವನಿಗೆ ಅಮೃತವು ಲಭಿಸುವಂತೆ ತ್ರಿಪುರಾಂತಕ ಸಾವುಕಾರನಿಗೆ ನರಸಿಯಂಥ ಉತ್ತಮ ಸೆಂಟನು ದೊರೆತನೆಂದು ನರಸಿಯ ಕಾರಭಾರಿಯಾದ ಭಗವಂತನು ನರಸಿಯ ಶ್ಲಾಘನೆ ಮಾಡುತ್ತ ನುಡಿದನು. ಆಗ ಸಾವುಕಾರನು ಆ ಕಾರಭಾರಿಯ ಹೆಸರು-ದೆಶೆಯನ್ನು ಕೇಳಿದನು. ಅವನು—ನನ್ನ ಹೆಸರು ಸಾವಳಸಾ, ದ್ವಾರಕೆಯಲ್ಲಿ ವಾಸಿಸುವನಾದ ನಾನು ನರಸಿಯ ಗುಮಾಸ್ತನಿದ್ದೇನೆ. ನರಸಿಯ ಅಂತರಂಗದ ವಿಷಯಗಳನ್ನೆಲ್ಲ ನನ್ನ ಹೊರತು ಬೇರೆ ಯಾರೂ ಅರಿಯರು.

ಆದರೆ ಆ ಭಗವದ್ವಾಣಿಯ ಗೂಢಾರ್ಥವು ಯಾರಿಗೂ ತಿಳಿಯಲಿಲ್ಲ. ಪದ್ಧತಿಯಂತೆ ಸೀಮಾಂತಪೂಜನವಾಯಿತು. ಸಾವುಕಾರನು ಬಹಳ ಬೆಲೆಯುಳ್ಳವೆಂದು

ತಂದ ವಸ್ತ್ರ, ಒಡಿವೆ, ಅರಿವೆ-ಅಂಚಡಿಗಳು ಭಗವಂತನು ತಂದ ಪದಾರ್ಥಗಳನ್ನು ಸರಿಗಟ್ಟಬಲ್ಲವೆ? ಆಗ ಸಾವುಕಾರನು ಮನಸ್ಸಿನಲ್ಲಿ ಲಜ್ಜಾಯಮಾನನಾದನು. "ನೀವು ಈಗ ಅಸ್ವಸ್ಥಚಿತ್ತರಾಗಿ ಮಾಡುವದೇನು? ಮಧುರ ಅನ್ನವಸ್ನು ತಯಾರಿಸುವದಿದ್ದರೆ ಅದರಲ್ಲಿ ಹೆಚ್ಚಾಗಿ ಉಪ್ಪುಬೆರಿಸದಂತೆ ಮೊದಲೇ ಎಚ್ಚರಪಡಬೇಕಾಗುವದು. ತನಗಿಂತ ದೊಡ್ಡಯೋಗ್ಯತೆಯುವರೊಡನೆ ಸೆಂಟಿಸ್ತನವನ್ನು ಎಂದೂ ಮಾಡಬಾರದು. ಈಗ ಆದದ್ದಾಗಿದೆ, ಇನ್ನು ಈ ಬಗ್ಗೆ ಮನಸ್ತಾಪಮಾಡಿಕೊಳ್ಳಬೇಡಿರಿ. ದ್ವೈತಭಾವವನ್ನು ಬಿಟ್ಟುಕೊಟ್ಟು ನೀವು ಮಾಡಿದ ಸಾಮಗ್ರಿಯನ್ನೆಲ್ಲ ನಮ್ಮ ಯಜಮಾನನ (ನರಸಿಯ) ಸ್ವಾಧೀನಮಾಡಿರಿ. ಅಂದರೆ ಅವನು ನಿಮಗೆ ಯಾವ ಕೊರತೆಯೂ ಉಂಟಾಗದಂತೆ ನೋಡಿಕೊಳ್ಳುವನು'' ಎಂದು ಸಾವಳಾಸಾನು ನುಡಿದನು.

ತ್ರಿಪುರಾಂತಕನು ಒಣ ಡೌಲನ್ನು ಬಿಟ್ಟುಕೊಡಲು, ಶ್ರೀ ಪರಮಾತ್ಮನ ಆಶ್ರಯದಲ್ಲಿ ವಿವಾಹ ಸಮಾರಂಭವು ಅಪೂರ್ವವಾಗಿ ಜರಗಿತು. ಬಳಿಕ ನರಸಿಯು ಸ್ವಪರಿವಾರದೊಡನೆ ಜುನಾಗಡಕ್ಕೆ ಹೊರಟನು. ಭಗವಂತನು ಶಾಮುಪುರ ಬಿಟ್ಟ ಕೂಡಲೆ ಪರಿವಾರಸಹಿತ ಗುಪ್ತನಾಗಿ ದ್ವಾರಕೆಗೆ ನಡೆದನು.

ಮಗನ ಲಗ್ನವು ಒಳ್ಳೇ ಸಡಗರದಿಂದ ನಡೆದದ್ದಕ್ಕಾಗಿಯೂ ಪ್ರತ್ಯಕ್ಷ ಭಗವಂತನೇ ತನಗೆ ನೆರವಾದದ್ದಕ್ಕಾಗಿಯೂ ನರಸಿಯು ಆನಂದದಲ್ಲಿ ತಲ್ಲೀನನಾಗಿ ಭಕ್ತಿಪರಾಙ್ಮುಖನಾಗಲಿಲ್ಲ. ಅವನು ವಿಷಯದ ಬಗ್ಗೆ ಪೂರ್ಣವೈರಾಗ್ಯಯುಕ್ತನಾಗಿ ಮಮತೆ(ಲೋಭ)ಯ ಬೇಡಿಯನ್ನು ಕಿತ್ತು ಒಗೆದು, ಬುದ್ಧಿಯ ಸಂಕಲ್ಪ-ವಿಕಲ್ಪಗಳನ್ನೆಲ್ಲ ಬಿಟ್ಟುಕೊಟ್ಟು ಈಶ್ವರ ಭಜನೆಯಲ್ಲಿ ನಿರತನಾದನು.

ಒಂದು ದಿನ ದ್ವಾರಕೆಯ ಯಾತ್ರೆಗೆ ಹೊರಟಿದ್ದ ಯಾತ್ರಿಕರಲ್ಲಿ ಎಷ್ಟೋ ಜನ ಯಾತ್ರಿಕರು ಜುನಾಗಡದಲ್ಲಿ ಮುಕ್ಕಾಮು ಮಾಡಿದರು. ಅವರಲ್ಲಿ ಕೇಶವಭಟ್ಟನೆಂಬೊಬ್ಬ ಭಾವಿಕ ಬ್ರಾಹ್ಮಣನಿದ್ದನು. ಅವನು ಸಂಗಡ ಆರೇಳು ನೂರು ನಾಣ್ಯಗಳನ್ನು ತಂದಿದ್ದನು. ಪ್ರವಾಸದಲ್ಲಿ ರೋಖನಾಣ್ಯವನ್ನು ಒಯ್ಯುವದು ಸರಿಯಲ್ಲವೆಂದು ಯೋಚಿಸಿ ಅವನು ಯಾವನಾದರೊಬ್ಬ ಹುಂಡೀ ವ್ಯವಹಾರಸ್ಥನನ್ನು ಶೋಧಿಸುತ್ತಿದ್ದನು. ಆಗ ಆ ಭಾವಿಕನಿಗೆ ಕೆಲವು ಕುಟಿಲ ಸ್ವಭಾವದ ನೀಚರು ನರಸೀಮೆಹತಾನ ಮನೆತೋರಿಸಿದರು. ಕೇಶವಭಟ್ಟನು ಒಂದು ತನಗೆ ಹುಂಡೀಪತ್ರವನ್ನು ಕೊಡಬೇಕೆಂದು ನರಸಿಯನ್ನು ಕೇಳಿಕೊಳ್ಳಲು, ನರಸಿಯು ನಿಂದಕರ ಕುಚೇಷ್ಟೆಗೆ ಹೆದರದೆ ಕೂಡಲೆ ಕೇಶವನಿಂದ ೭೦೦ ನಾಣ್ಯಗ

ಳನ್ನು ತಕ್ಕೊಂಡು ದ್ವಾರಕೆಯಲ್ಲಿಯ ತನ್ನ ಗುಮಾಸ್ತನ ಹೆಸರಿನಿಂದ ಹುಂಡೀ ಪತ್ರವನ್ನು ಬರೆದುಕೊಟ್ಟನು. ಆ ಹುಂಡೀಪತ್ರದ ಮೇಲ್ವಿಳಾಸವು ಈ ಪ್ರಕಾರ ಬರೆಯಲ್ಪಟ್ಟಿತ್ತು.

"ಯಾವನು ಉಪಮನ್ಯುವಿಗೆ ಕ್ಷೀರಸಾಗರವನ್ನು ಕೊಟ್ಟನೋ, ಯಾವನು ಸುದಾಮನಿಗೆ ಬಂಗಾರದ ಪಟ್ಟಣವನ್ನು ಕೊಟ್ಟನೋ ಮತ್ತು ಯಾವನು ಧ್ರುವಬಾಲಕನಿಗೆ ನಿಶ್ಚಲಪದವನ್ನು ಕೊಟ್ಟನೋ ಅಂಥ ದ್ವಾರಕಾಪುರವಾಸಿಯಾದ ನನ್ನ ಗುಮಾಸ್ತ ಸಾವಳಸಾನಿಗೆ"

ಭಾವಿಕನಾದ ಕೇಶವಭಟ್ಟನು ಮನಸ್ಸಿನಲ್ಲಿ ಯಾವ ಅನುಮಾನವನ್ನೂ ತೆಗೆದುಕೊಳ್ಳದೆ ಆ ಪತ್ರವನ್ನು ಕಟ್ಟಿಕೊಂಡು ನರಸಿಯ ಮನೆಯಿಂದ ಹೊರಬೀಳಲು, ನರಸಿಯು ಆ ಎಲ್ಲ ನಾಣ್ಯಗಳನ್ನು ಬಡಬಗ್ಗರಿಗೆ ಹಂಚಿ ಹರಿನಾಮಗಾನದಲ್ಲಿ ತತ್ಪರನಾದನು. ಸಮುದ್ರದಲ್ಲಿ ಚಲ್ಲಿದ ಉಪ್ಪಿನಂತೆಯೂ, ಅಗ್ನಿಯಲ್ಲಿ ಸುರುವಿದ ತುಪ್ಪದಂತೆಯೂ ತನ್ನ ದ್ರವ್ಯವು ಕೃಷ್ಣಾರ್ಪಣವಾಯಿತೆಂದು ತಿಳಿದು ಚಿಂತಾಯುಕ್ತನಾದ ಆ ಬ್ರಾಹ್ಮಣನು ದ್ವಾರಕೆಗೆ ಮುಟ್ಟಿದನು. ಅವನು ತೀರ್ಥದಲ್ಲಿ ಸ್ನಾನ ಮಾಡಿ ತನ್ನ ಹುಂಡಿಯು ಸ್ವೀಕಾರವಾಗುವಂತೆ ಅನುಗ್ರಹಿಸಬೇಕೆಂದು ಶ್ರೀಕೃಷ್ಣನನ್ನು ಪ್ರಾರ್ಥಿಸಿದನು. ಬಳಿಕ ಸಾವಳಸಾಗುಮಾಸ್ತನ ಬಿಡಾರವನ್ನು ಕಂಡುಕೊಳ್ಳುವದಕ್ಕಾಗಿ ಹೊರಟನು. ಬಹಳ ಹೊತ್ತು ಹುಡುಕಿದರೂ ಆ ಗುಮಾಸ್ತನ ಪತ್ತೆಯಾಗಲಿಲ್ಲ; ಕಡೆಗೆ ಅವನು ಪೂಜಾರಿಗೆ ಸಾವಳಸಾನ ಗೊತ್ತು ಹಚ್ಚಿಕೊಡಬೇಕೆಂದು ವಿನಂತಿ ಮಾಡಿಕೊಂಡನು. ಆಗ ಅವನು—ಸಾವಳಸಾಹೆಸರಿನ ಸಾವುಕಾರನು ಈ ದ್ವಾರಕಾಪಟ್ಟಣದಲ್ಲಿ ಯಾರೂ ಇಲ್ಲ. ನೀವು ಹುಂಡೀಪತ್ರ ಬರೆಸಿಕೊಳ್ಳುವಾಗಲೇ ಈ ಬಗ್ಗೆ ಎಚ್ಚರಪಡಬೇಕಾಗಿತ್ತು; ಇನ್ನೇನು ಮಾಡುವಿರಿ? ನಿಮ್ಮ ಹಣವು ಮುಳುಗಿತೆಂದು ತಿಳಿಯಿರಿ. ಪ್ರಾಪಂಚಿಕರು ಮೋಕ್ಷಸಾಧನಕ್ಕೆ ಮಾತ್ರ ಸಾಧುಸಜ್ಜನರ ಸಹವಾಸ ಮಾಡಬೇಕೇ ಹೊರತು ವ್ಯವಹಾರದಲ್ಲಿ ಸಾಧುಗಳ ಸಹವಾಸವು ಏನೂ ಕೆಲಸದ್ದಲ್ಲ. ೭೦೦ ನಾಣ್ಯಗಳನ್ನು ಕೊಟ್ಟು ಈ ಜಾಣತನವನ್ನು ಕೊಂಡುಕೊಂಡಿರೆಂದು ತಿಳಿದು ಸುಮ್ಮನಿರಿ, ಎಂದು ಹೇಳಿದನು.

ಕೇಶವಭಟ್ಟನು ಮತ್ತಿಷ್ಟು ಚಿಂತಾಮಗ್ನನಾದನು. ಜುನಾಗಡಕ್ಕೆ ಮರಳಿ ಹೋಗಿ ನರಸೀಮೆಹತಾನ ಕಡೆಯಿಂದಲೇ ನಾಣ್ಯಗಳನ್ನು ಇಸಕೊಳ್ಳಬೇಕೆಂದರೆ, ಅವನು ಆ ನಾಣ್ಯಗಳನ್ನು ದಾನಮಾಡಿದ್ದನ್ನು ಕಣ್ಮುಟ್ಟ ನೋಡಿದ್ದನು. ಇದರಿಂದ ಆ ಭಟ್ಟನು ಮುಂದುಗಾಣದೆ ಮನಸ್ಸಿನಲ್ಲಿ ದೇವರನ್ನು ನೆನೆಯುತ್ತ ಮ್ಲಾನವದನ

ದಿಂದ ಆ ಊರ ಮಧ್ಯ ಪಟಾಂಗಣಕ್ಕೆ ಹೋಗಿ ನಿಂತನು.

ತನ್ನ ಭಕ್ತನು ಬರಕೊಟ್ಟ ಹುಂಡೀಪತ್ರವನ್ನು ಪಟಾಯಿಸುವ ಭಾರವು ಶ್ರೀ ಕೃಷ್ಣ ಪರಮಾತ್ಮನ ಮೇಲೆ ಬಿದ್ದದರಿಂದ ಅವನು ಸಾವುಕಾರನ ವೇಷತಾಳಿ, ಒಂದು ರಥದಲ್ಲಿ ಕುಳಿತು ಕೇಶವಭಟ್ಟನು ಯೋಚಿಸುತ್ತ ನಿಂತಲ್ಲಿಗೆ ಬಂದನು. ಹಾಗು ಅವನನ್ನು ಕುರಿತು—ನೀವು ನಡುದಾರಿಯಲ್ಲಿ ಏನನ್ನು ಯೋಚಿಸುತ್ತ ನಿಂತಿರುವಿರಿ? ಎಂದು ಕೇಳಿದನು. ಆಗ ಅವನು ತನ್ನ ಹುಂಡೀಪತ್ರದ ಎಲ್ಲ ಸಂಗತಿಯನ್ನು ಅವನಿಗೆ ತಿಳಿಸಲು, ಆ ವೇಷಧಾರಿಯಾದ ಸಾವುಕಾರನು-ನಾನೇ ಸಾವಳಸಾ ಎಂದನು. ಯಾವನನ್ನು ಹುಡುಕಿ-ಹುಡುಕಿ ಬೇಸತ್ತಿದ್ದನೋ ಆ ಸಾವಳಸಾನು ಅಕಸ್ಮಾತ್ ಹೀಗೆ ಭೆಟ್ಟಿಯಾದ್ದರಿಂದ ಆ ಭಾವಿಕ ಭಟ್ಟನಿಗೆ ಬಹಳ ಹರ್ಷವಾಯಿತು. ಕೂಡಲೆ ಅವನು ಬಕ್ಕಣದೊಳಗಿನ ಹುಂಡೀಪತ್ರವನ್ನು ತೆಗೆದು ಅವನ ಕೈಗಿತ್ತನು. ಸಾವಳಸಾನು ತನ್ನ ಯಜಮಾನನ (ಭಕ್ತನ) ಆಜ್ಞಾಪತ್ರವನ್ನು ತಲೆಯ ಮೇಲಿರಿಸಿಕೊಂಡು ಅದಕ್ಕೆ ವಂದನೆಮಾಡಿ, ಬಳಿಕ ಅದನ್ನು ಸ್ಮಿತವದನದಿಂದ ಓದಿದನು. ಹಾಗು ಅಲ್ಲಿಯೇ ೭೦೦ ನಾಣ್ಯಗಳನ್ನು ಕೇಶವಭಟ್ಟನಿಗೆ ಕೊಟ್ಟುಬಿಟ್ಟನು.

ಸಾವಳಸಾನ ಭವ್ಯವೇಷ, ಹಾಗು ಈ ತರದ ಚಟವಟಿಕೆಗಳಿಗೆ ಬೆರಗಾದ ಕೇಶವಭಟ್ಟನು—"ನಿಮ್ಮನ್ನು ನೋಡಿ ನನಗೆ ಬಹಳ ಸೋಜಿಗವಾಗುತ್ತದೆ. ರಾಜನಿಗಿಂತಲೂ ಪ್ರಧಾನನು ವೈಭವಶಾಲಿಯಿರುವದಿಲ್ಲ; ಸೂರ್ಯನಿಗಿಂತಲೂ ಅರುಣನ ತೇಜವು ಹೆಚ್ಚಾಗಿರುವ ಸಂಭವವಿಲ್ಲ; ಸಮುದ್ರಕ್ಕಿಂತಲೂ ದೊಡ್ಡ ಹೊಳೆಯು ಇರಲಾರದು. ಆದರೆ ನರಸೀಮೆಹತಾನಂಥ ದರಿದ್ರ ಸಾವುಕಾರನ ಗುಮಾಸ್ತನ ಅವರ್ಣನೀಯ ವೈಭವವನ್ನು ನೋಡಿದ ನನಗೆ ಭಾಗೀರಥಿಹೊಳೆಗಿಂತ ಊರಮುಂದಿನ ಚಿಕ್ಕ ಹಳ್ಳವೇ ಬಹಳ ದೊಡ್ಡದೂ ಹೆಚ್ಚು ಪವಿತ್ರವೂ ಇರುವಂತೆ ಭಾಸವಾಗುತ್ತದೆ" ಎಂದು ನುಡಿದನು.

ಆಗ ಸಾವಳಸಾನು ನುಡಿದನೇನಂದರೆ—ವೈಷ್ಣವಭಕ್ತರು ಪೂರ್ಣ ವಿರಾಗಿಗಳಿರುವದರಿಂದ ಅವರಿಗೆ ಯಾವ ಬಹಿರಾಡಂಬರವೂ ಬೇಕಾಗಿಲ್ಲ. ಯಾರು ಲಕ್ಷ್ಮೀಪತಿಯನ್ನೇ ಋಣಿಯಾಗಮಾಡಿಕೊಳ್ಳುವರೋ ಅವರಿಗೆ ಧನ-ಸಂಪತ್ತುಗಳ ಪರಿವೆಯತ್ತ? ಆದರೆ ತಾಯಿಯು ತಾನು ಸ್ವತಃ ವಸ್ತ್ರ-ಒಡಿವೆಗಳನ್ನು ಇಟ್ಟುಕೊಳ್ಳದಿದ್ದರೂ ತನ್ನ ಮಕ್ಕಳನ್ನು ನಾನಾ ತರದ ಅಲಂಕಾರಗಳಿಂದ ಭೂಷಿಸುವಂತೆ, ನಮ್ಮಂಥ ಸೇವಕರನ್ನು ಶೃಂಗರಿಸುವದರಲ್ಲಿ ನಮ್ಮ ಯಜಮಾನನಾದ ನರಸೀಮೆಹತಾನಿಗೆ ಆನಂದವೆನಿಸುತ್ತದೆ.

ಈ ಪ್ರಕಾರ ನುಡಿದು ಸಾಪಳಸಾನು ನೋಡ-ನೋಡುತ್ತಿರಲು ಗುಪ್ತನಾದನು. ಆಗ ಬ್ರಾಹ್ಮಣನು ಮನಸ್ಸಿನಲ್ಲಿ ಸಂಶಯಗ್ರಸ್ತನಾಗಿ ತನ್ನ ನಾಣ್ಯಗಳನ್ನು ಎಣಿಸಿದನು. ಅವು ೭೦೦ ಕ್ಕಿಂತ ಎಷ್ಟೋ ಪಾಲು ಹೆಚ್ಚಿದ್ದವು. ಆಗಲೆ ಆ ಭಾವಿಕನಿಗೆ ದೇವರ ಅಗಾಧಲೀಲೆಯ ಅನುಭವ ಬರಲು, ಅವನು ತನ್ನ ಮೂಲಧನ (೭೦೦ನಾಣ್ಯ) ವನ್ನು ಕಟ್ಟಿಟ್ಟು ಹೆಚ್ಚಿನ ಧನವನ್ನೆಲ್ಲ ಸದ್ವಿನಿಯೋಗಮಾಡಿದನು.

ಭಕ್ತಕೈವಾರಿಯಾದ ಭಗವಂತನು ನರಸಿಯ ಭಾವಕ್ಕೆ ಒಲಿದು ಅವನಿಗೆ ಅನುಕೂಲನಾಗಿ ನಡೆದಂತೆ, ನಿಶ್ಚಲ ಮನಸ್ಸಿನ ಭಾವಿಕರಿಗೆ ಆ ದೇವದೇವೋತ್ತಮನು ಅನುಗ್ರಹಿಸುವದರಲ್ಲಿ ಸಂಶಯವಿಲ್ಲ.

ಪರಮಾತ್ಮನು ಭಕ್ತಿಗೆ ಒಲಿಯುವನಲ್ಲದೆ, ಮತ್ತ್ಯಾವದಕ್ಕೂ ಒಲಿಯಲಾರನು. ಶುದ್ಧಭಾವವು ಪರಮಾತ್ಮನಿಗೆ ಪ್ರಿಯವಾದದ್ದು; ಈ ಶುದ್ಧಭಾವವು ಯಾರಲ್ಲಿರುವದೋ, ಅವರನ್ನೇ ಆ ಭಕ್ತವತ್ಸಲನು ಪ್ರೀತಿಸುವನು. ಪಾಮರರಾದ ನಾವು ಶುದ್ಧಭಾವದ ಗಂಧವನ್ನರಿಯದೆ, ಸುಮ್ಮನೆ ನಾವು ದೊಡ್ಡವರು, ನಾವು ದೊಡ್ಡವರು, ಎಂದು ಕೂಗಾಡುತ್ತಿರುವೆವು. ನಿಜವಾದ ದೇವಭಕ್ತರು ಯಾವದಕ್ಕೂ ಗರ್ವಪಡುವದಿಲ್ಲ; ಯಾರನ್ನೂ ಶಿಕ್ಷಿಸಹೋಗುವದಿಲ್ಲ; ಯಾರಿಗೂ ಯಾವ ಬಗೆಯ ಕೇಡನ್ನುಂಟುಮಾಡಲು ಯತ್ನಿಸುವದಿಲ್ಲ. ಜಗದೊಡೆಯನಾದ ಪರಮಾತ್ಮನನ್ನೇ ಹೃದಯಸಂಪುಟದಲ್ಲಿ ಧರಿಸಿದ ಅವರು ಜಗತ್ತನ್ನು ಭಗವದ್ರೂಪವಾಗಿಯೇ ಕಾಣುವರು. ಅಂದಬಳಿಕ ಅವರಿಗೆ ಜಗತ್ತಿನಲ್ಲಿ ವಿಷಮತೆಯು ಎಲ್ಲಿಂದ ಕಂಡುಬರಬೇಕು? ಜಗತ್ತನ್ನೆಲ್ಲ ಆತ್ಮಭಾವನೆಯಿಂದ ನೋಡುವ ಆ ಮಹಾಮಹಿಮರಿಗೆ ಯಾರೇನು ಮಾಡುವರು? ಕ್ರೂರ ಪ್ರಾಣಿಗಳು ಅವರನ್ನು ಆನಂದದಿಂದ ನೋಡುವದಕ್ಕೆ ಇದೇ ಕಾರಣವಲ್ಲದೆ ಬೇರಿನ್ನೇನು ಇರಬೇಕು? ಇಂಥ ಮಹಾನುಭಾವರ ದಿವ್ಯಚರಣಗಳನ್ನು ಭಜಿಸುವವರೇ ಧನ್ಯರು! ಇಂಥ ಮಹಾನುಭಾವರಲ್ಲಿ ಅಚಲಪ್ರೇಮವನ್ನು ತಾಳುವದೇ ಭಗವಂತನ ಪ್ರೀತಿಗೆ ಕಾರಣವಾಗಿರುತ್ತದೆ. ಯಾಕಂದರೆ ಪರಮಾತ್ಮನು ಭಕ್ತಪ್ರಿಯನಿರುವನು. ಭಕ್ತರನ್ನು ಭಜಿಸಿದರೆ ಅವನಿಗೆ ಸಂತೋಷವಾಗುವದು. ಇದೇ ಭಗವದ್ಭಕ್ತಿಯ ನಿಜವಾದ ಮಾರ್ಗವು. ಈ ಮಾರ್ಗವನ್ನು ಹಿಡಿದು ಹೋಗುವವರು ನಿಶ್ಚಯವಾಗಿಯೂ ಭಗವಂತನ ಒಲುಮೆಗೆ ಪಾತ್ರರಾಗುವರು.

# ಶ್ರೀ ಏಕನಾಥಮಹಾರಾಜರು.



ಪ್ರತಿಷ್ಠಾನಾಮಕ ನಗರಿಯಲ್ಲಿ ಸೂರ್ಯನಾರಾಯಣ-ರುಕ್ಮಿಣಿಯೆಂಬ ಸತ್ವಶೀಲದಂಪತಿಗಳ ಉದರದಲ್ಲಿ ಶ್ರೀಏಕನಾಥಮಹಾರಾಜರು ಜನ್ಮತಾಳಿದರು. ಬಾಲ್ಯದಾರಭ್ಯ ಇವರು ಸತ್ವಗುಣಿಗಳೂ ವಿರಕ್ತರೂ, ಭಗವನ್ನಾಮಗಾನ ಪ್ರಿಯರೂ ಆಗಿದ್ದರು. ಅಪರೂಪವಾಗಿ ಹುಟ್ಟಿದ ಇವರ ಮೇಲೆ ತಾಯಿ-ತಂದೆಗಳು ಬಹಳ ಮಮತೆಯನ್ನು ಮಾಡುತ್ತಿದ್ದರು. ಏಕನಾಥರಿಗೆ ಚಿಕ್ಕಂದಿನಲ್ಲಿಯೇ ವಿಷಯಗಳಲ್ಲಿ ವಿರಕ್ತಿಯಿದ್ದಿತು. ಅದೇ ಊರಲ್ಲಿ ಶ್ರೀಜನಾರ್ದನಮಹಾರಾಜರೆಂಬ ದೊಡ್ಡ ಸತ್ಪುರುಷರಿದ್ದರು. ಅವರ ಕೀರ್ತಿಯನ್ನು ಕೇಳಿ ಆ ಚಿಕ್ಕ ವಯಸ್ಸಿನಲ್ಲಿಯೇ ಏಕನಾಥರು ಜನಾರ್ದನಮಹಾರಾಜರಿಗೆ ಶರಣು ಹೋದರು. ತಮ್ಮ ಬಳಿಗೆ ಬಂದು ಅತಿ ವಿನಯದಿಂದ ನಮಸ್ಕರಿಸಿ ನಿಂತಿರುವ ಈ ಬಾಲಕನನ್ನು ನೋಡಿ ಜನಾರ್ದನಮಹಾರಾಜರು ವಿಸ್ಮಯಗೊಂಡರು. ಅವರು ಈ ಬಾಲಕನು ಮನೆಯಲ್ಲಿ ಯಾರ ಮೇಲಾದರೂ ಸಿಟ್ಟಾಗಿ ಬಂದಿರಬಹುದೆಂದು ತಿಳಿದು ಅದರಂತೆ ಆ ಬಾಲಕನನ್ನು ವಿಚಾರಿಸಿದರು. ಗುರುಗಳು ವಿಚಾರಿಸಿದ ಕೂಡಲೆ ಬಾಲ್ಯಾವಸ್ಥೆಯಲ್ಲಿದ್ದ ಏಕನಾಥರು—ಮಹಾರಾಜ, ನಾನು ಮನೆಯಲ್ಲಿ ಯಾರ ಮೇಲೂ ಸಿಟ್ಟಾಗಿ ಬಂದಿರುವದಿಲ್ಲ. ಕೇವಲ ತಮ್ಮ ದರ್ಶನಾರ್ಥವಾಗಿಯೇ ಬಂದಿರುತ್ತೇನೆ. ಪ್ರಪಂಚಮೋಹವು ನನ್ನನ್ನು ಬಾಧಿಸುತ್ತದೆ. ಲೋಭ, ಮಾಯಾ ದಂಭ, ಮೊದಲಾದ ಶತ್ರುಗಳ ಗವಣೆಯಲ್ಲಿ ಸಿಕ್ಕು ಬೆಬ್ಬೆಯಾಗಿದ್ದೇನೆ. ನಾನು ಪತಿತನಾದ್ದರಿಂದ ತಮ್ಮ ಚರಣಸೇವೆಯು ನಿರಂತರ ಲಭಿಸಬೇಕೆಂದು ಶರಣು ಬಂದಿರುತ್ತೇನೆ. ನನಗೆ ಚರಣಗಳಲ್ಲಿ ಆಶ್ರಯ ಕೊಟ್ಟು ನನ್ನಿಂದ ಸೇವೆಯನ್ನು ಕೈಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.'' ಎಂದು ನುಡಿದು ಪುನಃ ಗುರುಗಳ ಚರಣಕ್ಕೆರಗಿದನು. ಜನಾರ್ದನಮಹಾರಾಜರು ಏಕನಾಥರ ಮುಖದಿಂದ ಹೊರಟ ಈ ದಿವ್ಯವಾಣಿಯನ್ನು ಕೇಳಿ ಬಹಳ ಸಂತುಷ್ಟರಾದರು. ಚಿಕ್ಕ ವಯಸ್ಸಿನಲ್ಲಿಯೇ ಈತನು ಹೀಗೆ ಜ್ಞಾನಲಾಲಸೆ ತಾಳಿದ್ದರಿಂದ ಈತನು ಮಹಂತನಾಗುವನು ಎಂದು ತಿಳಿದು ಏಕನಾಥರಿಗೆ ಆಶ್ರಯವನ್ನಿತ್ತರು. ಗುರುಗಳು ಅಭಯಕೊಟ್ಟಿದ್ದನ್ನು ಕಂಡು ಏಕನಾಥರಿಗೆ ಎಷ್ಟು ಆನಂದವಾಯಿತೆಂಬದನ್ನು ವರ್ಣಿಸುವದೇ ಅಶಕ್ಯವು.

ಏಕನಾಥರು ನಿಶ್ಚಲಮನಸ್ಸಿನಿಂದ ಗುರುಸೇವೆಯನ್ನಾರಂಭಿಸಿದರು. ಗುರುಗಳಿಗೆ ಸ್ನಾನಮಾಡಿಸುವದು, ಸಂಧ್ಯೋಪಕರಣಗಳನ್ನು ಸಿದ್ಧಪಡಿಸುವದು, ಅವರ ಬಟ್ಟೆಗಳನ್ನು ಒಗೆಯುವದು ಇವೇ ಮೊದಲಾದವುಗಳನ್ನು ನಿರಾಲಸ್ಯದಿಂದ ಮಾಡತೊಡಗಿದರು. ಗುರುಗಳ ಊಟವಾದ ಬಳಿಕ ಅವರ ಉಚ್ಛಿಷ್ಟವನ್ನು ಭಕ್ಷಿಸಿ ತೃಪ್ತರಾಗುತ್ತಿದ್ದರು. ರಾತ್ರಿಯಲ್ಲಿ ಗುರುಗಳಿಗೆ ನಿದ್ದೆಹತ್ತಿದರೂ ಅವರ ಪಾದಸೇವೆಯನ್ನು ಬಿಡುತ್ತಿರಲಿಲ್ಲ. ಈ ಬಗೆಯ ಏಕನಿಷ್ಠೆಯ ಸೇವೆಯನ್ನು ನೋಡಿ ಜನಾರ್ದನ ಮಹಾರಾಜರು ತುಂಬಾ ಸಂತೋಷಪಟ್ಟರು. ಆತನಲ್ಲಿ ತದೇಕಧ್ಯಾನ ಮಗ್ನತೆಯನ್ನುಂಟು ಮಾಡಬೇಕೆಂದು ಏಕನಾಥರಿಗೆ ಒಂದು ದಿನ ನಿನ್ನ ಲೆಕ್ಕ-ಪತ್ರಗಳನ್ನು ಶೋಧಿಸುವೆನೆಂದು ಹೇಳಿದರು. ಗುರುಗಳ ಬಳಿಗೆ ಹೋದಂದಿನಿಂದ ಏಕನಾಥರು ಗುರುಗಳ ಮನೆಯ ಜಮಾಖರ್ಚನ್ನು ಗುರುಗಳ ಅಪ್ಪಣೆಯಂತೆ ಬರೆಯುತ್ತಿದ್ದರು. ಆ ಜಮಾಖರ್ಚನ್ನೇ ಇಂದು ಶೋಧಮಾಡಿ ನೋಡುತ್ತೇವೆಂದು ಜನಾರ್ದನಮಹಾರಾಜರು ಹೇಳಿದ್ದರು.

ಗುರುಗಳು ಲೆಕ್ಕ-ಪತ್ರವನ್ನು ನೋಡಿದರೆ ಅದರಲ್ಲಿ ತಪ್ಪುತಡಿಗಳು ಹೊರಡಬಾರದೆಂದು ಆ ದಿನ ಲೆಕ್ಕ ಸರಿಮಾಡುವದಕ್ಕಾಗಿ ಏಕನಾಥರಿಗೆ ವೇಳೆಯು ಸಿಗಗಾಯಿತು. ಗುರುಗಳು ಮಲಗಿದ ಬಳಿಕ ರಾತ್ರಿಯಲ್ಲಿ ದೀಪ ಇಟ್ಟುಕೊಂಡು ಏಕನಾಥರು ಲೆಕ್ಕ ತಪಾಸಮಾಡಲಾರಂಭಿಸಿದರು. ಜಮಾಖರ್ಚಿನಲ್ಲಿ ಒಂದು ಪೈ ಕಡಿಮೆಯಾದ್ದರಿಂದ ಎಷ್ಟು ಹುಡುಕಿದರೂ ಅವರಿಗೆ ಲೆಕ್ಕವು ಕೂಡದಾಯಿತು. ಏಕನಾಥರು ಕೇವಲ ತದೇಕಧ್ಯಾನಮಗ್ನರಾಗಿ ಲೆಕ್ಕವನ್ನೆಲ್ಲ ನೋಡತೊಡಗಿದರು. ಏನಾದರೂ ಪೈ ಲೆಕ್ಕವು ಸಿಗದಾಯಿತು. ರಾತ್ರಿಯು ಬಹಳವಾದ್ದರಿಂದ ನಿದ್ದೆಯು ಅವರ ಕಣ್ಣಲ್ಲಿ ಅಂಡಲೆಯಲಾರಂಭಿಸಿತು. ಆದರೂ ಅವರು ಲೆಕ್ಕವನ್ನು ಸರಿಪಡಿಸುವದಕ್ಕಾಗಿ ದೇಹಸುಖವನ್ನು ಮರೆತರು. ಮಧ್ಯರಾತ್ರಿಯ ಸಮಯಕ್ಕೆ ಜನಾರ್ದನ ಮಹಾರಾಜರಿಗೆ ಎಚ್ಚರವಾಯಿತು. ಬಳಿಯಲ್ಲಿ ಶಿಷ್ಯನಿರದ್ದರಿಂದ ಎಲ್ಲಿ ಹೋಗಿರುವನೆಂಬದನ್ನು ನೋಡುವದಕ್ಕೆ ಮೆಲ್ಲಗೆ ಹೊರಟು, ಒಂದು ಕೋಣೆಯಲ್ಲಿ ದೀಪದ ಪ್ರಕಾಶವು ಕಂಡು ಬಂದದ್ದರಿಂದ ಅಲ್ಲಿಗೆ ಹೋದರು. ಎದುರಿಗೆ ಸ್ವಚ್ಛವಾದ ದೀಪವು ಉರಿಯುತ್ತಿದ್ದು, ಜಮಾಖರ್ಚಿನ ವಹಿಯನ್ನು ಇಟ್ಟುಕೊಂಡು ಏಕನಾಥರು ಅದರಲ್ಲಿಯೇ ತಲ್ಲೀನರಾಗಿದ್ದರು. ಗುರುಗಳು ಬಂದದ್ದು ಕೂಡಾ ಅವರಿಗೆ ಗೊತ್ತಾಗಲಿಲ್ಲ. ಜನಾರ್ದನ ಮಹಾರಾಜರು ಮೆಲ್ಲಗೆ ಹೋಗಿ ಏಕನಾಥರ ಹಿಂದೆ ನಿಂತುಕೊಂಡರು. ಗುರು

ಗಳ ದೃಷ್ಟಿಯು ಬಿದ್ದಕೂಡಲೆ ಏಕನಾಥರಿಗೆ ಆ ಪೈ ಲೆಕ್ಕವು ಸಿಕ್ಕಿತು. ಲೆಕ್ಕವು ಕೂಡಿದ್ದರಿಂದ ಅವರಿಗೆ ಬ್ರಹ್ಮಾನಂದವಾಯಿತು. ಆಗ ಏಕನಾಥರು ಆನಂದ ಮುಖದಿಂದ ಲೆಕ್ಕಣಿಕೆಯನ್ನು ಕೆಳಗಿಟ್ಟು, ಆನಂದದಿಂದ ಚುಟುಕೆಯನ್ನು ಬಾರಿಸಿದರು. ಆ ಕೂಡಲೆ ಜನಾರ್ದನ ಮಹಾರಾಜರು—ಏಕನಾಥಾ, ನಿನಗೆ ಇಷ್ಟೊಂದು ಆನಂದವಾಗಲಿಕ್ಕೆ ಕಾರಣವೇನು? ಎಂದು ಕೇಳಿದರು. ಆಗ ಏಕನಾಥರು ಮುಖವನ್ನೆತ್ತಿ ನೋಡಲು, ಗುರುಗಳು ದೃಷ್ಟಿಗೆ ಬಿದ್ದರು. ಆಗ ಅವರು ಚಟ್ಟನೆ ಎದ್ದುನಿಂತು ಗುರುಗಳಿಗೆ ಸಾಷ್ಟಾಂಗವಾಗಿ ವಂದಿಸಿ ನಡೆದ ಸಂಗತಿಯನ್ನೆಲ್ಲ ಹೇಳಿದರು. ಆಗ ಗುರುಗಳು—"ತಮ್ಮಾ, ಒಂದು ಪೈ ಸಲುವಾಗಿ ಇಷ್ಟೊಂದು ತದೇಕಧ್ಯಾನಮಗ್ನನಾಗುವದಕ್ಕಿಂತ ಪರಮಾತ್ಮನ ಚರಣಗಳ ಧ್ಯಾನಮಗ್ನನಾಗಿದ್ದರೆ ಪರಮಾತ್ಮನನ್ನು ಪಡೆಯುತ್ತಿದ್ದೆ!" ಎಂದು ನುಡಿದರು. ಗುರುಮುಖದಿಂದ ಹೊರಟ ಈ ವಾಣಿಯೇ ತಮಗೆ ಉಪದೇಶವೆಂದು ಅವರು ತಿಳಿದರು.

ಆಗ ಅವರು ಗುರುಚರಣಗಳಮೇಲೆ ಮಸ್ತಕವನ್ನಿಟ್ಟು, ನುಡಿದರೇನಂದರೆ- "ನರದೇಹವೇ ನಡಿಯುವ ವರುಷದ ಅಸಲುಹಣವು; ಹೋದವರುಷದ ಸಿಲ್ಕುಹಣವೆಂದರೆ ಪೂರ್ವಸಂಸ್ಕಾರವು. ನಾನು ತಮ್ಮ ಚರಣಗಳಲ್ಲಿ ವಿಶ್ವಾಸವಿಟ್ಟು ಯಾವ ಸ್ವಧರ್ಮಾಚರಣೆಗಳನ್ನು ಆಚರಿಸಿರುವೆನೋ ಅದು ನನಗೆ ಗೊತ್ತುಂಟು. ಆ ಸ್ವಧರ್ಮಾಚರಣೆಯಂದರೇ ಖರ್ಚು ಎಂದು ತಿಳಿದಿರುವೆನು. ಫಲದ ಇಚ್ಛೆಯನ್ನು ಮಾಡದೆ ನಾನು ಎಲ್ಲ ಕರ್ಮಗಳನ್ನು ಗುರುಚರಣಕ್ಕೆ ಅರ್ಪಿಸಿದ್ದೇನೆ. ಇದನ್ನು ಸದ್ಗುರುವು ಚನ್ನಾಗಿ ಬಲ್ಲನು. ನಾನು ಮಾಡಿದ ಈ ಸತ್ಕರ್ಮವು ಬ್ರಹ್ಮಾರ್ಪಣವಾಯಿತೋ ಹ್ಯಾಗೆಂಬದು ನನಗೆ ತಿಳಿಯಲು ಮಾರ್ಗವಿಲ್ಲ. ಗುರುಚರಣಗಳಲ್ಲಿ ನಿಷ್ಠೆಯನ್ನಿಟ್ಟು ಸತ್ಕರ್ಮಾಚರಣೆ ಮಾಡುವದಿಷ್ಟೇ ನನ್ನ ಕೆಲಸವಿರುತ್ತದೆ. ನಾನು ಮಾಡಿದ ಈ ಕೆಲಸವು ಸದ್ಗುರುವಿಗೆ ಮಾನ್ಯವಿರುತ್ತದೆ. ನನ್ನ ಕರ್ತವ್ಯರೂಪೀ ವಹಿಯ ಮೇಲೆ ಸದ್ಗುರುವಿನ ಮೋಹರುಬಿದ್ದದರಿಂದ ಅನ್ಯತ್ರದಲ್ಲಿ ಮನಸ್ಸು ಹಾಕಲು ನನಗೆ ಕಾರಣವಿಲ್ಲ. ನರದೇಹರೂಪಿ ಲೆಕ್ಕವನ್ನು ಶೋಧಿಸಿ ನೋಡಿದರೆ ಅಜ್ಞಾನರೂಪವಾದ ಬಾಕಿಯು ದೊರೆಯುತ್ತದೆ. ತಾವು ತ್ರೈಲೋಕ್ಯಗಳ ಒಡೆಯರಿರುತ್ತೀರಿ. ತಮ್ಮಿಂದಲೇ ಸರ್ವ ವ್ಯಾಪಾರಗಳ ಉತ್ಪತ್ತಿಯು; ತಮ್ಮ ಮುಖದಿಂದ ಹೊರಟ ಕೃಷ್ಣನಾಮವು ನನಗೆ ಅತ್ಯಂತ ಪ್ರಿಯವಾಗಿರುತ್ತದೆ. ನಾನು ಪೂರ್ವಪುಣ್ಯದಿಂದ ರಾಮನಾಮದ ವ್ಯಾಪಾರಕ್ಕಾಗಿ ಪ್ರಾರಂಭಿಸುತ್ತೇನೆ.

ಈ ಪ್ರಕಾರ ಮಾತನಾಡಿ ಏಕನಾಥರು ಗುರುಚರಣಗಳ ಮೇಲೆ ಮಸ್ತಕವನ್ನಿಟ್ಟರು. ಆತನ ಅಧಿಕಾರವನ್ನು ತಿಳಿದು ಜನಾರ್ದನ ಮಹಾರಾಜರು ತುಂಬಾ ಸಂತೋಷಪಟ್ಟು ಅಪ್ಪಿಕೊಂಡರು. ಮತ್ತು ರಾಮಕೃಷ್ಣ ಮಂತ್ರವನ್ನು ಉಪದೇಶಿಸಿದರು. ಹೀಗೆ ಏಕನಾಥರು ಗುರುಕೃಪೆಗೆ ಪಾತ್ರರಾಗಿ ನಿಶ್ಚಯದಿಂದ ಸೇವೆಯನ್ನು ನಡಿಸಲು ಸಂತುಷ್ಟರಾದ ಜನಾರ್ದನರು ಅವರಿಗೆ ಶ್ರೀ ದತ್ತಾತ್ರಯನ ದರ್ಶನ ಮಾಡಿಸಬೇಕೆಂದು ಇಚ್ಛಿಸಿ ಒಂದು ದಿನ ಏಕನಾಥರನ್ನು ಕುರಿತು ನುಡಿದರೇನಂದರೆ—ಶಿಷ್ಯಶ್ರೇಷ್ಠನೇ ನಿನಗೆ ದತ್ತಾತ್ರಯರ ದರ್ಶನ ಮಾಡಿಸುತ್ತೇನೆ. ಅರಣ್ಯಕ್ಕೆ ಹೋಗುವಾ ನಡೆ, ನೀನು ದತ್ತಾತ್ರಯರ ರೂಪ ವನ್ನು ನೋಡಿ ಅಂಜಬೇಡ. ನಾನು ಯಾರೊಡನೆ ಮಾತಾಡುತ್ತ ಕೂಡ್ರು ವೆನೋ ಅವರೇ ದತ್ತಾತ್ರಯರೆಂದು ತಿಳಿದು ಅವರು ಕೊಟ್ಟದ್ದನ್ನು ಪ್ರಸಾದ ವೆಂದು ಭಕ್ಷಿಸು.

ಈ ಮೇರೆಗೆ ಶಿಷ್ಯನಿಗೆ ನುಡಿದು ಅರಣ್ಯಕ್ಕೆ ಹೋದರು. ಗಹನಾರಣ್ಯ ದಲ್ಲಿ ಅವರು ನಡೆದಿರಲು ಶ್ರೀ ದತ್ತಾತ್ರಯರು ಯವನ ಸರದಾರನ ದೇಹದಿಂದ ಪ್ರಕಟರಾದರು. ಬೆನ್ನಿಗೆ ಭಾಲೆ, ಟೊಂಕದಲ್ಲಿ ಖಡ್ಗವನ್ನು ಧರಿಸಿದ ಆ ಸರದಾ ರನು ದೊಡ್ಡದೊಂದು ಕುದುರೆಯ ಮೇಲೆ ಆರೂಢನಾಗಿದ್ದನು. ಆತನು ಈ ಗುರು-ಶಿಷ್ಯರನ್ನು ನೋಡಿ ಅಚ್ಚ ಉಡದು ಭಾಷೆಯನ್ನಾಡುತ್ತ ಕುದುರೆ ಯಿಂದ ಕೆಳಗಿದನು. ಜನಾರ್ದನಮಹಾರಾಜರು ಅವನೊಡನೆ ಮುಸಲ್ಮಾನೀ ಭಾಷೆಯಿಂದಲೇ ಮಾತಾಡುತ್ತ ಒಂದು ಗಿಡದಡಿಯಲ್ಲಿ ಕುಳಿತುಕೊಂಡರು. ಕೆಲಹೊತ್ತಿನ ಮೇಲೆ ಆ ಸರದಾರನು ಜನಾರ್ದನಮಹಾರಾಜರೊಡನೆ ಭೋಜನ ವನ್ನಾರಂಭಿಸಿ ಸಮೀಪದಲ್ಲಿಯೇ ನಿಂತಿರುವ ಏಕನಾಥರನ್ನು ಕರೆಯಲು ಸೂಚಿ ಸಿದನು. ಗುರುಗಳು ಮ್ಲೇಂಛನ ಸಂಗಡ ಉಣ್ಣುವದನ್ನು ನೋಡಿಯೇ ಏಕ ನಾಥರಿಗೆ ಅಸಹ್ಯವಾಗಿತ್ತು. ಅದರಲ್ಲಿ ತನ್ನನ್ನೂ ಊಟಕ್ಕೆ ಕರೆಯುವರೆಂಬದು ಕಂಡುಬರಲು ಆ ಕೂಡಲೆ ಅಲ್ಲಿಂದ ಪಲಾಯನ ಹೇಳಿಸಿದನು. ಏಕನಾಥರು ಓಡಿ ಹೋದಕೂಡಲೆ ದತ್ತಾತ್ರಯರು ಅದೃಶ್ಯರಾದರು. ಒಳಿಕ ಜನಾರ್ದನ ಮಹಾರಾಜರು ಶಿಷ್ಯನನ್ನು ಹುಡುಕಿ—ಏಕನಾಥಾ, ಹೀಗೇಕೆ ಓಡಿಹೋದೆ? ನಿನಗೆ ಮೊದಲೇ ಹೇಳಿದ್ದಿಲ್ಲವೇ? ಆ ಯವನರೂಪದಿಂದ ಬಂದವನು ಯವನನಲ್ಲ; ಪ್ರತ್ಯಕ್ಷ ದತ್ತಾತ್ರಯನು; ಇನ್ನೆಂದೂ ಹೀಗೆ ಮೋಸಹೋಗಬೇಡ, ಎಂದು ನುಡಿದು ಮನೆಗೆ ಬಂದರು. ಈ ಮಾತಿಗೆ ಕೆಲದಿನಗಳು ಕ್ರಮಿಸಲು ಮುಂದೆ

ಒಂದು ದಿನ ಮತ್ತೆ ಏಕನಾಥರೊಡನೆ ಅರಣ್ಯಕ್ಕೆ ಹೋದರು. ಈ ಸಾರೆ ದತ್ತಾತ್ರಯರು ಮಲಂಗನ ವೇಷದಿಂದ ಪ್ರಾಪ್ತರಾದರು. ಕಾಮಧೇನುವನ್ನು ನಾಯಿಯನ್ನಾಗಮಾಡಿಕೊಂಡಿದ್ದರು. ಜನಾರ್ದನಮಹಾರಾಜರು ದತ್ತಾತ್ರಯರನ್ನು ನೋಡಿದ ಕೂಡಲೆ ಅವರೊಡನೆ ಮಾತಾಡುತ್ತ ಕುಳಿತುಕೊಂಡರು. ಏಕನಾಥರು ದೂರದಲ್ಲಿ ನಿಂತುಕೊಂಡರು. ಆಗ ದತ್ತಾತ್ರಯರು ನಾಯಿಯನ್ನು ಹಿಂಡಿಕೊಂಡು ಅದರಲ್ಲಿ ಒಣರೊಟ್ಟಿಗಳನ್ನು ಮುರಿದುಹಾಕಿ ಜನಾರ್ದನ ಮಹಾರಾಜರೊಡನೆ ಊಟ ಮಾಡಲಾರಂಭಿಸಿದರು. ಈ ಹುಚ್ಚಾಟವನ್ನು ನೋಡಿ ಏಕನಾಥರು ಅಸಹ್ಯಪಟ್ಟರು. ಆಗ ದತ್ತಾತ್ರಯರು ಏಕನಾಥರನ್ನು ಕರೆಯಲು ಸೂಚಿಸಿದರು; ಆ ಸನ್ನೆಯನ್ನು ತಿಳಿದು ಏಕನಾಥರು ಓಡಿ ಹೋಗುವ ಯೋಚನೆಯಲ್ಲಿದ್ದರು. ಅಷ್ಟರಲ್ಲಿ ಜನಾರ್ದನಮಹಾರಾಜರು ಓಡಿಬಂದು ಅವರನ್ನು ಹಿಡಿದು ದತ್ತಾತ್ರಯರ ಚರಣಗಳ ಮೇಲೆ ಕೆಡವಿದರು. ಏಕನಾಥರು ಅಂಜುತ್ತಂಜುತ್ತ ನಮಸ್ಕರಿಸಿ ದೂರ ಸರಿದು ನಿಂತುಕೊಂಡರು. ಆಗ ಶ್ರೀ ದತ್ತಾತ್ರಯರು ಏಕನಾಥರಿಗೆ ಪ್ರಸಾದವನ್ನು ಕೊಟ್ಟರು. ಆದರೆ ಏಕನಾಥರು ಆ ಪ್ರಸಾದವನ್ನು ಭಕ್ಷಿಸದೆ ಹಾಗೇ ಕಟ್ಟಿಟ್ಟುಕೊಂಡು ದತ್ತಾತ್ರಯರು ಅದೃಶ್ಯವಾದ ಕೂಡಲೆ ಬೇರೊಂದು ಕಡೆಗೆ ಬೀಸಾಟಬಿಟ್ಟರು. ದತ್ತಾತ್ರಯರನ್ನು ಕಳಿಸಿ ಜನಾರ್ದನರು ಏಕನಾಥರ ಬಳಿಗೆ ಬಂದು—ತಮ್ಮಾ, ಪ್ರಸಾದವನ್ನು ಏನು ಮಾಡಿದೆ ಎಂದು ಕೇಳಿದರು. ಆಗ ಅವರು—ಮಹಾರಾಜ, ತಮ್ಮ ಪ್ರಸಾದದ ಹೊರತು ಅನ್ಯರ ಪ್ರಸಾದವನ್ನು ಸೇವಿಸಲಾರೆನು. ಆದ್ದರಿಂದ ಚಲ್ಲಿಕೊಟ್ಟಿರುತ್ತೇನೆ. ನನಗೆ ಅನ್ಯ ಪ್ರಸಾದದ ಉಪಯೋಗವೇನು? ಎಂದು ನುಡಿದರು. ಏಕನಾಥರ ಈ ಏಕನಿಷ್ಠೆಯನ್ನೂ ಅನನ್ಯ ಭಕ್ತಿಯನ್ನೂ ತಿಳಿದು ಜನಾರ್ದನ ಮಹಾರಾಜರು ತುಂಬಾ ಸಂತೋಷಬಟ್ಟು ಅವರೊಡನೆ ಮನೆಗೆ ಹೋದರು.

ಬಳಿಕ ಜನಾರ್ದನಮಹಾರಾಜರು ಏನಾಥರ ಮೇಲೆ ಪೂರ್ಣ ಅನುಗ್ರಹವನ್ನು ಮಾಡಿ ನುಡಿದರೇನಂದರೆ—ತಮ್ಮಾ, ಇನ್ನು ಮುಂದೆ ನೀನು ಮನೆಗೆ ಹೋಗಿ ತಾಯಿ-ತಂದೆಗಳನ್ನು ಸಂರಕ್ಷಿಸುತ್ತ ಗೃಹಸ್ಥಾಶ್ರಮವನ್ನು ಪಾಲನೆ ಮಾಡು. ನೀನು ಪೂರ್ಣಪರಬ್ರಹ್ಮನಾಗಿದ್ದರೂ ಲೌಕಿಕಾರ್ಥವಾಗಿ ಸತ್ಕರ್ಮಗಳನ್ನು ಬಿಡಬೇಡ. ಭಗವಂತನ ಗುಣಗಳನ್ನು ವರ್ಣಿಸು; ಹ್ಯಾಗ್ಗು ಭಾಗವತ ಧರ್ಮವನ್ನು ಸುಲಭವಾಗಿ ತಿಳಿಯುವಂತೆ ವರ್ಣಿಸಿ ಅಜ್ಞಾನಿಗಳನ್ನು ಉದ್ಧರಿಸು. ನನ್ನ ಈ ಆಜ್ಞೆಯೇ ಪ್ರಮಾಣವೆಂದು ನಡೆ.

ಈ ಮೇರೆಗೆ ಗುರುಗಳು ಆಜ್ಞೆ ಮಾಡಲು ಏಕನಾಥರು ಗುರುಗೃಹವನ್ನು ತ್ಯಜಿಸಿ ಪಿತೃಗೃಹಕ್ಕೆ ಬಂದರು. ಮುಪ್ಪಿನ ಕಾಲದಲ್ಲಿ ಮಗನು ಮನೆಗೆ ಬಂದದ್ದರಿಂದ ಆ ತಾಯಿ-ತಂದೆಗಳಿಗಾದ ಆನಂದವನ್ನು ವರ್ಣಿಸಲೇ ತೀರದು. ಏಕನಾಥರು ಲಗ್ನವನ್ನು ಮಾಡಿಕೊಂಡು ಗೃಹಸ್ಥಾಶ್ರಮಿಗಳಾದರು. ಅವರು ಸತ್ಕರ್ಮಗಳನ್ನಾಚರಿಸುತ್ತ ತಂದೆ-ತಾಯಿಗಳನ್ನು ಜೋಪಾನ ಮಾಡ ತೊಡಗಿದರು.

ಗೃಹಸ್ಥಾಶ್ರಮದಲ್ಲಿದ್ದ ಏಕನಾಥರ ಕೀರ್ತಿಯು ನಾಲ್ಕೂಕಡೆಗೆ ಹಬ್ಬಿತು; ಅವರ ಈ ಕೀರ್ತಿಯನ್ನು ಕೇಳಿ ದುರ್ಜನರು ಅಪಹಾಸ್ಯ ಮಾಡಲಾರಂಭಿಸಿದರು. ಅದರಲ್ಲಿ ಏಕನಾಥಮಹಾರಾಜರ ಪ್ರಾಕೃತಗ್ರಂಥಗಳನ್ನು ನೋಡಿಯಂತೂ ಒಬ್ಬ ನಿಂದಕನ ತಲೆ ತಿರುಗಿ ಹೋಯಿತು. ಅವನು ಅವರ ಗ್ರಂಥಗಳನ್ನೂ ಕೂಡಾ ನಿಂದಿಸಲಾರಂಭಿಸಿದನು. ಒಂದು ದಿನ ಏಕನಾಥರು ಭಾವಾರ್ಥರಾಮಾಯಣವನ್ನು ಬರೆಯುತ್ತ ಕುಳಿತಾಗ ಹನುಮಂತನು ರಾಮಕಾರ್ಯಕ್ಕಾಗಿ ಸಮುದ್ರವನ್ನು ಉಡ್ಡಾಣ ಮಾಡಿದ ಪ್ರಸಂಗದ ವರ್ಣನೆಯು ಬಂದಿತು. ಈ ಪ್ರಸಂಗವನ್ನು ವರ್ಣಿಸಬೇಕಾದರೆ ಏಕನಾಥರು ತದೇಕಧ್ಯಾನಮಗ್ನರಾಗಿದ್ದರು. ಅವರು ಮಾರುತಿಯು ಉಡ್ಡಾಣ ಮಾಡಿದಂತೆ ನಿಜವಾಗಿಯೂ ಉಡ್ಡಾಣಮಾಡಿದರು. ಹೀಗೆ ಉಡ್ಡಾಣ ಮಾಡಿದ ಏಕನಾಥರು ಆ ನಿಂದಕನ ಮನೆಯ ಒಳಂಗಣದಲ್ಲಿ ಬಿದ್ದರು. ಮಧ್ಯರಾತ್ರಿಯ ಸಮಯವು; ಅಂಗಳದಲ್ಲಿ ದೊಪ್ಪೆಂದು ಸಪ್ಪಳವಾಗಲು ನಿಂದಕನು ಎಚ್ಚತ್ತು ಬಾಗಿಲತೆರೆದು ನೋಡಿದನು. ಏಕನಾಥರು ಸ್ಮೃತಿದಪ್ಪಿ ಬಿದ್ದುಕೊಂಡುದು ಅವನ ದೃಷ್ಟಿಗೆ ಬಿದ್ದಿತು. ಅವನು ದೀಪದ ಸಹಾಯದಿಂದ ಶೋಧಿಸಿ ನೋಡಲು ಏಕನಾಥರ ಕೈಯೊಳಗಿನ ಓಲೆಯಲ್ಲಿ ಮಾರುತಿಯು ಉಡ್ಡಾಣ ಮಾಡಿದ ಅರ್ಧಮರ್ಧ ಓವಿಯು ಬರೆಯಲ್ಪಟ್ಟಿತ್ತು, ಅದನ್ನು ಕಂಡು ನಡೆದ ಸಂಗತಿಯು ಹೊಳೆದು ಹೋಯಿತು. ಆಗ ಆತನಿಗೆ ಏಕನಾಥರ ವಿಷಯದಲ್ಲಿಯೂ ಅವರ ಗ್ರಂಥದ ವಿಷಯದಲ್ಲಿಯೂ ತುಂಬಾ ಆದರವುಂಟಾಯಿತು. ಬಳಿಕ ಅವನು ಏಕನಾಥರನ್ನು ಬೆನ್ನಮೇಲೆ ಹೊತ್ತುಕೊಂಡು ಅವರ ಮನೆಗೆ ಒಯ್ದನು. ಮನೆಗೆ ಹೋದ ಬಳಿಕ ಏಕನಾಥರಿಗೆ ಅರಿವು ಹುಟ್ಟಿತು. ಮತ್ತೆ ಬರೆಯುವದಕ್ಕಾಗಿ ಅವರು ಕುಳಿತುಕೊಂಡರು.

ಈ ಚಮತ್ಕಾರವನ್ನು ನೋಡಿ ಭಯಭಕ್ತಿಯನ್ನು ತಾಳಿದ ಆ ನಿಂದಕನು ಏಕನಾಥರಿಂದ ಉಪದೇಶ ಹೊಂದಿ ಅವರ ಶಿಷ್ಯನಾಗಬೇಕೆಂದು ಇಚ್ಛಿಸಿದನು. ಅದರಂತೆ ಅವನು ಏಕನಾಥರ ಮುಂದೆ ಅಡಿತೋರಿಸಿದನು. ಅಭಾವಿಕನನು

ಶಿಷ್ಯನನ್ನಾಗಿ ಮಾಡಿಕೊಳ್ಳಬಾರದು. ಕಪಟಿಯೂ, ಅನೀತಿಯುಳ್ಳವನೂ ಶಿಷ್ಯನಾಗಲಿಕ್ಕೆ ಅಯೋಗ್ಯನು. ಎಂದು ತಿಳಿದು ಏಕನಾಥರು ಆತನನ್ನು ಶಿಷ್ಯನನ್ನಾಗಿ ಪರಿಗ್ರಹಿಸಲಿಕ್ಕೆ ಒಪ್ಪಿಕೊಳ್ಳಪಾದರು. ಕೊನೆಗೆ ಆತನು ಬಹಳ ಆಗ್ರಹಮಾಡಿದ್ದರಿಂದ ನಾಳೆ ಮಧ್ಯಾಹ್ನದಲ್ಲಿ ಸ್ನಾನ ಮಾಡಿ ಬರ್ರಿ ನಿಮಗೆ ಉಪದೇಶ ಕೊಡುತ್ತೇನೆ ಎಂದು ಹೇಳಿದರು. ಆ ನಿಂದಕನು ಸಮಾಧಾನ ತಾಳಿ ಮನೆಗೆ ಹೋದನು. ಮರುದಿನ ಏಕನಾಥಮಹಾರಾಜರು ಮನೆಯ ಜನರನ್ನೆಲ್ಲ ಕರೆದು—ಈ ದಿನ ಮಧ್ಯಾಹ್ನದಲ್ಲಿ ದೇವರ ಕಟ್ಟೆಯ ಮೇಲೆ ಅಗ್ರೋದಕವನ್ನಿಡಬೇಡಿರಿ. ಹಾಗು ನಾನು ಎಷ್ಟು ಕೂಗಾಡಿದರೂ ಯಾರೂ ನನ್ನ ಸನಿಯಕ್ಕೆ ಬರಬೇಡಿರಿ, ಎಂದು ಆಜ್ಞೆ ಮಾಡಿದರು.

ಮರುದಿನ ಹೊತ್ತಿಗೆ ಸರಿಯಾಗಿ ಆ ನಿಂದಕನು ಸ್ನಾನಮಾಡಿ ಏಕನಾಥರ ಬಳಿಗೆ ಬಂದನು. ಆತನನ್ನು ಪರೀಕ್ಷಿಸಬೇಕೆಂದೇ ಮನೆಯ ಜನರಿಗೆ ಹಾಗೆ ಅಪ್ಪಣೆ ಮಾಡಿದ ಮಹಾರಾಜರು ಉಪದೇಶ ಗ್ರಹಣಮಾಡಲಿಕ್ಕೆ ಆ ಗೃಹಸ್ಥನು ಬಂದ ಕೂಡಲೆ ದೇವರ ಕಟ್ಟೆಯಮೇಲೆ ಅಗ್ರೋದಕವನ್ನಿಟ್ಟಿರುವದಿಲ್ಲ. ಯಾರಾದರೂ ತಂದುಕೊಡಿರಿ, ಎಂದು ಒದರಾಡಲಾರಂಭಿಸಿದರು. ಇವರು ಎಷ್ಟು ಒದರಾಡಿದರೂ ಮನೆಯವರು ಯಾರೂ ಅಗ್ರೋದಕವನ್ನು ತಂದು ಕೊಡಲಿಲ್ಲ. ಶಿಷ್ಯನಾಗ ಬಯಸುವ ಆ ಗೃಹಸ್ಥನೂ ಕೂತ ಸ್ಥಳಬಿಟ್ಟು ಕದಲಲಿಲ್ಲ. ಹಾಗು ನೀರನ್ನು ತಂದು ಕೊಡಲಿಲ್ಲ. ಬಹಳ ಹೊತ್ತಿನವರೆಗೆ ದಾರೀ ನೋಡಿ ಮಹಾರಾಜರು ತಾವೇ ಎದ್ದು ಹೋಗಿ ಅಗ್ರೋದಕದ ತಂಬಿಗೆಯನ್ನು ತಂದರು. ಮಹಾರಾಜರ ಪೂಜಾಪುನಸ್ಕಾರಗಳು ಮುಗಿದ ಬಳಿಕ ಆ ಗೃಹಸ್ಥನು ಉಪದೇಶ ಕೊಡಿರೆಂದು ಮಹಾರಾಜರನ್ನು ಕೇಳಿಕೊಂಡನು. ಒಂದು ತಂಬಿಗೆ ಅಗ್ರೋದಕವನ್ನು ತಂದು ಕೊಡದ ಈ ಗೃಹಸ್ಥನು ಶಿಷ್ಯನಾಗಿ ಸುರಕೊಳ್ಳುವದೇನು? ಎಂದು ತಿಳಿದು, ಉಪದೇಶಕೊಡುವ ಮುಹೂರ್ತವು ಮೀರಿಹೋಯಿತು. ಈ ಮೊದಲೇ ನೀವು ಎಚ್ಚರಪಡಬೇಕಾಗಿತ್ತು, ಎಂದು ಹೇಳಿದರು. ಆ ಗೃಹಸ್ಥನು ಬಂದ ಹಾದಿಗೆ ಸುಂಕವಿಲ್ಲವೆಂಬಂತೆ ತಿರುಗಿ ಹೋದನು.

ಮುಂದೆ ಕಾಲಕ್ರಮದಿಂದ ಏಕನಾಥಮಹಾರಾಜರ ತಾಯಿ ತಂದೆಗಳು ದೇಹಪಿಟ್ಟರು. ಮಹಾರಾಜರು ಅವರ ಔರ್ಧ್ವದೇಹಿಕ ಕರ್ಮಗಳನ್ನು ಮಾಡಿ ಯಥಾಯೋಗ್ಯವಾಗಿ ಗೃಹಸ್ಥಧರ್ಮವನ್ನು ಪರಿಪಾಲನೆ ಮಾಡಲಾರಂಭಿಸಿದರು. ಶ್ರೀ ಕೃಷ್ಣ ಪರಮಾತ್ಮನು ಶ್ರೀಖಿನವನ ವೇಷದಿಂದ ಮಹಾರಾಜರ ಬಳಿಯಲ್ಲಿ

ಸೇವೆಗೆ ನಿಂತನು. ಆತನಿಗೆ ಜನರು ಶ್ರೀಖಂಡ್ಯಾ ಎಂದು ಕರೆಯು ತೊಡಗಿದರು. ಮಹಾರಾಜರು ಕೀರ್ತನಗಳನ್ನು ಮಾಡುತ್ತ ಜನರನ್ನು ಭಕ್ತಿಮಾರ್ಗಕ್ಕೆ ಹಚ್ಚತೊಡಗಿದರು. ಒಂದು ದಿನ ಶ್ರೀ ಜ್ಞಾನದೇವರು ಮಹಾರಾಜರ ಸ್ವಪ್ನದಲ್ಲಿ ಬಂದು—ನನ್ನ ಸಮಾಧಿಯಲ್ಲಿ ಗಿಡದ ಬೇರುಗಳು ಬಂದು ನನಗೆ ತೊಂದರೆ ಕೊಡುತ್ತವೆ. ನೀನು ಬಂದು ಆ ಬೇರುಗಳ ತೊಂದರೆಯನ್ನು ನಿವಾರಣಮಾಡು ಎಂದು ಹೇಳಿದರು. ಆ ದೃಷ್ಟಾಂತದಂತೆ ಮಹಾರಾಜರು ಆಳಂದಿಗೆ ಹೋಗಿ ಶ್ರೀ ಜ್ಞಾನದೇವರ ಸಮಾಧಿಯನ್ನು ತೆಗೆದು ನೋಡಿದರು. ಒಳಗೆ ಜ್ಞಾನದೇವರ ಭವ್ಯಮೂರ್ತಿಯು ಪದ್ಮಾಸನಸ್ಥವಾಗಿ ಕುಳಿತುಕೊಂಡಿತ್ತು. ಅವರ ತೊಡೆಯ ಬುಡದಲ್ಲಿ ವೃಕ್ಷದ ಸೂಕ್ಷ್ಮ ಬೇರುಗಳು ಬಂದಿದ್ದವು. ಆಗ ಮಹಾರಾಜರು ಆ ಬೇರುಗಳನ್ನು ಕಿತ್ತೊಗೆದು ಪುನಃ ಆ ಸಮಾಧಿಯ ಮುಖವನ್ನು ಕಲ್ಲುಗಚ್ಚಿನಿಂದ ಬಂದ ಮಾಡಿದರು. ಒಳಿಕ ಆ ದಿನ ಸಮಾಧಿಯ ಮುಂದೆ ಮಹಾರಾಜರು ಕೀರ್ತನ ಮಾಡಿದರು. ಅವರ ರಸಭರಿತವಾದ ಕೀರ್ತನವನ್ನು ಕೇಳಿ ಆಳಂದಿಯ ಭಕ್ತರು ಧನ್ಯತೆಯನ್ನು ಪ್ರಕಟಿಸಿದರು.

ಈ ಮೇರೆಗೆ ಮಹಾರಾಜರು ಲೋಕೋದ್ಧಾರದ ಕಾರ್ಯವನ್ನು ನಡಿಸಿರಲು, ಅವರ ಪಿತೃಶ್ರಾದ್ಧವು ಬಂದಿತು. ಆ ದಿನ ಮಹಾರಾಜರು ಮನೆಯಲ್ಲಿ ಸಮೀಚೀನವಾದ ಅಡಿಗೆಯನ್ನು ಮಾಡಿಸಿದರು. ಆ ಅಡಿಗೆಯ ಸುವಾಸನೆಯು ಓಣಿಯ ತುಂಬೆಲ್ಲ ಹರಡಿತು; ಆ ಸಮಯದಲ್ಲಿ ಓಣಿಯೊಳಗೆ ಕಸಗೂಡಿಸುವ ಒಬ್ಬ ಹೊಲತಿಯು ತನ್ನ ಗಂಡನನ್ನು ಕುರಿತು—ಇಂಥ ಉತ್ತಮ ಆಹಾರವು ನಮ್ಮ ಜನ್ಮದಲ್ಲಿ ಒಮ್ಮೆಯಾದರೂ ದೊರೆಯಬಾರದೇ? ಅಹಾ! ಎಷ್ಟು ಸೊಗಸಾದ ವಾಸನೆಯು ಬರುವದಲ್ಲ? ಎಂದು ನುಡಿದಳು. ಹೆಂಡತಿಯ ಈ ಮಾತನ್ನು ಕೇಳಿ ಗಂಡನು ನುಡಿದನೇನಂದರೆ—ಹುಚ್ಚೀ ಇದೆಲ್ಲಿ ನಿನ್ನ ಅಪೇಕ್ಷೆಯು; ನಮಗೆಂದಾದರೂ ಇಂಥ ಆಹಾರವು ದೊರೆಯಬಹುದೇ? ಈ ದಿನ ಮಹಾರಾಜರ ಮನೆಯಲ್ಲಿ ಶ್ರಾದ್ಧವುಂಟು; ಆದ್ದರಿಂದ ಎಂಜಲ ಎಲೆಗಳು ಕೂಡಾ ನಮಗೆ ದೊರೆಯುವ ಸಂಭವವಿಲ್ಲ ಸುಮ್ಮನೆ ಏನಾದರೊಂದು ಬಯಸಬೇಡ.

ಈ ಮೇರೆಗೆ ಆ ಅಂತ್ಯಜ ದಂಪತಿಗಳು ಮಾತಾಡುವದನ್ನು ಏಕನಾಥ ಮಹಾರಾಜರು ಉಪ್ಪರಿಗೆಯ ಮೇಲೆ ಕುಳಿತು ಕೇಳಿದರು. ಕೂಡಲೆ ಅವರು ಕೆಳಗಿಳಿದು ಅಡಿಗೆಯ ಮನೆಗೆ ಹೋಗಿ ಹೆಂಡತಿಗೆ ಎಲ್ಲ ಸಂಗತಿಗಳನ್ನು ಹೇಳಿ

ಈಗ ಮಾಡಿದ ಅಡಿಗೆಯನ್ನು ಅಂತ್ಯಜರಿಗೆ ಹಾಕುವ ಇಚ್ಛೆಯನ್ನು ಪ್ರಕಟಿಸಿದರು. ಆ ಸಾಧ್ವಿಯಾದರೂ ಗಂಡನ ಈ ಇಚ್ಛೆಗೆ ಅನುಕೂಲಳಾಗಿ ನಡೆದಳು. ಕೂಡಲೆ ಮಹಾರಾಜರು ಬೀದಿಯಲ್ಲಿ ಬಂದು ಅಂತ್ಯಜನನ್ನು ಕರೆದು ನಿಮ್ಮ ಕೇರಿಯ ಜನರನ್ನೆಲ್ಲ ಕರೆದುಕೊಂಡು ಬಾ ಎಂದು ಆಜ್ಞಾಪಿಸಿದರು. ಆ ಪ್ರಕಾರ ಅವನು ಮಾಡಲು ಅವರನ್ನೆಲ್ಲ ಬೀದಿಯಲ್ಲಿ ಕುಳ್ಳಿರಿಸಿ ಮಾಡಿದ ಅಡಿಗೆಯನ್ನೆಲ್ಲ ಅವರಿಗೆ ಉಣಬಡಿಸಿದರು. ಆ ಜನರು ಜನ್ಮಾರಭ್ಯ ಇಂಥ ಪಕ್ವಾನ್ನವನ್ನು ಕಂಡಿರದ್ದರಿಂದ ಅವರು ಮಹಾರಾಜರ ಔದಾರ್ಯವನ್ನು ಹೊಗಳುತ್ತ ಆಕಂಠ ಪರ್ಯಂತವಾಗಿ ಊಟ ಮಾಡಿದರು. ಅಂತ್ಯಜರೆಲ್ಲರೂ ಉಂಡು ಉಳಿದ ಅಡಿಗೆಯನ್ನೆಲ್ಲ ಅವರಿಗೇ ಹಾಕಿಸಿ ಬಳಿಕ ಮಹಾರಾಜರು ಓಣಿಯನ್ನೆಲ್ಲ ಚನ್ನಾಗಿ ಸಮ್ಮಾರ್ಜನೆ ಮಾಡಿಸಿ ಪುನಃ ಎಲ್ಲ ಪಾತ್ರೆಗಳನ್ನು ತಿಕ್ಕಿಸಿ ಅಡಿಗೆಮನೆಯ ಉಡುಸಾರಣೆಯನ್ನು ಮಾಡಿಸಿ ಹೊಸ ಸಾಹಿತ್ಯಗಳನ್ನು ತರಿಸಿ ಪುನಃ ಶ್ರಾದ್ಧಕ್ಕಾಗಿ ಅಡಿಗೆಯನ್ನು ಮಾಡಿಸಿದರು. ಮಹಾರಾಜರು ಅಂತ್ಯಜರಿಗೆ ಊಟಕ್ಕೆ ಹಾಕಿದರೆಂಬ ಸುದ್ದಿಯು ಊರಲ್ಲಿ ಹಬ್ಬಲು, ಬ್ರಾಹ್ಮಣರೆಲ್ಲರೂ ಕ್ರುದ್ಧರಾದರು. ಏಕನಾಥಮಹಾರಾಜರ ಪಿತೃಗಳು ಅಂತ್ಯಜರೇ ಇರಬಹುದು. ಅಂತೇ ಅವರು ಶ್ರಾದ್ಧದ ದಿನ ಬ್ರಾಹ್ಮಣರಿಗಿಂತ ಮೊದಲು ಅಂತ್ಯಜರಿಗೆ ಊಟಕ್ಕೆ ಹಾಕಿದರು. ಎಂಬದಾಗಿ ಅನೇಕ ಕುಶಬ್ದಗಳನ್ನಾಡಿದರು. ಹಾಗು ಮಹಾರಾಜರಿಗೆ ಬಹಿಷ್ಕಾರವನ್ನು ಹಾಕಿದರು. ಬ್ರಾಹ್ಮಣರ ಈ ಕೃತಿಯು ಮಹಾರಾಜರಿಗೆ ಗೊತ್ತಿರಲಿಲ್ಲ. ಅವರು ಊಟಕ್ಕಾಗಿ ಬ್ರಾಹ್ಮಣರನ್ನು ಕರೆಯ ಹೋದರು. ಏಕನಾಥಮಹಾರಾಜರನ್ನು ಕಂಡಕೂಡಲೆ ಬ್ರಾಹ್ಮಣರು ಬಾಯಿಗೆ ಬಂದಹಾಗೆ ಅಂದು ನೀನು ಭ್ರಷ್ಟನಿರುವೆ ನಿನ್ನ ಮನೆಗೆ ಊಟಕ್ಕೆ ಬರುವದಿಲ್ಲ. ನಿನಗೆ ಬಹಿಷ್ಕಾರ ಹಾಕಿದ್ದೇವೆ. ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಆಗ ಮಹಾರಾಜರು ಸುಮ್ಮನೆ ಚಡಪಡಿಸುತ್ತ ಮನೆಗೆ ಬಂದರು. ಮಹಾರಾಜರ ಚಿಂತೆಯನ್ನು ಕಂಡು ಶ್ರೀಖಂಡೋಬನು—ಹೀಗೇಕೆ ಚಿಂತೆಮಾಡುವಿರಿ? ಚಿಂತೆಮಾಡಬೇಡಿರಿ. ಈ ದಿನ ಊಟಕ್ಕೆ ಸಾಕ್ಷಾತ್ ಪಿತೃಗಳೇ, ಬರುವರು. ಎಲೆಗಳನ್ನು ಬಡಿಸಿ ಪಿತೃಗಳನ್ನು ಆವಾಹನೆ ಮಾಡಿರಿ ಎಂದನು. ಮಹಾರಾಜರು ಕೂಡಲೆ ಅದರಂತೆ ಮಾಡಿದರು. ಸಾಕ್ಷಾತ್ ಪಿತೃಗಳೇ ಬಂದು ಮಣೆಯ ಮೇಲೆ ಕುಳಿತರು. ಬಳಿಕ ಮಹಾರಾಜರು ಸಂತುಷ್ಟರಾಗಿ ಪಿತೃಪೂಜೆಯನ್ನು ಮಾಡಿದರು. ಈ ಸುದ್ದಿಯು ಊರೊಳಗಿನ ಬ್ರಾಹ್ಮಣರಿಗೆ ಹತ್ತಿತು—ಅವರು ನಿಜಾಂಶವನ್ನು ಕಂಡು ಹಿಡಿ

ಯುವದಕ್ಕಾಗಿ ಏಕನಾಥಮಹಾರಾಜರ ಮನೆಗೆ ಬಂದರು. ಬ್ರಾಹ್ಮಣರು ಒಳಗೆ ಬರುವದಕ್ಕೂ ಪಿತೃಗಳು ಉಂಡೆದ್ದು ಕೈತೊಳೆಯುವದಕ್ಕೂ ಗಂಟು ಬಿದ್ದಿತು. ಬ್ರಾಹ್ಮಣರನ್ನು ಕಂಡಕೂಡಲೆ ಪಿತೃಗಳು ಅದೃಶ್ಯರಾದರು ಸಾಕ್ಷಾತ್ ಪಿತೃಗಳೇ ಬಂದು ಉಂಡದ್ದರಿಂದ ಬ್ರಾಹ್ಮಣರಿಗೆ ಪಶ್ಚಾತ್ತಾಪವಾಯಿತು ಮಹಾ ರಾಜರು ಮನುಷ್ಯರಲ್ಲವೆಂದು ನುಡಿದರು.

ಜನರು ದೊಡ್ಡವರ ಸಾಮರ್ಥ್ಯವನ್ನು ನೋಡಿದಾಗ ಮಾತ್ರ ಅಚ್ಚರಿಗೊ ಳ್ಳುವರು. ಕೆಲ ದಿನಗಳು ಕ್ರಮಿಸಿದ ಬಳಿಕ ಮತ್ತೆ ನಿಂದೆಗೆ ಆರಂಭಿಸುವರು. ಅದರಂತೆ ಮಹಾರಾಜರ ವಿಷಯದಲ್ಲಿಯೂ ಬ್ರಾಹ್ಮಣರು ವರ್ತಿಸಿದರು. ಏಕ ನಾಥಮಹಾರಾಜರು ಹೊಲೆಯರಿಗೆ ಊಟಕ್ಕೆ ಹಾಕಿದ್ದರಿಂದ ಅವರಿಗೆ ಯಥಾ ವಿಧಿಯಾಗಿ ಪ್ರಾಯಶ್ಚಿತ್ತವನ್ನು ಕೊಡಬೇಕೆಂದು ಗೊತ್ತುಮಾಡಿ ಅದರಂತೆ ಮಹಾರಾಜರಿಗೆ ಆಜ್ಞೆಯನ್ನು ಮಾಡಿದರು. ಸಜ್ಜನರಾದ ಮಹಾರಾಜರು ಬ್ರಾಹ್ಮ ಣರ ಮಾತಿಗೆ ಒಪ್ಪಿಕೊಂಡರು. ಬಳಿಕ ಅವರನ್ನು ಬ್ರಾಹ್ಮಣರು ನದೀತೀರಕ್ಕೆ ಕರೆದೊಯ್ದರು. ಅಲ್ಲಿ ಮಹಾರಾಜರು ಸ್ನಾನಮಾಡುತ್ತಿರಲು, ಕುಷ್ಠರೋಗಿ ಯಾದ ಒಬ್ಬ ಬ್ರಾಹ್ಮಣನು ಅಲ್ಲಿಗೆ ಬಂದನು. ಅವನು ಅಲ್ಲಿ ನೆರೆದ ಎಲ್ಲ ಬ್ರಾಹ್ಮ ಣರನ್ನು ಕುರಿತು—ಏಕನಾಥ ಮಹಾರಾಜರು ಎಲ್ಲಿರುವರು? ಎಂದು ಪ್ರಶ್ನೆ ಮಾಡಿದನು. ಸ್ನಾನಮಾಡುತ್ತಿರುವ ಮಹಾರಾಜರನ್ನು ಬ್ರಾಹ್ಮಣರು ತೋರಿಸಿ ದರು. ಕೂಡಲೆ ಆ ಬ್ರಾಹ್ಮಣನು ಅವರ ಬಳಿಗೆ ಹೋಗಿ ನಮಸ್ಕರಿಸಿ—ಸ್ವಾಮಿ ನಾನು ಕುಷ್ಠರೋಗ ನಿವಾರಣಾರ್ಥವಾಗಿ ಪಂಢರಪುರದಲ್ಲಿ ಅನುಷ್ಠಾನ ಮಾಡಿ ದೆನು. ಶ್ರೀ ಪಾಂಡುರಂಗನು ಸ್ವಪ್ನದಲ್ಲಿ ಬಂದು—ಪ್ರತಿಷ್ಠಾನಗರಿಯಲ್ಲಿ ಏಕ ನಾಥನೆಂಬ ಮಹಾ ಸಾಧುವಿರುವನು. ಅವನು ಮೊನ್ನೆ ಶ್ರಾದ್ಧದ ದಿನ ಅಂತ್ಯ ಜರಿಗೆ ಊಟಕ್ಕೆ ಹಾಕಿ ಅನಂತ ಪುಣ್ಯವನ್ನು ಸಂಪಾದಿಸಿದ್ದಾನೆ. ಆ ಪುಣ್ಯಾಂಶ ದಲ್ಲಿ ಯತ್ಕಿಂಚಿತ್ತಾದರೂ ನಿನಗೆ ಸಿಕ್ಕರೆ ನಿನ್ನ ಕುಷ್ಠರೋಗವು ನಿವಾರಣವಾಗು ವದು. ಆದ್ದರಿಂದ ನೀನು ಏಕನಾಥ ಸಾಧುಗಳ ಕಡೆಗೆ ಹೋಗಿ ಆ ಪುಣ್ಯವನ್ನು ಯಾಚಿಸು, ಎಂದು ಆಜ್ಞೆಮಾಡಿರುವನು. ಆದ್ದರಿಂದ ತಮ್ಮ ಸನ್ನಿಧಿಗೆ ಬಂದಿ ದ್ದೇನೆ. ಉದ್ಧರಿಸಬೇಕು, ಎಂದು ಪ್ರಾರ್ಥಿಸಿದನು.

ಕುಷ್ಠರೋಗಿಯು ಈ ಮಾತುಗಳನ್ನು ಕೇಳಿ ಬ್ರಾಹ್ಮಣರಿಗೆ ಆಶ್ಚರ್ಯವಾ ಯಿತು. ಅಷ್ಟರಲ್ಲಿ ಏಕನಾಥಮಹಾರಾಜರು ಆ ಕುಷ್ಠರೋಗಿಗೆ ಅಂತ್ಯಜರಿಗೆ ಉಣಿಸಿದ ಪುಣ್ಯವನ್ನು ಕೊಟ್ಟುಬಿಡಲು ಆತನು ಸರ್ವಾಂಗ ಸುಂದರನಾದನು.

ಅವನ ಕುಷ್ಠರೋಗವು ಹೇಳಹೆಸರಿಲ್ಲದೆ ಹೋಯಿತು. ಆಗಂತೂ ಆ ಬ್ರಾಹ್ಮಣರು ತುಂಬಾ ವಿಸ್ಮಿತರಾಗಿ ಏಕನಾಥರಿಗೆ ಶರಣುಹೋದರು. ಮತ್ತು ಪ್ರಾರ್ಥಿಸಿದರೇನಂದರೆ—"ಮಹಾರಾಜ, ತಾವು ಸಾಕ್ಷಾತ್ ಪರಮೇಶ್ವರರಿರುತ್ತೀರಿ. ತಮ್ಮ ಅಗಾಧಮಹಿಮೆಯನ್ನು ತಿಳಿಯದೆ ನಾವು ತಮಗೆ ಪ್ರಾಯಶ್ಚಿತ್ತ ಕೊಡುವದಕ್ಕಾಗಿ ಬಂದೆವು. ಈಗ ನಾವೇ ಪ್ರಾಯಶ್ಚಿತ್ತವನ್ನು ಹೊಂದಬೇಕಾಯಿತು. ಕ್ಷಮಿಸಿರಿ."

ಈ ಮೇರೆಗೆ ಆ ಬ್ರಾಹ್ಮಣರಿಗಾದ ಪಶ್ಚಾತ್ತಾಪವನ್ನು ನೋಡಿ ಏಕನಾಥ ಮಹಾರಾಜರು ಅವರಿಗೆ ಅಭಯ ಕೊಟ್ಟು ಊರೊಳಗೆ ಬಂದರು. ಹೀಗೆ ಮಹಾರಾಜರು ಬಗೆಬಗೆಯ ಲೀಲೆಗಳಿಂದ ಜನರನ್ನು ಹಾದಿಗೆ ಹಚ್ಚಲಾರಂಭಿಸಿದರು. ಅವರಲ್ಲಿ ಸಮಾಧಾನವು ವಿಶೇಷವಾಗಿತ್ತು. ಸಿಟ್ಟೆಂಬದು ಅವರಿಗೆ ಗೊತ್ತೇ ಇರಲಿಲ್ಲ. ಇಂಥ ಆ ಮಹಾನುಭಾವರಿಗೆ ಸಿಟ್ಟು ತರಿಸಬೇಕೆಂದು ಒಮ್ಮೆ ಒಬ್ಬ ನಿಂದಕನು ನದಿಯಿಂದ ಸ್ನಾನ ಮಾಡಿ ಬರುವಾಗ ಹಾದಿಯಲ್ಲಿ ಕುಳಿತು ಅವರ ಮೇಲೆ ಉಗಳಿದನು. ಮಹಾರಾಜರು ಸ್ವಲ್ಪವೂ ಸಿಟ್ಟಾಗದೆ ಪುನಃ ನದಿಗೆ ಹೋಗಿ ಸ್ನಾನ ಮಾಡಿ ಬಂದರು. ಆ ದಿನ ಸಂಜೆಯ ವರೆಗೆ ಆ ನಿಂದಕನು ಅವರ ಮೈಮೇಲೆ ಉಗುಳುತ್ತಲೇ ಇದ್ದನು. ಮಹಾರಾಜರು ಹಾಗೇ ಸ್ನಾನ ಮಾಡಿ ಬರುತ್ತಲೇ ಇದ್ದರು. ಅವರು ಮನಸ್ಸಿನಲ್ಲಿ ಸ್ವಲ್ಪವೂ ಸಂತಾಪವನ್ನು ತಾಳಲಿಲ್ಲ. ಈ ಮಹಾರಾಯನ ಪುಣ್ಯದಿಂದ ಈ ದಿನ ನನಗೆ ಅಸಂಖ್ಯ ಸಾರೆ ಮಹಾನದಿಯ ಸ್ನಾನವು ಘಟಿಸಿತೆಂದು ಸಂತೋಷವನ್ನು ತಾಳಿದರು. ಕೊನೆಗೆ ಆ ಗೃಹಸ್ಥನೇ ಬೇಸತ್ತು ಬಿಟ್ಟನು. ಇಂಥ ಲೋಕೋತ್ತರ ಸಾಧುಗಳನ್ನು ಪೀಡಿಸುವದು ಮನುಷ್ಯಮಾತ್ರರಿಗೆ ಸಾಧ್ಯವೇ?

ಈ ಮೇರೆಗೆ ಮಹಾರಾಜರು ಮಹಾ ಭಗವದ್ಭಕ್ತರೆನಿಸಿಕೊಂಡು ಹರಿಲೀಲೆಗಳನ್ನು ವರ್ಣಿಸಿದರು. ಇವರು ಬರೆದ ಗ್ರಂಥಗಳಲ್ಲಿ ಏಕನಾಥೀಭಾಗವತವೆಂಬದು ಪ್ರಸಿದ್ಧವಿರುವದು. ಶ್ರೀ ಮದ್ಭಾಗವತದ ೧೧ನೇ ಸ್ಕಂದವನ್ನು ಇವರು ಪ್ರಾಕೃತಜನರಿಗೆ ತಿಳಿಯುವ ಹಾಗೆ ಬಹುರಸಭರಿತವಾಗಿ ಬರೆದಿರುವರು. ಹೀಗೆ ಲೋಕೋಪಕಾರಮಾಡಿ ಅನೇಕ ಜನರಿಗೆ ಸನ್ಮಾರ್ಗವ ತೋರಿಸಿ ಅವತಾರ ಸಮಾಪ್ತಿಯನ್ನು ಮಾಡಿದರು. ಈ ಮಹಾತ್ಮರ ಮುಖದಿಂದ ಹೊರಟ ಅಭಂಗಗಳನ್ನು ಈಗಲೂ ಭಾವಿಕರು ಪಠಿಸುತ್ತಲಿರುವರು.

---

# * ಸಮರ್ಥರಾಮದಾಸರು.



ಕೃಷ್ಣಾತೀರದಲ್ಲಿ ಜಾಂಬ ಎಂಬದೊಂದು ಗ್ರಾಮವಿದೆ. ಇಲ್ಲಿ ಸಮರ್ಥ ರಾಮದಾಸರ ಜನ್ಮವಾಯಿತು. ಇವರ ತಂದೆಯ ಹೆಸರು ಸೂರ್ಯಾಜಿಪಂತ ತಾಯಿಯ ಹೆಸರು ರಾಣೂಬಾಯಿ; ಇವರು ಪ್ರಸಿದ್ಧ ಭಗವದ್ಭಕ್ತರು; ಅಂತೇ ಇವರ ಹೊಟ್ಟೆಯಲ್ಲಿ ಮಾರುತಿಅಂಶಸಂಭೂತರಾದ ಶ್ರೀ ಸಮರ್ಥರು ಉದಿಸಿದರು.

ಸಮರ್ಥರು ಚಿಕ್ಕಂದಿನಲ್ಲಿ ಬಹು ಉಡಾಳತನದಿಂದ ನಡೆಯುತ್ತಿದ್ದರು. ಇವರ ಮೂಲ ಹೆಸರು ನಾರಾಯಣ ಎಂದಿತ್ತು. ಇವರು ಬಾಲ್ಯದಲ್ಲಿಯೇ ಶ್ರೀ ಮಾರುತಿಯ ಗುಡಿಯಲ್ಲಿ ಹನ್ನೊಂದು ದಿನ ಉಪವಾಸ ಕುಳಿತು ಶ್ರೀ ಮಾರುತಿಯನ್ನು ಪ್ರಸನ್ನೀಕರಿಸಿಕೊಂಡರು. ಬಾಲ್ಯದಲ್ಲಿಯ ಇವರ ಆಟಗಳಂತೂ ವಿಲಕ್ಷಣವಾಗಿದ್ದವು. ಸ್ವಲ್ಪ ದೊಡ್ಡವರಾದ ಬಳಿಕ ಅಂದರೆ ಉಪನಯನವಾದ ಬಳಿಕ ಇವರು ವೇದಶಾಸ್ತ್ರಗಳ ಅಧ್ಯಯನ ಮಾಡಿದರು. ಇವರಿಗೆ ಅಲ್ಪಾವಕಾಶದಲ್ಲಿಯೇ ಸಂಪೂರ್ಣ ವಿದ್ಯೆಯು ಬಂದು ಹೋಯಿತು. ಇವರಿಗೆ ಲಗ್ನ ಮಾಡಬೇಕೆಂದು ಇವರ ತಾಯಿಯು ಹಾತೊರೆದಳು. ವಧುವನ್ನು ಗೊತ್ತು ಪಡಿಸಿದರು. ಪುರೋಹಿತರು ಅಂತಃಪಟವನ್ನು ಹಿಡಿದು ಅಕ್ಷತಾರೋಪಣಕ್ಕಾಗಿ "ಸುಮುಹೂರ್ತೆ ಸಾವಧಾನ" ಎಂದು ಉಚ್ಚರಿಸಿದ ಕೂಡಲೆ ಸಾವಧರಾಗಿ ವಿವಾಹಮಂಟಪದೊಳಗಿಂದ ಪಲಾಯನ ಹೇಳಿಸಿದರು. ಎಷ್ಟು ಜನರು ಬೆನ್ನಟ್ಟಿದರೂ ಅವರ ಕೈಗೆ ಸಿಕ್ಕಲಿಲ್ಲ.

ವಿವಾಹಮಂಟಪದಿಂದ ಹೀಗೆ ಓಡಿ ಹೋದಬಳಿಕ ಸಮರ್ಥರು ಗೋದಾತೀರದಲ್ಲಿ ಅನುಷ್ಠಾನವನ್ನು ನಡಿಸಿದರು. ಅವರು ನಡುಮಟ್ಟ ನೀರಲ್ಲಿ ನಿಂತು ಮಧ್ಯಾಹ್ನದವರೆಗೆ ಅನುಷ್ಠಾನ ಮಾಡುತ್ತಿದ್ದರು. ಬಳಿಕ ಮಧುಕರಿಯಿಂದ ಕ್ಷುಧೆಯನ್ನು ಶಾಂತಗೊಳಿಸಿ ಸಂಜೆಯವರೆಗೆ ರಾಮನಾಮ ಜಪಮಾಡುತ್ತ ಕೂಡ್ರುತ್ತಿದ್ದರು. ಬಳಿಕ ನದಿಗೆ ಹೋಗಿ ಸಾಯಂಸಂಧ್ಯೆಯನ್ನು ತೀರಿಸಿಕೊಂಡು ಗುಹೆಗೆ ಬಂದು ೧೦ ಗಂಟೆ ರಾತ್ರಿಯವರೆಗೆ ರಾಮಧ್ಯಾನಮಾಡಿ ಸ್ವಲ್ಪ ವಿಶ್ರಮಿಸುತ್ತಿದ್ದರು. ಮತ್ತೆ ಬೆಳಗಿನ ನಾಲ್ಕು ಗಂಟೆಗೆ ಎದ್ದು, ನದಿಗೆ

* ಇವರ ವಿಸ್ತೃತಚರಿತ್ರವು ಸಿದ್ಧವಾಗಿದೆ. ಬೆಲೆ ೧-೨-೦ ಸದ್ಬೋಧ ಚಂದ್ರಿಕೆಯ ಆಫೀಸಿನಲ್ಲಿ ಸಿಗುವವು.

ಸ್ನಾನಕ್ಕಾಗಿ ಹೋಗುತ್ತಿದ್ದರು. ಈ ಕ್ರಮದಂತೆ ಅವರು ಹನ್ನೆರಡು ವರುಷ ಗಳವರೆಗೆ ಅನುಷ್ಠಾನ ಮಾಡಿದರು. ಆಗ ಶ್ರೀರಾಮಚಂದ್ರನು ಅವರಿಗೆ ದಕ್ಷಿಣ ದಲ್ಲಿ ಕೃಷ್ಣಾತೀರಕ್ಕೆ ಹೋಗಿ ಶಿವರಾಜನಿಗೆ ನೆರವಾಗಿ ರಾಜ್ಯಸ್ಥಾಪನೆ ಮಾಡಿಸ ಬೇಕೆಂದು ಆಜ್ಞೆಯನ್ನಿತ್ತನು. ಸಮರ್ಥರ ಮನಸ್ಸಿನಲ್ಲಿ ಭರತಖಂಡದ ಪ್ರದ ಕ್ಷಿಣೆ ಮಾಡಬೇಕೆಂದಿತ್ತು. ಆದ್ದರಿಂದ ಅವರು ಅದಕ್ಕಾಗಿ ಶ್ರೀರಾಮಚಂದ್ರನ ಅಪ್ಪಣೆ ಪಡೆದು ಹನ್ನೆರಡು ವರುಷಗಳವರೆಗೆ ಭೂಪ್ರದಕ್ಷಿಣೆಯನ್ನು ಮಾಡಿ ದರು. ಈ ಅವಧಿಯಲ್ಲಿ ಅನೇಕ ಪುಣ್ಯಸ್ಥಳಗಳ ದೇವಸ್ಥಾನಗಳ ಸಾಧು ಸಜ್ಜ ನರ ದರ್ಶನವನ್ನು ಹೊಂದಿದರು. ಬಳಿಕ ಅವರು ಶ್ರೀರಾಮನ ಅಪ್ಪಣೆಯಂತೆ ಕೃಷ್ಣಾತೀರದಲ್ಲಿ ವಾಸಿಸಿ ಶಿವರಾಜನ ಗುರುಗಳಾಗಿ ಸ್ವರಾಜ್ಯಸ್ಥಾಪನೆಯನ್ನು ಮಾಡಿಸಿದರು. ಧರ್ಮರಕ್ಷಣೆಗಾಗಿ ಹುಟ್ಟಿಬಂದ ಶಿವರಾಜನಿಗೆ ಸಮರ್ಥರಂತಹ ಮಹಾತ್ಮರು ಆಲೋಚನೆ ಹೇಳಿದ ಬಳಿಕ ಇನ್ನಾವ್ಯತರ ಕೊರತೆ? ಹಾ ಹಾ ಅನ್ನುವಷ್ಟರಲ್ಲಿ ಸ್ವರಾಜ್ಯಸ್ಥಾಪನೆಯಾಯಿತು. ಸಮರ್ಥರಲ್ಲಿ ಶಿವರಾಯನ ನಿಷ್ಠೆಯು ವಿಶೇಷವಾಗಿ ಕೂತಿತು. ಸಮರ್ಥರಂತಹ ಗುರುಗಳು, ಶಿವರಾಯ ನಂತಹ ಶಿಷ್ಯರು ದೊರೆಯುವದು ದುರ್ಲಭವೆಂದು ಹೇಳಬಹುದು. ಈ ಗುರು ಶಿಷ್ಯರು ದೇಹಮಾತ್ರದಿಂದ ಭಿನ್ನರಾಗಿ ತೋರುತ್ತಿದ್ದರಲ್ಲದೆ ಇವರಿಬ್ಬರು ಅಭೇದ ರೂಪರಾಗಿದ್ದರು. ಶಿವರಾಜನಿಗೆ ರಾಜ್ಯಸ್ಥಾಪನೆಯ ಕೆಲಸದಲ್ಲಿ ಒದಗಿದ ಅನಂತ ಸಂಕಟಗಳನ್ನು ಸಮರ್ಥರು ತಮ್ಮ ಕೃಪಾದೃಷ್ಟಿಮಾತ್ರದಿಂದಲೇ ನಿವಾರಣ ಮಾಡಿದರು. ಇವರು ಆಗಿನ ಕಾಲದ ಜನತೆಯಲ್ಲಿ ಪೌರುಷವೃತ್ತಿಯೂ, ವಿವೇ ಕವೂ ಉಂಟಾಗುವಂತೆ ಶ್ರೀ ದಾಸಬೋಧವೆಂಬ ಉತ್ಕೃಷ್ಟ ಗ್ರಂಥವನ್ನು ಬರೆ ದರು. ಈ ದಾಸಬೋಧದಲ್ಲಿ ೨೦ ದಶಕಗಳಿವೆ. ಒಂದೊಂದು ದಶಕದಲ್ಲಿ ಹತ್ತತ್ತು ಸಮಾಸಗಳಿವೆ. ಮುಮುಕ್ಷುಗಳಿಗೂ, ರಾಜಕರಣಿಗಳಿಗೂ, ಸಂಸಾ ರಿಕರಿಗೂ ಈ ಗ್ರಂಥವು ಕಾಮಧೇನುವಿನ ಸ್ವರೂಪವಾಗಿದೆ. ಮುಸಲ್ಮಾನರ ಸಂಸರ್ಗದಿಂದ ಜನತೆಯಲ್ಲಿ ಮನೋದೌರ್ಬಲ್ಯವು ನೆಲೆಗೊಂಡಿತ್ತು. ಪ್ರತಿ ಯೊಬ್ಬ ಭಾರತೀಯನು ಪ್ರತಿಭಾಶೂನ್ಯನಾಗಿದ್ದನು. ಸ್ವಾಭಿಮಾನವೆಂಬದು ಎಂತಹದೋ ಗೊತ್ತಿರಲಿಲ್ಲ. ಇವೆಲ್ಲ ಅವಲಕ್ಷಣಗಳು ಹೋಗಿ ಜನತೆಯಲ್ಲಿ ಒಂದು ಬಗೆಯ ಸ್ವಾಭಿಮಾನಜ್ಯೋತಿಯು ಮಿನುಗುವಂತೆ ಈ ಗ್ರಂಥದ ರಚನೆ ಯಿರುತ್ತದೆ. ಸಮರ್ಥರ ಈ ಗ್ರಂಥನಿರ್ಮಾಣದಿಂದ ಆಗಿನ ಸಮಾಜವು ಜಾಗೃತ ವಾಯಿತು. ಪ್ರತಿಯೊಬ್ಬನಲ್ಲಿ ಸ್ವಾಭಿಮಾನಜ್ಯೋತಿಯು ಮಿನುಗಹತ್ತಿತು.

ಹೀಗೆ ನಿರ್ಜೀವ ಸಮಾಜದಲ್ಲಿ ಜೀವಕಳೆಯನ್ನು ತುಂಬಿದ ಈ ಗ್ರಂಥದ ಯೋಗ್ಯತೆಯು ಎಷ್ಟೆಂಬದನ್ನು ವರ್ಣಿಸಲು ಸಾಧ್ಯವಿಲ್ಲ. ಇರಲಿ.

ಶ್ರೀ ಸಮರ್ಥರು ಶಿವರಾಜನಿಂದ ಸ್ವರಾಜ್ಯಸ್ಥಾಪನೆ ಮಾಡಿಸಿ ಧರ್ಮವನ್ನು ರಕ್ಷಿಸಿದಂತೆ ಭಗವದುಪಾಸನೆಯನ್ನು ಹೆಚ್ಚಿಸಿ ಜನರನ್ನೆಲ್ಲ ಭಕ್ತಿಮಾರ್ಗಕ್ಕೆ ತೊಡಗಿಸಿದರು. ಚಾಫಳದಲ್ಲಿಯೂ ಸಜ್ಜನಗಡದಲ್ಲಿಯೂ ಶ್ರೀರಾಮನ ಪ್ರತಿಷ್ಠೆಯನ್ನು ಮಾಡಿ ಶ್ರೀರಾಮಉಪಾಸನೆಯನ್ನು ಬೆಳಿಸಿದರು. ಇವರಿಗೆ ಎಪ್ಪತ್ತೆರಡು ಜನ ಪ್ರಮುಖಶಿಷ್ಯರಿದ್ದರು ಇವರಿಗೆ ಮಹಂತರೆಂಬ ಹೆಸರು ಬಂದಿರುವದು. ಆ ಕಾಲದಲ್ಲಿ ಭೂಲೋಕದಲ್ಲಿ ಜನಿಸಿದ ಎಲ್ಲ ಸಾಧು-ಸಜ್ಜನರಿಗಿಂತಲೂ ಇವರ ಕೆಲಸವು ಶ್ರೇಷ್ಠತರಗತಿಯದಾಗಿರುತ್ತದೆ. ಉಳಿದ ಸಾಧುಗಳು ಕೇವಲ ಭಗವದ್ಭಕ್ತಿಯೊಂದನ್ನೇ ಪ್ರಚುರಗೊಳಿಸಿದರು. ಆದರೆ ಶ್ರೀಸಮರ್ಥರು ಶ್ರೀಭಗವಂತನ ಭಕ್ತಿಯ ಜೊತೆಗೆ ರಾಜಕಾರಣಗಳನ್ನೂ ಸೇರಿಸಿ ಲೋಕೋತ್ತರ ಕೀರ್ತಿಶಾಲಿಗಳಾದರು. ಇವರು ಹಲವು ಅಮಾನುಷ ಸಂಗತಿಗಳನ್ನು ನೆರವೇರಿಸಿದರು. ಶಿವರಾಜನಿಗೆ ಅಡವಿಯಲ್ಲಿ ಪಂಚಭಕ್ಷ್ಯ ಪರಮಾನ್ನವನ್ನು ಉಣಿಸಿದರು. ಸತ್ತ ಮನುಷ್ಯರಿಗೆ ಪ್ರಾಣದಾನ ಮಾಡಿದರು. ಹುಚ್ಚು ಹಿಡಿದವರ ಹುಚ್ಚನ್ನು ನಿವಾರಣೆಮಾಡಿದರು. ಮಸೂರಲ್ಲಿ ಒಬ್ಬ ಮುಸಲ್ಮಾನ ಅಧಿಕಾರಿಯು ಶ್ರೀರಾಮೋತ್ಸವಕ್ಕೆ ವಿಘ್ನವನ್ನುಂಟು ಮಾಡಲು ಸಮರ್ಥರು ಮನೋವೇಗದಿಂದ ವಿಜಾಪುರದ ಬಾದಶಹನ ದರ್ಬಾರದಲ್ಲಿ ಪ್ರಕಟರಾಗಿ ಬಾದಶಹನಿಂದ ಆ ಅಧಿಕಾರಿಗೆ ಆಜ್ಞಾಪತ್ರವನ್ನು ಕೊಡಿಸಿದರು.

ಈ ಮೇರೆಗೆ ಸಮರ್ಥರು ಹಲವು ಅಮಾನುಷ ಕೃತ್ಯಗಳನ್ನು ತೋರಿಸಿ ಜನರಲ್ಲಿ ಭಕ್ತಿಯ ಪ್ರಸಾರವನ್ನು ಮಾಡಿ ಅವತಾರ ಸಮಾಪ್ತಿಯನ್ನು ಮಾಡಿದರು. ಭಗವದ್ವಿಭೂತಿಗಳಲ್ಲಿ ಕೆಲವರು ಕೇವಲ ಭಕ್ತರಾಗಿ ವರ್ತಿಸಿ ಅನೇಕ ಬಗೆಯ ದೇಹ ದಂಡನ ಮಾಡಿ ಗುರುತ್ವವನ್ನು ಪಡೆಯದೆ ಕೊನೆಯ ವರೆಗೂ ಭಕ್ತರಾಗಿಯೇ ನಡೆದು ಅವತಾರ ಸಮಾಪ್ತಗೊಳಿಸುವರು. ಕೆಲವರು ಗುರುತ್ವದಿಂದ ಜನರನ್ನು ಸನ್ಮಾರ್ಗಕ್ಕೆ ಹಚ್ಚಿ ಅವತಾರ ಪೂರ್ತಿಗೊಳಿಸುವರು. ಗುರುತ್ವವನ್ನು ಧಾರಣ ಮಾಡಿ ಲೋಕವನ್ನುದ್ಧರಿಸಿದ ಮಹಾಪುರುಷರಲ್ಲಿ ಪ್ರಸ್ತುತದ ಚರಿತ್ರನಾಯಕರ ಸಮಾವೇಶವಾಗುತ್ತದೆ.

---

# ತುಕಾರಾಮ ಸಾಧುಗಳು.

ಶ್ರೀ ಜ್ಞಾನದೇವರ ಸ್ಥಾನವಾದ ಆಳಂದಿಯ ಸಮೀಪದಲ್ಲಿ ದೇಹೂ ಎಂಬ ದೊಂದು ಗ್ರಾಮವಿರುವದು. ಇದೇ ತುಕಾರಾಮಸಾಧುಗಳ ಜನ್ಮಭೂಮಿಯು; ಈ ಪುಣ್ಯಭೂಮಿಯಲ್ಲಿ ಈ ಮಹಾಸಾಧುಗಳು ಅವತರಿಸಿದರು. ಇವರು ಜಾತಿ ಯಿಂದ ವಣಿಕರಾಗಿದ್ದರು. ವ್ಯಾಪಾರೋದ್ಯೋಗನೇ ಇವರ ಕುಲವೃತ್ತಿಯು; ಇವರು ಧನಧಾನ್ಯಸಂಪನ್ನ ಮನೆತನದಲ್ಲಿ ಹುಟ್ಟಿದ್ದರು. ಇವರಿಗೆ ಇಬ್ಬರು ಹೆಂಡಂದಿರಿದ್ದರು. ಹಿರಿಯ ಹೆಂಡತಿಯ ಹೊಟ್ಟೆಯಲ್ಲಿ ಇಬ್ಬರು ಮಕ್ಕಳಿದ್ದರು; ಚಿಕ್ಕ ಹೆಂಡತಿಗೆ ಸಂತತಿಯಾಗಲಿಲ್ಲ.

ಹೀಗಿರಲು ಒಮ್ಮೆ ದೇಶದಲ್ಲಿ ಬರಗಾಲವು ಪ್ರಾಪ್ತವಾಯಿತು. ಕಾಳು ಗಳು ಬಹಳ ತುಟ್ಟಿಯಾದವು. ಅದರಲ್ಲೂ ಎಷ್ಟು ದುಡ್ಡು ಕೊಟ್ಟರೂ ಬೇಡಿ ದಷ್ಟು ಕಾಳು ಸಿಗದಾಯಿತು. ಜನರು ಅನ್ನಾನ್ನಗತಿಕರಾದರು. ಇಂಥ ಸಮಯದಲ್ಲಿ ತುಕಾರಾಮಸಾಧುಗಳ ಮನೆಯೊಳಗಿನ ಧನಧಾನ್ಯಗಳೆಲ್ಲ ಇಟ್ಟ ಸ್ಥಳದಲ್ಲಿಯೇ ಮಾಯವಾದವು. ಅವು ಎಲ್ಲಿ ಹೋದವೆಂಬದು ಯಾರಿಗೂ ತಿಳಿ ಯಲಿಲ್ಲ. ಸಾಧುಗಳಿಗೆ ದಾರಿದ್ರ್ಯವು ಪ್ರಾಪ್ತವಾಯಿತು. ಬರಗಾಲವು ಒಳ್ಳೇ ಉಗ್ರರೂಪವನ್ನು ತಾಳಿದ್ದರಿಂದ ವ್ಯಾಪಾರೋದ್ಯೋಗಗಳು ಕಟ್ಟಾದವು, ಇದ ರಿಂದ ಸಾಧುಗಳ ಮಕ್ಕಳೂ ಹೆಂಡರೂ ಕೂಳಿಲ್ಲದೆ ಚಡಪಡಿಸಲಾರಂಭಿಸಿದರು. ಹಿರಿಯ ಹೆಂಡತಿಯು ಕೂಳಿಲ್ಲದೆ ಮರಣಹೊಂದಿದಳು.

ಹೆಂಡತಿಯ ಮರಣದಿಂದ ತುಕಾರಾಮ ಸಾಧುಗಳು ಸಂಸಾರದಲ್ಲಿ ಔದಾ ಸೀನ್ಯವನ್ನು ತಾಳಿದರು. ದೃಶ್ಯವೆಲ್ಲ ನಶ್ವರವಿದ್ದು, ಪರಮಾತ್ಮನೊಬ್ಬನೇ ಶಾಶ್ವತನೆಂದು ತಿಳಿದರು. ಮನುಷ್ಯಜನ್ಮಕ್ಕೆ ಬಂದು ಪರಮಾತ್ಮನನ್ನು ಭಜಿಸದೆ ಇರುವವರ ಜನ್ಮವು ವ್ಯರ್ಥವೆಂದು ಭಾವಿಸಿದರು. ಸಂಸಾರದಲ್ಲಿ ಸುಖವನ್ನು ಬಯಸುವವರ ಬಾಳು, ತಗಣಿಗೆ ಆಗರವಾದ ಹಾಸಿಗೆಯಲ್ಲಿ ಮಲಗಿದವನು ನಿದ್ದೆ ಯ ಸುಖವನ್ನು ಬಯಸಿದಂತೆ ವ್ಯರ್ಥವೇ ಸರಿ! ಎಂದು ಯೋಚಿಸಿದರು. ಅವ ರಲ್ಲಿ ಪ್ರಖರವಾದ ವೈರಾಗ್ಯವು ಪ್ರಾಪ್ತವಾಯಿತು. ಅವರು ಪಾಂಡುರಂಗನ ಭಜನೆಯನ್ನು ಮಾಡಲಾರಂಭಿಸಿದರು. ಆ ಊರಿನಲ್ಲಿ ಊರಹೊರಗೆ ಒಂದು ಪಾಂಡುರಂಗನ ದೇವಾಲಯವಿತ್ತು. ಅಲ್ಲಿಗೆ ತುಕಾರಾಮಸಾಧುಗಳು ದಿನಾಲು

ಹೋಗಿ ಗುಡಿಯಲ್ಲಿ ಕಸಗೂಡಿಸಿ ಸಾರಿಸಿ ದೇವರ ಭಜನೆ ಮಾಡಲಾರಂಭಿಸಿದರು. ಸಾಧುಗಳ ಈ ದೈವಭಕ್ತಿಯನ್ನು ಕಂಡು ನಿಂದಕರ ಮುಖದಿಂದ ದುರ್ಭಾಷಣ ಗಳು ಹೊರಡಲಾರಂಭಿಸಿದವು. ಯಾರ ದುರ್ಭಾಷಣಗಳಿಗೂ ಲಕ್ಷ್ಯಕೊಡದೆ ಸಾಧುಗಳು ತಮ್ಮ ಉಪಾಸನೆಯನ್ನು ಯಥಾಸ್ಥಿತವಾಗಿ ನಡಿಸಿದರು.

ತುಕಾರಾಮುಸಾಧುಗಳು ಅತ್ಯಂತ ಭೂತದಯಾಪರರಾಗಿದ್ದರು. ಯಾರಾ ದರೂ ಅನ್ನವಿಲ್ಲೆಂದು ಬಳಲುತ್ತಿದ್ದರೆ ಮಂದಿಯ ಮನೆ ಭಿಕ್ಷೆಬೇಡಿ ತಂದು ಅವರಿಗೆ ಹಾಕುತ್ತಿದ್ದರು. ಬಿಸಲಿನ ತಾಪದಿಂದ ಬಳಲಿ ನೀರಡಿಸಿದವರಿಗೆ ಅಡವಿ ಯಲ್ಲಿದ್ದರೂ ನೀರು ಮುಟ್ಟಸುತ್ತಿದ್ದರು. ಈ ಮೇರೆಗೆ ಅವರು ದೇಹದಂಡನ ಮಾಡುತ್ತ ಶಾರೀರಿಕ ತಪಸ್ಸನ್ನು ಮಾಡಲಾರಂಭಿಸಿದರು. ಅವರ ನಾಲಿಗೆ ಯಂತೂ ಸರ್ವದಾ ಪಾಂಡುರಂಗನ ನಾಮಘೋಷವನ್ನು ಮಾಡುತ್ತಲಿತ್ತು.

ಈ ಸಂಧಿಯಲ್ಲಿ ತುಕಾರಾಮುಸಾಧುಗಳಿಗೆ ಕೀರ್ತನ ಮಾಡಬೇಕೆಂಬ ಇಚ್ಛೆ ಯುತ್ಪನ್ನವಾಯಿತು. ಆದರೆ ವ್ಯುತ್ಪತ್ತಿಇಲ್ಲದ್ದರಿಂದ ಹ್ಯಾಗೆ ಕೀರ್ತನ ಮಾಡ ಬೇಕೆಂಬದು ತಿಳಿಯದಾಯಿತು. ಆಗ ಅವರು ಸಂತರ ಅಭಂಗಗಳನ್ನು ಪಾಠ ಮಾಡಲಾರಂಭಿಸಿದರು. ಹೀಗಿರಲು ಒಂದು ದಿನ ಪಾಂಡುರಂಗನು ಇವರ ಸ್ವಪ್ನದಲ್ಲಿ ಬಂದು—ನಾಮದೇವನು ಶತಕೋಟಿ ಅಭಂಗಗಳನ್ನು ರಚಿಸಲು ಪ್ರತಿಜ್ಞೆಮಾಡಿದನು. ಆದರೆ ಅವನು ತೊಂಭತ್ತುನಾಲ್ಕುಕೋಟಿ ನಾಲ್ವತ್ತು ಲಕ್ಷ ಅಭಂಗಗಳನ್ನು ರಚಿಸಿದ್ದಲ್ಲದೆ ಒಂಭತ್ತುಲಕ್ಷ ಪದಗಳನ್ನು ಮಾಡಿ ರುತ್ತಾನೆ. ಆದ್ದರಿಂದ ನೀನು ಶತಕೋಟಿ ಅಭಂಗಗಳು ಪೂರ್ತಿಯಾಗುವದಕ್ಕೆ ಬೇಕಾಗುವಷ್ಟು ಅಭಂಗಗಳನ್ನು ರಚಿಸು. ನಿನಗೆ ತಕ್ಕ ಶಕ್ತಿಯುತ್ಪನ್ನವಾ ಗುತ್ತದೆ. ಸರಸ್ವತಿಗೆ ನಿನ್ನ ನಾಲಿಗೆಯ ಮೇಲೆ ವಾಸಮಾಡಲು ಆಜ್ಞಾಪಿಸು ತ್ತೇನೆ ಎಂದು ನುಡಿದು ಬೆನ್ನುಚಪ್ಪರಿಸಿ ಎಬ್ಬಿಸಿದನು ತುಕಾರಾಮುಸಾಧುಗಳು ಎಚ್ಚತ್ತು ನೋಡಲು ಎದುರಿಗೆ ಯಾರೂ ಇಲ್ಲ. ಪಾಂಡುರಂಗನು ಆಜ್ಞೆಮಾ ಡಿದ್ದು, ಚನ್ನಾಗಿ ಸ್ಮರಣೆಯಲ್ಲಿತ್ತು, ಆ ಕೂಡಲೆ ಅವರು ಅಭಂಗಗಳ ರಚನೆಗೆ ಆರಂಭಿಸಿದರು. ಪ್ರತ್ಯಕ್ಷ ಭಗವಂತನ ಅಭಯುವಚನವು ಸಿಕ್ಕಬಳಿಕ ಕೇಳುವ ದೇನು? ಅವರು ಅಂದದ್ದೇ ಅಭಂಗವಾಣಿಯಾಯಿತು. ಅವರ ಪ್ರಾಸಾದಿಕ ವಾಣಿಯಿಂದ ಹೊರಟ ಅಭಂಗಗಳನ್ನು ಕೇಳಿ ಭಾವಿಕರು ಸಂತೋಷವನ್ನು ಹೊಂದಲಾರಂಭಿಸಿದರು. ಸಾಧುಗಳ ಕೀರ್ತನಕ್ಕೆ ಸಾವಿರಾರು ಜನರು ನೆರೆಯು ತ್ತಿದರು.

ಜನ್ಮತಃ ಯಾರು ವಿರಕ್ತರೋ, ಯಾರು ಪಾಂಡುರಂಗನ ಪ್ರೇಮದ ಭಕ್ತರೋ ಅಂಥವರು ಪಾಂಡುರಂಗನ ಗುಣನಾಮ ಸಂಕೀರ್ತನ ನಡಿಸಿದ ಬಳಿಕ ಅದನ್ನು ಕೇಳದವರಾರು? ಭಗವಂತನ ಗುಣಕಥೆಯು ಮೊದಲೇ ಸವಿಯಾದದ್ದು; ಅದರಲ್ಲಿ ಪ್ರಾಸಾದಿಕ ಭಕ್ತರ ವಾಣಿಯು ಸ್ಪರ್ಶವಾದ ಬಳಿಕ ಕೇಳುವದೇನು? ಆ ಭಗವಂತನ ಗುಣಾನುವಾದ ರೂಪೀ ಕಥೆಗೆ ಸುಲಕ್ಷಣ ಸಾಧುವರ್ಯಪ್ರ ಒಂದುಹೋಯಿತು. ಆದರ ಆಸ್ವಾದವನ್ನು ಸವಿಯುವದಕ್ಕಾಗಿ ಶ್ರೋತೃ ಸಮುದಾಯವು ದಿನದಿನಕ್ಕೆ ಹೆಚ್ಚು ಹೆಚ್ಚು ನೆರೆಯಲಾರಂಭಿಸಿತು. ಹೀಗೆ ತುಕಾರಾಮ ಸಾಧುಗಳ ಕೀರ್ತಿಯು ದಿಗಂತವಾಗಿ ಹಬ್ಬಿ ಶಿವಾಜಿಮಹಾರಾಜರ ಕಿವಿಯವರೆಗೂ ಹೋಯಿತು.

ಪರಮ ದೈವಭಕ್ತ ಶಿರೋಮಣಿಗಳಾದ ಶಿವಾಜಿ ಮಹಾರಾಜರು ತುಕಾರಾಮ ಸಾಧುಗಳ ಪ್ರಖ್ಯಾತಿಯನ್ನು ಕೇಳಿ ಅವರನ್ನು ಪರೀಕ್ಷಿಸುವದಕ್ಕಾಗಿ ಒಂದು ತಾಟಿನ ತುಂಬ ಹೊನ್ನನ್ನು ತುಂಬಿ ಸಾಧುಗಳ ಎದುರಿಗೆ ಇಟ್ಟು, ಸ್ವೀಕರಿಸಬೇಕೆಂದು ಪ್ರಾರ್ಥಿಸಿದರು. ಅದನ್ನು ಕಂಡು ಸಾಧುಗಳು---ರಾಜಾ, ಇದು ನನಗೇತಕ್ಕೆ ಬೇಕು. ನನಗೆ ನಿಜವಾಗಿ ಸಮಾಧಾನವಾಗಬೇಕೆಂದು ನೀನು ಇಚ್ಛಿಸುತ್ತಿದ್ದರೆ ನನಗೆ ಒಂದು ತುಳಸೀಮಣಿಗಳ ಮಾಲೆಯನ್ನು ಹಾಕು; ಹಾಗು ನೀನು ಏಕಾದಶಿಯ ವ್ರತವನ್ನು ಮಾಡು. ಯಾವಾಗಲೂ ಪಾಂಡುರಂಗನ ನಾಮಜಪಮಾಡುತ್ತ ನಡೆ, ಎಂದು ನುಡಿದರು. ಸಾಧುಗಳ ಈ ನಿಸ್ಪೃಹವೃತ್ತಿಯನ್ನು ತಿಳಿದು ಶಿವರಾಜರು ತುಂಬಾ ಸಂತೋಷಬಟ್ಟರು.

ಮೇಲಿನ ಈ ಪ್ರಸಂಗದಿಂದ ಶಿವಾಜಿಮಹಾರಾಜರು ತುಕಾರಾಮ ಸಾಧುಗಳ ಮೇಲೆ ತುಂಬಾ ವಿಶ್ವಾಸವನ್ನು ತಾಳಿದರು. ಪ್ರತಿನಿತ್ಯ ಅವರು ಕೀರ್ತನಕ್ಕೆ ಬರಲಾರಂಭಿಸಿದರು. ಒಮ್ಮೆ ಶಿವಾಜಿ ಮಹಾರಾಜರು ಕೀರ್ತನಶ್ರವಣಕ್ಕೆ ಕುಳಿತಾಗ ಬಾದಶಹನ ದಂಡಾಳುಗಳು ಮುತ್ತಿಗೆಯನ್ನು ಹಾಕಿದರು. ಆ ದಂಡಿನ ಮುಖ್ಯಾಧಿಕಾರಿಯ ಅಪ್ಪಣೆಯ ಮೇರೆಗೆ ಶಿವಾಜಿರಾಜರನ್ನು ಸೆರೆಹಿಡಿದೊಯ್ಯುವದಕ್ಕಾಗಿ ಕೆಲ ಜನ ದಂಡಾಳುಗಳು ಒಳಗೆ ಬಂದರು. ಆದರೆ ಅವರಿಗೆ ಅಲ್ಲಿ ಕುಳಿತ ಜನರೆಲ್ಲ ಶಿವಾಜಿರಾಜರಂತೆಯೇ ತೋರಿದ್ದರಿಂದ ಯಾರನ್ನು ಹಿಡಿಯಬೇಕೆಂಬದು ಅವರಿಗೆ ತಿಳಿಯದಾಯಿತು. ಆಗ ಅವರು ಹೊರಗೆ ಬಂದು ಅದರಂತೆ ಮುಖ್ಯಾಧಿಕಾರಿಗೆ ತಿಳಿಸಲು, ಅವನು ಕೀರ್ತನಕ್ಕೆ ಕುಳಿತ ಎಲ್ಲ ಜನರನ್ನೂ ಸೆರೆಹಿಡಿಯುವಂತೆ ಹುಕುಮು ಮಾಡಿದನು. ಈ ಹುಕುಮನ್ನು ಕೇಳಿ ಜನರೆಲ್ಲರೂ ಗಾಬರಿ

ಯಾದರು. ಶ್ರೋತೃಮಂಡಳಿಯ ಹಲ್ಲಣವು ಹಾರಿತು. ಆಗ ತುಕಾರಾಮ ಸಾಧುಗಳು ಭಗವಂತನನ್ನು ಪ್ರಾರ್ಥಿಸಲು ಪ್ರತ್ಯಕ್ಷ ಪಾಂಡುರಂಗನೇ ಶಿವಾಜಿಯ ವೇಷವನ್ನು ತಾಳಿ ಬೆಟ್ಟದಂಥ ಕುದುರೆಯನ್ನೇರಿ ಮುಸಲ್ಮಾನರ ದಂಡಾಳುಗಳ ಮಧ್ಯದಲ್ಲಿ ಹಾಯ್ದು ಹೊರಟನು. ಶಿವಾಜಿಯು ಓಡಿ ಹೋಗುವದನ್ನು ನೋಡಿ ಅವನನ್ನು ಸೆರೆಹಿಡಿಯಬೇಕೆಂದು ಎಲ್ಲ ದಂಡಾಳುಗಳು ಅವನ ಬೆನ್ನಟ್ಟಿನಡೆದರು.

ಯಾವನು ವೇದಗಳಿಗೂ ಸಿಲುಕದವನೋ ಅವನನ್ನು ಹಿಡಿಯಲು ಯಾರು ಸಮರ್ಥರಾಗುವರು? ಶಿವಾಜಿರೂಪೀ ಪಾಂಡುರಂಗನು ಮುಸಲ್ಮಾನರ ಕೈಗೆ ಸಿಕ್ಕೊ ಸಿಗದಂತೆ ನಟಿಸುತ್ತ ಒಂದು ಕಟ್ಟಡವಿಗೆ ಹೋದನು. ಅಲ್ಲಿಯ ವರೆಗೆ ಆ ದಂಡಾಳುಗಳು ಹಾಗೇ ಅವನನ್ನು ಬೆನ್ನಟ್ಟಿದರು. ಕೊನೆಗೆ ಆತನು ಅಲ್ಲಿ ಕಾಣದಂತಾದನು. ನಿರುಪಾಯರಾಗಿ ವಿಜಾಪುರದ ದಾರಿಯನ್ನು ಹಿಡಿದರು.

ಇತ್ತ ಕೀರ್ತನಶ್ರವಣಕ್ಕಾಗಿ ಕುಳಿತ ಶಿವಾಜಿಯು ದೇಹವು ಹೋಗಲಿ ಇರಲಿ. ಅದರ ಚಿಂತೆಯು ನನಗೇಕೆಂದು ನಿಶ್ಚಯದಿಂದ ಕೀರ್ತನಶ್ರವಣಕ್ಕಾಗಿ ಕುಳಿತುಕೊಂಡಿದ್ದನು. ಯಥಾಸಾಂಗವಾಗಿ ಕೀರ್ತನವು ಮುಗಿಯಲು, ಜನ ರೆಲ್ಲರೂ ಗುಡಿಯ ಹೊರಗೆಬಂದು ನೋಡುತ್ತಾರೆ; ಯಾವ ದಂಡಾಳುಗಳೂ ಅಲ್ಲಿರ ಲಿಲ್ಲ. ಜನರಿಗೆ ತುಂಬಾ ಆಶ್ಚರ್ಯವಾಯಿತು. ಶಿವಾಜಿಮಹಾರಾಜರಂತೂ ತುಂಬಾ ಕೌತುಕದಲ್ಲಿ ಬಿದ್ದರು. ಮುಂದೆ ಅವರಿಗೆ ನಿಜವಾದ ಸಂಗತಿಯು ಗೊತ್ತಾಗಲು ತುಕಾರಾಮಸಾಧುಗಳ ಭಕ್ತಿಯು ಎಂಥ ಬಲವಾದದ್ದೋ ಎಂದು ಕೊಂಡಾಡಿದರು.

ಪಾಂಡುರಂಗನಲ್ಲಿ ನಿಸ್ಸೀಮವಾದ ಭಕ್ತಿಯಿದ್ದಂತೆ ಆ ಸಾಧುಗಳಲ್ಲಿ ಖಿಡತರ ವಾದ ವೈರಾಗ್ಯವೂ ಇತ್ತು. ಅವರು ಬೀದಿಯಲ್ಲಿ ಬಿದ್ದ ಕಾಳುಗಳನ್ನು ಆರಿಸಿ ತಂದು ಉಪಜೀವಿಕೆಯನ್ನು ಸಾಗಿಸುತ್ತಿದ್ದರು. ಸಿಂಪಿಗರ ಮನೆಯ ಮುಂದೆ ಬಿದ್ದಿರುವ ಹೊಸ ಅರಿವೆಗಳ ತುಂಡುಗಳನ್ನು ತಂದು ಒಂದಕ್ಕೊಂದು ಕೂಡಿಸಿ ಹೊಲಿದು ಲಂಗೋಟಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಈ ರೀತಿ ದಾರಿ ದ್ರ್ಯವನ್ನು ಅನುಭವಿಸಿದರೂ ಅವರು ಪರಮಾತ್ಮನಲ್ಲಿ ಐಶ್ವರ್ಯವನ್ನು ಇಚ್ಛಿಸ ಲಿಲ್ಲ. ತುಕಾರಾಮಸಾಧುಗಳ ಈ ಘನತರವಾದ ಯೋಗ್ಯತೆಯನ್ನು ರಖಮಾ ಯಿಗೆ ತೋರಿಸಬೇಕೆಂದು ಪಾಂಡುರಂಗನು ಒಂದು ಹಂಚಿಕೆಯನ್ನು ಮಾಡಿದನು. ಏನೆಂದರೆ—ಪಾಂಡುರಂಗನು ರಖಮಾಯಿಯ ಕೈಯೊಳಗಿನ ರತ್ನಜಡಿತಕಂಕಣ ವನ್ನು ಇಸಗೊಂಡು ಅರಣ್ಯದಲ್ಲಿ ಕಟ್ಟಿಗೆಯನ್ನು ತರುವದಕ್ಕಾಗಿ ಹೋದ ತುಕಾ

ರಾಮಸಾಧುಗಳ ಕಣ್ಣಿಗೆ ಬೀಳುವಂತೆ ಹಾದಿಯಲ್ಲಿಟ್ಟು ಮೇಲೆ ಒಂದು ಕಟ್ಟಿಗೆಯ ಯನ್ನಿಟ್ಟನು. ತುಕಾರಾಮಸಾಧುಗಳು ಕಟ್ಟಿಗೆಯನ್ನು ಒಯ್ಯಬೇಕಾದರೆ ಗಿಡ ಗಳನ್ನು ಕಡಿಯುತ್ತಿರಲಿಲ್ಲ. ಹಾದಿಯ ಮೇಲೆ ೨|೪ ಕಟ್ಟಿಗೆಗಳು ಬಿದ್ದಿದ್ದರೆ ಅವನ್ನು ನಮ್ಮಂತೆ ಕಟ್ಟಿಗೆ ಆರಿಸುವವರು ಕೂಡಿಸಿ ಇಟ್ಟಿರಬಹುದೆಂದು ತಕ್ಕೊಳ್ಳುತ್ತಿರ ಲಿಲ್ಲ. ಕೇವಲ ಬಿಡಿಬಿಡಿಯಾಗಿ ಬಿದ್ದ ಕಟ್ಟಿಗೆಗಳನ್ನೇ ಆರಿಸಿಕೊಳ್ಳುತ್ತಿದ್ದರು. ಹೀಗೆ ಅವರು ಕಟ್ಟಿಗೆ ಆರಿಸುವಾಗ ಅವರಿಗೆ ಪಾಂಡುರಂಗನು ಬೀದಿಯಲ್ಲಿಟ್ಟ ಕಂಕಣವು ಕಂಡಿತು. ಪ್ರತ್ಯಕ್ಷ ರುಖಮಾಯಿಮಾತೆಯ ಕೈಯೊಳಗಿನ ಕಂಕ ಣವು ಕೇಳುವದೇನು? ಕಣ್ಣುಗಳು ಕುಕ್ಕುವಂತೆ ಹೊಳೆಯುತ್ತಿತ್ತು. ಸಾಧು ಗಳು ಆ ಕಂಕಣವನ್ನು ಕೈಯಿಂದ ಮುಟ್ಟಲಿಲ್ಲ. ಹಾಗೇ ಮುಂದಕ್ಕೆ ಹೋ ದರು. ಆಗ ಪಾಂಡುರಂಗನು ರುಖಮಾಯಿಯನ್ನು ಕುರಿತು—ಪ್ರಿಯೇ, ನೋಡಿದೆಯಾ! ನನ್ನ ಭಕ್ತರ ಯೋಗ್ಯತೆಯನ್ನು! ಎಷ್ಟು ದಾರಿದ್ರ್ಯವಿದ್ದರೂ ನನ್ನ ಚರಣಗಳ ಹೊರತು ನನ್ನ ಭಕ್ತರು ಏನನ್ನೂ ಬಯಸಲಾರರು. ವಿಷಯ ಗಳಲ್ಲಿ ಅವರಿಗೆ ಪೂರ್ಣ ವಿರಕ್ತಿಯಿರುವದು. ನೋಡು ನಿನ್ನ ಕಂಕಣವನ್ನು ತೃಣದಂತೆ ಭಾವಿಸಿ ಈ ಭಕ್ತರಾಜನು ಮುಂದಕ್ಕೆ ಸಾಗಿದನು. ಇಂಥ ಭಕ್ತರು ನನಗೆ ಪ್ರಾಣಕ್ಕಿಂತಲೂ ಪ್ರಿಯರಿರುವರು ಎಂದು ನುಡಿದನು.

ಪಾಂಡುರಂಗನು ಹೀಗೆ ಸಾಧುಗಳನ್ನು ಪರೀಕ್ಷಿಸಿ ಅವರಲ್ಲಿ ಎಂಥ ವೈರಾ ಗ್ಯವಿತ್ತೆಂಬದನ್ನು ಜಗತ್ತಿಗೆ ತೋರಿಸಿಕೊಟ್ಟನು. ಹೀಗೆ ತುಕಾರಾಮಸಾಧು ಗಳು ವಿರಕ್ತಶ್ರೇಷ್ಠರೂ ಮಹಾಭಗವದ್ಭಕ್ತರೂ ಆದ್ದರಿಂದ ಅವರ ಕೀರ್ತಿಯು ಹಾ ಹಾ ಅನ್ನುವಷ್ಟರಲ್ಲಿ ನಾಲ್ಕೂ ಕಡೆಗೂ ಹಬ್ಬಿತು. ಅವರ ಕೀರ್ತನಕ್ಕಂತೂ ಅಸಂಖ್ಯಾಕವಾಗಿ ಜನರು ಕೂಡಹತ್ತಿದರು. ಒಮ್ಮೆ ಕೀರ್ತನವು ನಡೆದಾಗ ಒಬ್ಬ ಸ್ತ್ರೀಯು ತನ್ನ ಸತ್ತ ಮಗುವೊಂದನ್ನು ತಂದು ತುಕಾರಾಮ ಸಾಧುಗಳ ಮುಂದೆ ಚೆಲ್ಲಿ ನುಡಿದಳೇನಂದರೆ—"ತುಕ್ಯಾ, ಸುಟ್ಟಿತು ನಿನ್ನ ಕೀರ್ತನವು; ನೀನು ಕೀರ್ತನ ಮಾಡಹತ್ತಿದಂದಿನಿಂದ ನನ್ನ ಗಂಡನು ಮನೆಯನ್ನೇ ನಂಬದವ ನಾಗಿದ್ದಾನೆ. ನಮ್ಮ ಮನೆಯಲ್ಲಿ ಆ ವಿಠ್ಠಲನ ಹೆಸರು ಕೂಡಾ ಗೊತ್ತಿರಲಿಲ್ಲ. ನಿನ್ನ ಸಂಗತಿಯಿಂದ ನನ್ನ ಗಂಡನಿಗೆ ವಿಠ್ಠಲನ ಹುಚ್ಚು ಹಿಡಿದು ಹೋಗಿದೆ. ಮನೆಯಲ್ಲಿ ಮಗನಿಗೆ ಜಡ್ಡಾಗಿದ್ದರೂ ಅದರ ಪರಿವೆಯಿಲ್ಲದೆ ನಿನ್ನ ಕೀರ್ತನಕ್ಕೆ ಬಂದಿರುವನು. ನಿನ್ನ ವಿಠ್ಠಲನ ಹುಚ್ಚು ನಮ್ಮ ಮನೆಯವರಿಗೆ ಹಿಡಿದದ್ದರಿಂದ ನನ್ನ ಮಗನು ಸತ್ತು ಹೋದನು. ಹೆಂಡರು ಮಕ್ಕಳನ್ನು ತಿರಿದುಣ್ಣಲಿಕ್ಕೆ

ಹಚ್ಚಿ ಗುಡಿಯಲ್ಲಿ ನಿಂತು ಕೀರ್ತನ ಮಾಡುವ ನಿನಗೆ ಏನೆನ್ನಬೇಕು? ನಿನ್ನಂಥ ನಿರ್ಲಜ್ಜನಿಂದ ನಮ್ಮ ಮನೆ ಹಾಳಾಯಿತು.''

ಈ ಮೇರೆಗೆ ಆ ಸ್ತ್ರೀಯು ನುಡಿಯಲು, ಶ್ರೋತೃಗಳು ಆಕೆಯನ್ನು ಕುರಿತು—ಮೂರ್ಖಳೇ, ತುಕಾರಾಮಸಾಧುಗಳ ನಿಂದೆಯನ್ನು ಮಾಡುವಿಯಾ? ಪರನಿಂದೆಯೇ ಪಾಪಮೂಲವಾದದ್ದು; ಅದರಲ್ಲಿ ಸಾಧುಸಂತರ ನಿಂದೆಯಂತೂ ಘೋರಪಾತಕಕ್ಕೆ ಕಾರಣವು; ಆದ್ದರಿಂದ ನಿಂದೆಯನ್ನು ಬಿಟ್ಟು ಮುಂದಿನ ವ್ಯವಸ್ಥೆಯನ್ನು ಮಾಡುವದಕ್ಕಾಗಿ ಈ ಶವವನ್ನು ತಕ್ಕೊಂಡು ಹೋಗು. ಇವರ ಹತ್ತರ ಸಂಜೀವಿನೀ ಮಂತ್ರವಿದೆಯೆಂದು ತಿಳಿದಿರುವಿಯೇನು ಎಂದು ನುಡಿದರು. ಆಕೆಯ ಬೈಗಳಗಳನ್ನೂ ಜನರ ಮಾತುಗಳನ್ನೂ ಕೇಳಿ ತುಕಾರಾಮಸಾಧುಗಳು ಜನರನ್ನು ಕುರಿತು—ಶ್ರೋತೃಗಳೇ, ಶ್ರೀ ಪಾಂಡುರಂಗನ ಮಂಗಲನಾಮವು ಸಂಜೀವಿನೀಮಂತ್ರಕ್ಕಿಂತಲೂ ಶ್ರೇಷ್ಠವಾದದ್ದು. ಅಮೃತಕ್ಕಿಂತಲೂ ಮಿಗಿಲಾದದ್ದು. ನೀವು ಈಗಲೇ ಈ ನಾಮಪ್ರಭಾವವನ್ನು ನೋಡಿರಿ ಎಂದು ನುಡಿದು ಎಲ್ಲರಿಗೂ ವಿಠ್ಠಲ-ವಿಠ್ಠಲ ಎಂದು ನಾಮಘೋಷಮಾಡಲು ಹೇಳಿದರು. ಕೂಡಲೆ ಶ್ರೋತೃ ಸಮುದಾಯವೆಲ್ಲ ವಿಠ್ಠಲ-ವಿಠ್ಠಲ ಎಂದು ನಾಮಘೋಷವನ್ನು ಮಾಡಲಾರಂಭಿಸಿತು. ಮೃದಂಗಗಳಲ್ಲಿ ಕೂಡ ವಿಠ್ಠಲನಾಮವು ಸ್ಪಷ್ಟವಾಗಿ ಕೇಳಬರಲಾರಂಭಿಸಿತು. ಆ ಸ್ಥಳವು ಕ್ಷಣದಲ್ಲಿ ನಾಮಮಂತ್ರಘೋಷದಿಂದ ತುಂಬಿಹೋಯಿತು. ಹೀಗೆ ಸರ್ವತ್ರದಲ್ಲಿ ನಾಮಘೋಷವೇ ಘೋಷವಾಗಲು ಆ ಸ್ತ್ರೀಯ ಮೃತಬಾಲಕನು ಮಲಗಿದವನು ಏಳುವಂತೆ ಎದ್ದು ಕುಳಿತನು. ಜನರಿಗೆ ಪರಮಾವಧಿಯಾದ ಆನಂದವಾಯಿತು. ಆ ಸ್ತ್ರೀಗಂತೂ ಮೊದಲು ಸಾಧುಗಳನ್ನು ನಿಂದಿಸಿದ್ದಕಾಗಿ ತುಂಬಾ ಪಶ್ಚಾತ್ತಾಪವಾಯಿತು. ಅವಳು ಮಗನನ್ನು ಮುದ್ದಾಡಿ ತುಕಾರಾಮ ಸಾಧುಗಳ ಕಾಲ್ಗೆರಗಿ ಕ್ಷಮೆಯನ್ನು ಯಾಚಿಸಿದಳು. ಯಾರು ನಿಂದಾಸ್ತುತಿಗಳೆರಡರಿಂದಲೂ ಭಿನ್ನವಾಗಿರುವರೋ ಯಾರಿಗೆ ನಿಂದಾಸ್ತುತಿಗಳೆರಡರಿಂದ ವಿಷಾದವಾಗಲಿ, ಹರ್ಷವಾಗಲಿ ಆಗುವದಿಲ್ಲವೋ ಅಂಥವರಿಗೆ ಆ ಸ್ತ್ರೀಯ ನಿಂದೆಯಿಂದ ಸಿಟ್ಟು ಬರುವದೆಂತು? ಸ್ತುತಿಯಿಂದ ಸಂತೋಷವಾಗುವದೆಂತು? ಆಗ ಅವರು ಲೌಕಿಕಾರ್ಥವಾಗಿ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ ಆ ಸ್ತ್ರೀಯನ್ನು ಕಳಿಸಿಕೊಟ್ಟರು. ಈ ಅದ್ಭುತ ಚಮತ್ಕಾರವನ್ನು ಪ್ರತ್ಯಕ್ಷ ಕಂಡವರು ತುಕಾರಾಮ ಸಾಧುಗಳನ್ನು

ಪ್ರತ್ಯಕ್ಷ ದೇವರೆಂದೇ ಭಾವಿಸಿದರು. ಇದರಿಂದ ಅವರ ಪ್ರಖ್ಯಾತಿಯು ವಿಶೇಷವಾಗಿ ಆಯಿತು.

ಈ ಸಂಗತಿಯು ಒದಗಿದ ಬಳಿಕ ತುಕಾರಾಮಸಾಧುಗಳು ಹಗಲುಹೊತ್ತಿನಲ್ಲಿ ಅರಣ್ಯದಲ್ಲಿದ್ದು, ರಾತ್ರಿಯಲ್ಲಿ ಊರಲ್ಲಿ ಬಂದು ಕೀರ್ತನಮಾಡಲಾರಂಭಿಸಿದರು. ಜನರು ತಮ್ಮ ಬಳಿಗೆ ಕಾಮನಾಪರರಾಗಿ ಬರಬಾರದೆಂಬದೇ ಅವರ ಉದ್ದೇಶವಾಗಿತ್ತು. ಹೀಗೆ ಅವರು ಅರಣ್ಯವನ್ನು ಸೇರಿಕೊಂಡದ್ದರಿಂದ ಎರಡು ತಿಂಗಳುಗಳು ಕ್ರಮಿಸಿದರೂ ಮನೆಗೆ ಹೋಗದಾದರು. ಮನೆಯಲ್ಲಿ ಅವರ ಹೆಂಡತಿಯು ಸಿಟ್ಟಿಗೆಂಕಿಯಾದಳು. ಗಂಡನು ತನ್ನನ್ನು ಬಿಟ್ಟುಬಿಟ್ಟನೆಂದು ಆಕೆಯು ಭಾವಿಸಿದಳು. ಸ್ತ್ರೀ ತ್ಯಾಗವು ಸ್ತ್ರೀಗೆ ಮಾನಹಾನಿಕರವಾದ್ದರಿಂದ ಆಕೆಯು ಈ ಒಗ್ಗೆ ಗಂಡನನ್ನು ಕೇಳಬೇಕೆಂದು ಹೊಂಚು ಹಾಕಿದಳು. ಒಂದು ದಿನ ತುಕಾರಾಮ ಸಾಧುಗಳು ಜಳಕಮಾಡಿ ಕೀರ್ತನಕ್ಕಾಗಿ ಗುಡಿಗೆ ಹೋಗುವದನ್ನು ಆಕೆಯು ನೋಡಿದಳು. ಕೂಡಲೆ ಆಕೆಯು ಗಡಿಬಿಡಿಯಿಂದ ಅವರ ಸನಿಯಕ್ಕೆ ಹೋಗಿ ಅವರ ಒಲ್ಲಿಯನ್ನು ಹಿಡಿದು ನುಡಿದಳೇನಂದರೆ—ನೀವು ಹೆಂಡತಿಯ ಹೊಟ್ಟೆಗೆ ಹಾಕಲಿಕ್ಕೆ ಅಸಮರ್ಥರಿದ್ದರೆ ಲಗ್ನವನ್ನಾದರೂ ಯಾಕೆ ಮಾಡಿಕೊಂಡಿ? ನಿಮಗೆ ಗುಡಿಗೆ ಹೋಗಿ ಕೀರ್ತನಮಾಡಲಿಕ್ಕೆ ಕೂಡುತ್ತದೆ. ಆದರೆ ಮನೆಗೆ ಬಂದು ಹೆಂಡರ ಮಕ್ಕಳ ಯೋಗಕ್ಷೇಮ ಕೇಳಲಿಕ್ಕೆ ಬರುವದಿಲ್ಲವೇ? ಇಂದು ಬಂದಾರು, ನಾಳೆ ಬಂದಾರು ಎಂದು ನಾನು ದಾರೀಕಾದೆನು ಜನಲಜ್ಜೆಗೆ ಸುಮ್ಮನಿದ್ದೆನು. ಆದರೆ ನೀವೇನು ಇದರ ವಿಚಾರವನ್ನು ಮಾಡಲಿಲ್ಲ. ಮನೆಯಲ್ಲಿ ಹುಡುಗರು ಉಪವಾಸ ಸಾಯುತ್ತಿವೆ; ಇದೇ ಏನು ನಿಮ್ಮ ಸಾಧುತ್ವವು?

ಹೀಗೆ ಹೆಂಡತಿಯು ನುಡಿಯಲು ತುಕಾರಾಮ ಸಾಧುಗಳು ನಕ್ಕು—ನಿಮ್ಮ ತಂದೆಯು ನನಗೆ ನಿನ್ನನ್ನು ಕೊಡಬೇಕಾದರೆ ನನ್ನನ್ನು ನೋಡಿ ಕೊಟ್ಟಿಲ್ಲ. ನನ್ನ ತಾಯಿ ತಂದೆಗಳ ಮೇಲೆ ವಿಶ್ವಾಸವಿಟ್ಟು ಕೊಟ್ಟಿರುವರು. ಆದ್ದರಿಂದ ನಾನು ನಿನ್ನ ಹೊಟ್ಟೆಗೆ ಹಾಕಲು ಸಂಬಂಧವಿಲ್ಲ. ನನ್ನ ತಾಯಿ-ತಂದೆಗಳನ್ನೇ ಕೇಳಿಕೋ ಎಂದು ನುಡಿದರು. ಗಂಡನ ಈ ಮಾತುಗಳ ರಹಸ್ಯವನ್ನು ತಿಳಿಯದೆ ಆ ಸ್ತ್ರೀಯು ಸಂತಾಪದಿಂದ—ನಿಮ್ಮ ತಂದೆ-ತಾಯಿಗಳು ಚಿತೆಯಲ್ಲಿ ಸುಟ್ಟು ಬೂದಿಯಾಗಿರುವರು. ಅವರು ನನ್ನ ಹೊಟ್ಟೆಗೆ ಹಾಕಬಹುದೇ? ನೀವು ಜೀವಂತ ಇದ್ದದರಿಂದ ನೀವು ನನ್ನ ಹೊಟ್ಟೆಗೆ ಹಾಕದೆ ಇನ್ನಾರು ಹಾಕಬೇಕು? ಎಂದಳು.

ಆಗ ಸಾಧುಗಳು ನಕ್ಕು—ನನ್ನ ತಾಯಿ-ತಂದೆಗಳು ಎಂದೂ ಸಾಯತಕ್ಕವರಲ್ಲ; ಅವರು ಅವಿನಾಶಿಗಳಿರುವರು. ಹೀಗಿದ್ದು ನೀನು ನನ್ನ ತಾಯಿ-ತಂದೆಗಳು ಸತ್ತಿರುವರೆಂದು ಅನ್ನುವಿಯಲ್ಲ! ರಖುಮಾಯಿ-ಪಾಂಡುರಂಗ ಇವರೇ ನನ್ನ ತಾಯಿ-ತಂದೆಗಳು. ನೀನು ದಿನಾಲು ಅವರನ್ನು ಭಜಿಸು; ಅಂದರೆ ನಿನಗೆ ಯಾತಕ್ಕೂ ಕೊರತೆಯಾಗುವದಿಲ್ಲ. ಮನೆಯಲ್ಲಿ ಕಾಮಧೇನುವನ್ನು ಇಟ್ಟು ಕೊಂಡು ಮಂದಿಯ ಮನೆಗೆ ಮಜ್ಜಿಗೆ ಭಿಕ್ಷಕ್ಕೆ ಹೋದರೆಂಬಂತೆ ನಿನ್ನ ಸ್ಥಿತಿ ಯಾಗಿದೆ. ಜಗತ್ತನ್ನೇ ಸಂರಕ್ಷಿಸುವ ಸ್ವಾಮಿಯು ನಮ್ಮ ಪಿತೃಸ್ಥಾನದಲ್ಲಿರಲು, ಗೇಣು ಹೊಟ್ಟೆಗಾಗಿ ಚಿಂತಿಸುವದು ನ್ಯಾಯವೇ? ಎಂದು ಆಕೆಗೆ ಉಪದೇಶ ಮಾಡಿ ದಿನಾಲು ಪಾಂಡುರಂಗನ ಭಜನೆ ಮಾಡುವಂತೆ ಆಕೆಯಿಂದ ವಚನವನ್ನು ತಕ್ಕೊಂಡು ಮನೆಗೆ ಹೋದರು. ತುಕಾರಾಮ ಸಾಧುಗಳು ಪುನಃ ಮನೆ ಯನ್ನು ಸೇರಿದರೆಂದು ನಿಂದಕರು ಕುಚೇಷ್ಟೆಗಳನ್ನಾರಂಭಿಸಿದರು. ಸಾಧುಗಳು ಹೆಂಡತಿಗೆ ಮರುಳಾದರೆಂದೂ, ಕಲಿಯುಗದ ಸಾಧುಗಳು ಹೆಣ್ಣಿಗೆ ಮರುಳಾಗು ವವರೆಂದೂ ಆಡಿಕೊಳ್ಳಲಾರಂಭಿಸಿದರು. ಜನರ ಈ ನಿಂದೆಗೆ ಅವರು ಕಿವಿ ಗೊಡಲಿಲ್ಲ. ಸಾಂಸಾರಿಕರಿಗಾಗಲಿ, ಪಾರಮಾರ್ಥಿಗಳಿಗಾಗಲಿ, ಭಗವದ್ಭಕ್ತರಿ ಗಾಗಲಿ ನಿಂದಕರು ಇದ್ದೇ ಇರುವರು. ಅವರು ಜನರ ನಿಂದೆಯನ್ನು ಕೇಳಿ ಅಂಜುತ್ತ ಹೋದರೆ ಅವರು ಊರು ಬಿಟ್ಟೇ ಹೋಗಬೇಕಾದೀತು; ಜನರ ನಿಂದೆಯ ಕಡೆಗೆ ಲಕ್ಷಕೊಡದೆ ಸನ್ಮಾರ್ಗದಿಂದ ನಡೆಯುವದು ಪ್ರತಿಯೊಬ್ಬನ ಕರ್ತವ್ಯವಾಗಿರುವದು. ಈ ಸಾಮಾನ್ಯ ನಿಯಮದಂತೆ ತುಕಾರಾಮ ಸಾಧುಗ ಳಾದರೂ ತಮ್ಮ ನಿತ್ಯನೇಮದಂತೆ ವರ್ತಿಸಲಾರಂಭಿಸಿದರು. ಅವರು ಹೆಂಡತಿಗೆ ಜ್ಞಾನೋಪದೇಶಮಾಡಿ ಆಕೆಯಲ್ಲಿ ಪಾಂಡುರಂಗನ ಬಗ್ಗೆ ಭಕ್ತಿಯು ಅಭಿವೃದ್ಧಿ ಯಾಗುವಂತೆ ಮಾಡಿದರು.

ಸಾಧುಗಳ ಹೆಂಡತಿಯು ದೈವಭಕ್ತಳಾದದ್ದು ದುರ್ಜನರ ಮನಸ್ಸಿಗೆ ಬರ ಲಿಲ್ಲ, ಅವರು ಮನಸ್ಸಿನಲ್ಲಿಯೇ ತಳಮಳಿಸಲಾರಂಭಿಸಿದರು. ಹೀಗಿರಲು ತುಕಾರಾಮ ಸಾಧುಗಳ ಮನೆಗೆ ಒಂದು ದಿನ ಬೆಳಿಗ್ಗೆ ರಖುಮಾಯಿಯು ಹೊಲ ತಿಯ ವೇಷದಿಂದ ಬಂದು ನನ್ನ ಮನೆಯನ್ನು ಕಳ್ಳರು ಹೊಕ್ಕು, ಸೀರೆ-ಕುಪ್ಪಸ ಗಳನ್ನು ಒಯ್ದುದ್ದರಿಂದ ನನಗೆ ಉಟ್ಟುಕೊಳ್ಳಲಿಕ್ಕೆ ಸೀರೆಯಿಲ್ಲ. ಒಂದು ಸೀರೆ ಯನ್ನು ಕೊಡಿರಿ, ಎಂದು ಯಾಚಿಸಿದಳು. ಪರಮ ದಯಾಳುಗಳಾದ ತುಕಾ ರಾಮಸಾಧುಗಳು ಅತ್ತಿತ್ತ ನೋಡಿದರು. ಎದುರಿಗೆ ಹೆಂಡತಿಯು ಉಡುವ

ದೊಂದು ಫಡಕಿಯು ಬಿದ್ದಿತ್ತು. ಕೂಡಲೆ ಅದನ್ನು ಆಕೆಗೆ ದಾನಕೊಟ್ಟರು. ತುಕಾರಾಮ ಸಾಧುಗಳು ಹೊಲತಿಗೆ ಸೀರೆ ಕೊಟ್ಟದ್ದನ್ನು ದುರ್ಜನರು ನೋಡಿದರು. ಸಾಧುಗಳು ಗುಡಿಗೆ ಹೋಗಲು, ದುರ್ಜನರು ಮನೆಯನ್ನು ಸೇರಿ ತುಕಾರಾಮ ಸಾಧುಗಳು ಹೊಲತಿಗೆ ಸೀರೆಯನ್ನು ಕೊಟ್ಟ ಸುದ್ದಿಯನ್ನು ಅವರ ಹೆಂಡತಿಗೆ ಹೇಳಿದರು. ಆ ಸ್ತ್ರೀಗೆ ಉಡಲಿಕ್ಕೆ ಎರಡೇ ಫಡಕಿಗಳಿದ್ದವು. ಒಂದನ್ನು ಆಕೆಯು ಉಟ್ಟಿದ್ದಳು. ಮತ್ತೊಂದನ್ನು ಮನೆಯಲ್ಲಿಟ್ಟಿದ್ದಳು. ಅದನ್ನೇ ಸಾಧುಗಳು ದಾನಮಾಡಿದ್ದರು. ಆದ್ದರಿಂದ ಆಕೆಗೆ ಆ ಸುದ್ದಿಯನ್ನು ಕೇಳಿ ಸಂತಾಪವಾಯಿತು. ದುರ್ಜನರ ಉಪದೇಶದಿಂದ ಆಕೆಯ ದೈವಭಕ್ತಿಯೆಲ್ಲ ಹೊರಟು ಹೋಯಿತು. ಅವಳು—ಗಂಡನ ಮಾತು ಕೇಳಿ ಕೆಟ್ಟೆನು. ನಮಗೆ ಇಷ್ಟೊಂದು ದಾರಿದ್ರ್ಯವು ಗಂಡನ ಮಾತು ಕೇಳಿದ್ದರಿಂದಲೇ ಪ್ರಾಪ್ತವಾಯಿತು, ಎಂದು ಘೋರ ಚಿಂತೆಯಲ್ಲಿ ಬಿದ್ದಳು. ದಾರಿದ್ರ್ಯವನ್ನು ನೆನಿಸಿ ಆಕೆಗೆ ಹೆಚ್ಚು ಹೆಚ್ಚು ಸಂತಾಪವಾಗಲಾರಂಭಿಸಿತು. ಆಕೆಯು ಆ ಸಂತಾಪದಲ್ಲಿ ಗಂಡನನ್ನೂ, ಪಾಂಡುರಂಗನನ್ನೂ ಬೈದು ಬೈದು ಮುಚ್ಚಿದಳು. ಕೊನೆಗೆ ಅವಳು ಪಾಂಡುರಂಗನ ಚರಣಗಳನ್ನು ಒಡೆದು ಹಾಕಬೇಕೆಂದು ಒಂದು ದೊಡ್ಡ ಬಂಡೆಯನ್ನು ಹೊತ್ತುಕೊಂಡು ಗುಡಿಗೆ ನಡೆದಳು.

ತುಕಾರಾಮಸಾಧುಗಳ ಹೆಂಡತಿಯು ಬಂದು ತನ್ನ ಚರಣಗಳನ್ನು ಒಡೆದು ಹಾಕುವಳೆಂದು ಗುಡಿಯಲ್ಲಿದ್ದ ಪಾಂಡುರಂಗನು ನಡುಗಲಾರಂಭಿಸಿದನು. ಆಗ ರಖುಮಾಯಿಯು ಹೀಗೇಕೆ ನಡುಗುವಿರೆಂದು ಕೇಳಿದಳು. ಆಗ ಪಾಂಡುರಂಗನು ನಡೆದ ಸಂಗತಿಯನ್ನೆಲ್ಲ ಹೇಳಿದನು. ರಖುಮಾಯಿಗೂ ಚಿಂತೆಯುತ್ಪನ್ನವಾಯಿತು. ಅಷ್ಟರಲ್ಲಿ ತುಕಾರಾಮಸಾಧುಗಳ ಹೆಂಡತಿಯು ರೌದ್ರವನ್ನು ತಾಳಿ ಗುಡಿಗೆ ಬಂದಳು. ಹೆಂಡತಿಯ ಈ ಆವೇಶವನ್ನು ನೋಡಿ ಸಾಧುಗಳು ಈಕೆಯು ಪಾಂಡುರಂಗನ ಚರಣಗಳನ್ನು ಒಡೆದು ಹಾಕುವದಕ್ಕಾಗಿಯೇ ಹೀಗೆ ದುಂಡಿಯನ್ನು ಹೊತ್ತುಕೊಂಡು ಬಂದಿರಬಹುದೆಂದು ತರ್ಕಿಸಿದರು. ಪಾಂಡುರಂಗನ ವಿಷಯವಾಗಿ ಅವರ ಅಂತಃಕರಣದಲ್ಲಿ ವಿಶೇಷ ಮಮತೆಯಿದ್ದದರಿಂದ ಹೆಂಡತಿಯೂ ದುಂಡಿಯನ್ನು ತಮ್ಮ ಕಾಲಮೇಲೆ ಹಾಕಿಸಿಕೊಂಡು ಪಾಂಡುರಂಗನನ್ನು ಉಳಿಸಬೇಕೆಂದು ಎಣಿಕೆಹಾಕಲಾರಂಭಿಸಿದರು. ತನ್ನ ವಿಷಯವಾಗಿ ಭಕ್ತನಲ್ಲಿ ಚಿಂತೆಯುತ್ಪನ್ನವಾಗಲು ಪಾಂಡುರಂಗನಿಗೆ ಸ್ವಲ್ಪ ಸಮಾಧಾನವಾಯಿತು. ಅಷ್ಟರಲ್ಲಿ ಆ ಸ್ತ್ರೀಯು ದುಂಡಿಯನ್ನು ಹೊತ್ತುಕೊಂಡು ಗುಡಿಒಳಕ್ಕೆ ಬಂದಳು. ತುಕಾ

ರಾಮಸಾಧುಗಳು ಧಾವಿಸಿ ಬರುವಷ್ಟರಲ್ಲಿ ಆಕೆಯು ಗರ್ಭಗುಡಿಯನ್ನು ಸೇರಿದಳು. ಇನ್ನು ಆಕೆಯು ದೇವರ ಕಾಲುಗಳ ಮೇಲೆ ಆ ಬಂಡೆಗಲ್ಲನ್ನು ಹೇರತಕ್ಕವಳು. ಅಷ್ಟರಲ್ಲಿ ರಖುಮಾಯಿಯು ಬಾಗಿಲವನ್ನಿಕ್ಕಿ ಸಾಧುಗಳ ಹೆಂಡತಿಯ ಎದುರಿಗೆ ನಿಂತು ಹೀಗೇಕೆ ಮಾಡುವಿಯೆಂದು ಕೇಳಿದಳು. ಆಗ ಆ ಸ್ತ್ರೀಯು ತಮ್ಮ ದಾರಿದ್ರ್ಯವನ್ನು ವರ್ಣಿಸಿ ಹೇಳಿದಳು. ಆಕೆಯು ಹೇಳಿದ ದಾರಿದ್ರ್ಯದಿಂದ ರಖುಮಾಯಿಗೆ ತುಂಬಾ ಕಷ್ಟವಾಯಿತು. ಆಕೆಯು ಸಾಧುಗಳ ಹೆಂಡತಿಯನ್ನು ಸಮಾಧಾನಪಡಿಸಿ ಆಕೆಗೆ ಸೀರೆ-ಕುಪ್ಪಸಗಳನ್ನೂ ಒಂದು ಹಿಡಿ ಹೊನ್ನನ್ನೂ ಕೊಟ್ಟು, ಇವು ತೀರುತ್ತಲೇ ಮತ್ತೆ ಒಳಗೆ ಬಾ, ಅಂದರೆ ಮತ್ತೆ ಕೊಡುತ್ತೇನೆ ಎಂದು ಹೇಳಿದಳು. ಬಡತನವು ಬಯಲಾದ್ದರಿಂದ ಹಿಗ್ಗಿ ಗುಡಿಯ ಬಾಗಿಲ ತೆರೆದು ಮನೆಯ ಕಡೆಗೆ ಹೊರಟಳು. ಹೆಂಡತಿಯು ದೇವರಿಂದ ವಸ್ತ್ರಗಳನ್ನೂ ಹೊನ್ನನ್ನೂ ಇಸಗೊಂಡದ್ದು ತುಕಾರಾಮಸಾಧುಗಳ ಮನಸ್ಸಿಗೆಬರಲಿಲ್ಲ. ಅವರು ಹೆಂಡತಿಯನ್ನು ಕುರಿತು—ಇದೇನು ಕೆಲಸವನ್ನು ಮಾಡಿದೆ? ರಖುಮಾಯಿಯಿಂದ ಇಷ್ಟು ಪದಾರ್ಥಗಳನ್ನು ಇಸಗೊಂಡದ್ದು ಉಚಿತವಾಗಲಿಲ್ಲ! ಹೊಲದಲ್ಲಿ ಬೆಳೆಯು ನಿಂತಿರುವಾಗ ಅದು ಮಾಗದೆ ಇದ್ದಾಗ ಕೊಯ್ದುಬಿಟ್ಟಂತೆ ನಿನ್ನ ಕೆಲಸವಾಯಿತು. ಪಾಂಡುರಂಗನ ಕೃಪೆಯಿಂದ ನೀನು ಮಹತ್ತರ ಪದವಿಯನ್ನು ಪಡೆಯುತ್ತಿದ್ದೆ. ಆದರೆ ಈಗ ನೀನು ಹೊನ್ನು ಇಸಗೊಂಡದ್ದರಿಂದ ಅದೆಲ್ಲ ವ್ಯರ್ಥವಾಯಿತು. ಹೀಗೆ ಮಾಡಬೇಡ; ಮನೆಗೆ ಹೋಗಿ ಆ ವಸ್ತ್ರ-ಹೊನ್ನು ಮೊದಲಾದವುಗಳನ್ನು ದಾನಮಾಡಿಬಿಡು. ಪಾಂಡುರಂಗನ ಚರಣಗಳ ಹೊರತು ಅನ್ಯತ್ರ ಮನಸ್ಸುಮಾಡದಿರುವದೇ ಭಗವದ್ಭಕ್ತರಿಗೆ ಯೋಗ್ಯವಾದದ್ದು, ಎಂಬದಾಗಿ ಉಪದೇಶ ಮಾಡಿದರು. ಆಕೆಯು ಎಷ್ಟು ಮಾಡಿದರೂ ಸ್ತ್ರೀಯು; ಗಂಡನ ಮಾತಿಗೆ ಒಪ್ಪಲೇಬೇಕಾಯಿತು. ಬಳಿಕ ಆಕೆಯು ಬ್ರಾಹ್ಮಣರನ್ನು ಕರೆದು ಆ ಹೊನ್ನು ವಸ್ತ್ರ ಮೊದಲಾದವುಗಳನ್ನು ದಾನಮಾಡಿ ಪಾಂಡುರಂಗನ ಭಜನೆ ಮಾಡತೊಡಗಿದಳು. ಹೆಂಡತಿಯು ಪಾಂಡುರಂಗನ ಭಜನೆಗೆ ತೊಡಗಿದ್ದನ್ನು ನೋಡಿ ತುಕಾರಾಮ ಸಾಧುಗಳಿಗೆ ಪರಮ ಸಂತೋಷವಾಯಿತು.

ಸಮರ್ಥ ರಾಮದಾಸರೂ, ತುಕಾರಾಮ ಸಾಧುಗಳೂ, ಚಿಂಚವಡದ ಮೋರಯಾ ಗೋಸಾವಿಗಳೂ ಸಮಕಾಲೀನರಾಗಿದ್ದರು. ಗೋಸಾವಿಗಳು ಗಣಪತಿಯ ಉಪಾಸಕರು; ಸಮರ್ಥರು ರಾಮೋಪಾಸಕರು; ತುಕಾರಾಮ ಸಾಧುಗಳು ಪಾಂಡುರಂಗನ ಉಪಾಸಕರು. ಈ ಮೂವರೂ ಒಮ್ಮೆ ಚಿಂಚವಡದಲ್ಲಿ

ಕೂಡಿದರು. ಮೋರಯಾಗೋಸಾವಿಗಳಿಗೆ ತಮ್ಮ ತಮ್ಮ ಉಪಾಸ್ಯದೇವತೆಸಹಿತವಾಗಿ ಈ ದಿನ ಭೋಜನ ಮಾಡಬೇಕೆಂಬ ಇಚ್ಛೆಯಾಯಿತು. ಸಮರ್ಥರು-ಗೋಸಾವಿಗಳೂ ಕೂಡಿ ತುಕಾರಾಮಸಾಧುಗಳಿಗೆ ಪಾಂಡುರಂಗನನ್ನು ಭೋಜನಕ್ಕೆ ಕರೆಯಲು ಸೂಚಿಸಿದರು. ಸಾಧುಗಳು ಅದರಂತೆ ಮಾಡಲು ರಖುಮಾಯಿಸಹಿತನಾದ ಪಾಂಡುರಂಗನು ಎಲೆಯ ಮೇಲೆ ಬಂದು ಕುಳಿತುಕೊಂಡನು. ಅದರಂತೆ ಗೋಸಾವಿಗಳು ಗಣಪತಿಯನ್ನು ಕರೆದರು. ಸಮರ್ಥರು ಶ್ರೀರಾಮನ ಪ್ರಾರ್ಥನೆ ಮಾಡಲು ಆತನು ಸೀತಾಮಾತೆಯೊಡನೆ ಸಮರ್ಥರ ಬಳಿಯಲ್ಲಿ ಬಂದು ಕುಳಿತನು. ಸರ್ವರೂ ತಮ್ಮ ತಮ್ಮ ಉಪಾಸ್ಯದೈವತಗಳೊಡನೆ ಆನಂದದಿಂದ ಭೋಜನ ಮಾಡಿದರು. ಈ ಅದ್ಭುತ ಸಂಗತಿಯನ್ನು ಕೇಳಿ ಸಮಸ್ತರಿಗೂ ಆಶ್ಚರ್ಯವಾಯಿತು.

ಈ ಮೇರೆಗೆ ತುಕಾರಾಮಸಾಧುಗಳು ಹಲವು ಚಮತ್ಕಾರಗಳನ್ನು ತೋರಿಸಿ ಜನರನ್ನು ಸನ್ಮಾರ್ಗಕ್ಕೆ ಹಚ್ಚಿದರು ನಾಮದೇವರು ಸಂಕಲ್ಪ ಮಾಡಿದ ಅಭಂಗಗಳನ್ನು ಪೂರ್ಣಗೊಳಿಸಿ ಭಾವಿಕರ ಭಜನೆಗೆ ಸಾಧನ ಮಾಡಿಕೊಟ್ಟರು. ಈ ಪ್ರಕಾರ ಆಚರಿಸಿ ಅವರು ಅವತಾರಸಮಾಪ್ತಿಗಾಗಿ ಇಚ್ಛಿಸಿದರು. ಅವರು ಎಲ್ಲ ಸಾಧುಗಳಂತೆ ಜಡದೇಹವನ್ನು ತ್ಯಜಿಸಲಿಲ್ಲ. ಒಂದು ದಿನ ಕೀರ್ತನಕ್ಕೆ ನಿಂತಾಗ ಈ ದಿನ ನಾವು ವೈಕುಂಠಕ್ಕೆ ಹೋಗುವೆವು ಬರತಕ್ಕವರು ಬರಬೇಕುಎಂದು ಜನರಿಗೆ ಹೇಳಿದರು. ಆದರೆ ವೈಕುಂಠಕ್ಕೆ ಹೋಗುವ ಇಚ್ಛೆಯು ಯಾರಿಗೂ ಆಗಲಿಲ್ಲ. ಆಗ ಸಾಧುಗಳು ಮಾತಮಾತನಾಡುತ್ತ ಸದೇಹವಾಗಿ ಅಂತರಿಕ್ಷದಲ್ಲಿ ಹೊರಟರು. ಸಾಧುಗಳು ಮೇಲಕ್ಕೇರಹತ್ತಲು ಜನರು ನಾನು ಬರುತ್ತೇನೆ ನಾನು ಬರುತ್ತೇನೆ ಎಂದು ಅನ್ನಲಾರಂಭಿಸಿದರು. ಆಗ ಸಾಧುಗಳು ಇನ್ನು ನಿಮಗೆ ಬರಲಿಕ್ಕೆ ಸಾಧ್ಯವಿಲ್ಲ; ಪಾಂಡುರಂಗನ ಭಜನೆ ಮಾಡುತ್ತಲಿರ್ರಿ ಎಂದು ನುಡಿದು ಕೈಯೊಳಗಿನ ತಾಳಗಳನ್ನು ನೆಲದ ಮೇಲೆ ಚಲ್ಲಿ ಅಂತರಿಕ್ಷದಲ್ಲಿ ಕಾಣದಂತಾದರು. ಸರ್ವರೂ ಸಾಧುಗಳ ಜಯಜಯಕಾರ ಮಾಡುತ್ತ ಖಿನ್ನಮನಸ್ಸಿನಿಂದ ಮನೆಗೆ ಹೊರಟುಹೋದರು. ಪ್ರಲ್ಹಾದಾಂಶರೂ ಮಹಾಭಗವದ್ಭಕ್ತರೂ ಆದ ತುಕಾರಾಮಸಾಧುಗಳ ಮಂಗಲಚರಿತ್ರವನ್ನು ಪಠಣ ಮಾಡುವವರು ಧನ್ಯರೇ ಸರಿ!



# ಶೇಖಮಹಮ್ಮದ.

ಚಾಂಭಾರಗೊಂದಿ ಎಂಬಲ್ಲಿ ಶೇಖಮಹಮ್ಮದನೆಂಬ ದೊಡ್ಡ ಭಕ್ತನಿದ್ದನು. ಆತನು ಅತ್ಯಂತ ಸಾತ್ವಿಕನೂ ಪರೋಪಕಾರನಿರತನೂ ಆಗಿದ್ದನು. ಆತನು ಸರ್ವದಾ ಭಗವದ್‌ಭಕ್ತಿಯಲ್ಲಿ ತಲ್ಲೀನನಾಗಿ ಕೀರ್ತನದಿಂದ ಜನರಿಗೆ ಸದ್ಬೋಧ ಮಾಡುತ್ತಲಿದ್ದನು. ಒಂದು ದಿನ ಅವನು ಕೀರ್ತನ ಮಾಡುತ್ತಲಿದ್ದಾಗ ಒಮ್ಮೆಲೆ ಉತ್ಥಾಣಮಾಡಿ ಅಲ್ಲಿದ್ದ ಮಂಟಪಕ್ಕೆ ವಸ್ತ್ರದಿಂದ ಹೊಡೆದನು. ಈತನು ಹೀಗೇಕೆ ಮಾಡಿದನೆಂಬ ಕಾರಣವು ಶ್ರೋತೃಗಳಿಗೆ ತಿಳಿಯಲಿಲ್ಲ. ಆಗ ಅವರು ಶೇಖಮಹಮ್ಮದನನ್ನು ಕುರಿತು ಇಂತು ಪ್ರಶ್ನಮಾಡಿದರು—"ಮಹಾರಾಜ, ತಾವು ಹೀಗೇಕೆ ಉತ್ಥಾಣಮಾಡಿದಿರಿ?"

ಈ ಪ್ರಶ್ನೆಯನ್ನು ಕೇಳಿ ಶೇಖಮಹಮ್ಮದನು ನುಡಿದನೇನಂದರೆ ಈ ಸಮಯದಲ್ಲಿ ಮಹಾಭಗವದ್‌ಭಕ್ತರಾದ ತುಕಾರಾಮಸಾಧುಗಳು ದೇಹೂಗ್ರಾಮದಲ್ಲಿ ಕೀರ್ತನ ಮಾಡುವರು, ಅವರು ಕೀರ್ತನದಲ್ಲಿ ಅತಿಲೀನರಾಗಿರುವರು. ಅವರಿಗೆ ದೇಹಭಾನವು ಇರುವದಿಲ್ಲ. ಅವರ ಸಂಪೂರ್ಣ ಚಿತ್ತವೆಲ್ಲ ಶ್ರೀಪಾಂಡುರಂಗನ ಚರಣದಲ್ಲಿ ಲೀನವಾಗಿರುವದು. ಇಂಥ ಸ್ಥಿತಿಯಲ್ಲಿ ದೀವಟಿಗೆ ಹಿಡಿದವನು ಕೈಯನ್ನು ಸ್ವಲ್ಪ ಮೇಲಕ್ಕೆ ಮಾಡಿದ್ದರಿಂದ ಮಂಟಪಕ್ಕೆ ಬೆಂಕಿಯು ಹತ್ತಿತು. ಅದನ್ನು ನಾನು ಇಲ್ಲಿಂದಲೇ ಕಂಡೆನು. ತುಕಾರಾಮಸಾಧುಗಳ ಕೀರ್ತನಕ್ಕೆ ವಿರಸವುಂಟಾಗಬಾರದೆಂದು ಇಲ್ಲಿಂದಲೇ ಬೆಂಕಿಯನ್ನು ಆರಿಸಿದೆನು."

ಈ ಮೇರೆಗೆ ಶೇಖಮಹಮ್ಮದನು ನುಡಿಯಲು ಜನರ ವಿಶ್ವಾಸವು ಆತನ ಮಾತಿನ ಮೇಲೆ ಕೂಡ್ರದಾಯಿತು. ಶ್ರೋತೃಗಳ ಮನಸ್ಸಿನಲ್ಲಿ ಹಲವು ಬಗೆಯ ಶಂಕೆಗಳು ಬರಲುಪಕ್ರಮಿಸಿದವು. ಆಗ ಅವರು ಮತ್ತೆ ಪ್ರಶ್ನಮಾಡಿದರೇನಂದರೆ—ತುಕಾರಾಮಸಾಧುಗಳ ಕೀರ್ತನವೆಂದರೆ ಸಾವಿರಾರು ಜನರು ಕೂಡುವರು. ಮಂಟಪಕ್ಕೆ ಬೆಂಕಿಹತ್ತಿದರೆ ಅಲ್ಲಿದ್ದ ಜನರು ಯಾಕೆ ಆರಿಸಲಿಲ್ಲ?

ಈ ಪ್ರಶ್ನೆಗೆ ಶೇಖಮಹಮ್ಮದನು – ತುಕಾರಾಮ ಸಾಧುಗಳಂತೆ ಶ್ರೋತೃಗಳೂ ದೇಹಭಾನವಿವರ್ಜಿತರಾಗಿರುವರು. ಕೀರ್ತನವು ಒಳ್ಳೇ ಭರಕ್ಕೆ ಬಂದದ್ದರಿಂದ ಜನರೆಲ್ಲರೂ ದೇಹಭಾನಶೂನ್ಯರಾಗಿ ಕುಳಿತಿರುವರು. ಯಾರಿಗೂ ಯಾವದರ ಕಡೆಗೂ ಲಕ್ಷ್ಯವಿರುವದಿಲ್ಲ. ಆ ಮಹಾನುಭಾವರ ಕೀರ್ತನವೇ ಅಷ್ಟೊಂದು

ಸರಸವಾದದ್ದು; ಶ್ರೋತೃಗಳು ದೇಹಭಾನ ಮರೆತದ್ದೇನೂ ಆಶ್ಚರ್ಯವಲ್ಲ. ತುಕೋಬನ ನಿರ್ಮಲವಾದ ಭಕ್ತಿಯನ್ನು ನೋಡಿ ಪಾಂಡುರಂಗನೂ ದೇಹ ಭಾನ ಮರೆತಿರುವನು. ದೇವಭಕ್ತರು ಏಕರೂಪರಾಗಿರುವರು. ಆದ್ದರಿಂದ ಹತ್ತಿದ ಬೆಂಕಿಯನ್ನು ಆರಿಸಲಿಕ್ಕೆ ಯಾರ ಲಕ್ಷ್ಯದಲ್ಲಿಯೂ ಬರಲಿಲ್ಲ. ಇಷ್ಟೇ ಅಲ್ಲ; ಬೆಂಕಿ ಹತ್ತಿದ್ದನ್ನು ಕೂಡಾ ಯಾರೂ ನೋಡಿರುವದಿಲ್ಲ. ಹೀಗೆ ಇದದ್ದ ರಿಂದ ನಾನೇ ಆ ಬೆಂಕಿಯನ್ನು ಆರಿಸಬೇಕಾಯಿತು. ಈ ಸಂಗತಿಯು ನಿಜವೆಂ ಬುದಕ್ಕೆ ನೀವು ದೇಹೂ ಗ್ರಾಮಕ್ಕೆ ಹೋಗಿ ನೋಡಿ ಬರಬಹುದು,. ಎಂದು ನುಡಿದರು. ಶ್ರೋತೃಗಳು ಆಶ್ಚರ್ಯದಲ್ಲಿ ಬಿದ್ದರು. ಅವರಿಗೆ ಇದರ ಇಂಗಿತವೇ ತಿಳಿಯದಾಯಿತು. ಆಗ ಅವರು ಒಬ್ಬ ಮನುಷ್ಯನ ಕೈಯಲ್ಲಿ ದೇಹೂಗ್ರಾಮದ ಗೌಡನಿಗೆ ಒಂದು ಪತ್ರವನ್ನು ಕೊಟ್ಟು ಕಳಿಸಿದರು. ಇಂಥ ದಿವಸ ನಿಮ್ಮಲ್ಲಿ ಉಂಟಾದ ವಿಶೇಷ ಸಂಗತಿಯನ್ನು ತಿಳಿಸಬೇಕೆಂದು ಅದರಲ್ಲಿ ಬರೆದಿತ್ತು. ಆ ಪತ್ರ ವನ್ನು ನೋಡಿ ದೇಹೂಗ್ರಾಮದ ಗೌಡನು ಇಂತು ಉತ್ತರ ಬರೆದನು. ಏನೆಂ ದರೆ:—"ಆ ದಿವಸ ತುಕಾರಾಮ ಸಾಧುಗಳು ಕೀರ್ತನ ಮಾಡುತ್ತಿದ್ದ ಮಂಟ ಪಕ್ಕೆ ಬೆಂಕಿ ಹತ್ತಿದ್ದು ನಿಜ; ದೀವಟಿಗೆಯುವನ ತಲೆಯ ಮೇಲಿನ ಮಂಟಪಕ್ಕೆ ಹತ್ತಿತ್ತು; ಆದರೆ ಅದು ಯಾರ ಲಕ್ಷ್ಯದಲ್ಲಿಯೂ ಬಂದಿರಲಿಲ್ಲ. ಆ ಬೆಂಕಿಯನ್ನು ಯಾರು ನಂದಿಸಿದರೆಂಬದೂ ಗೊತ್ತಿಲ್ಲ. ಬೆಳಗು ಮುಂಜಾನೆ ನೋಡಲು ಮಂಟ ಪದಲ್ಲಿ ಎರಡು ಮೊಳ ಅಗಲ ಪ್ರದೇಶವು ಸುಟ್ಟು ಕಿಂದಿ ಬಿದ್ದದ್ದು ಮಾತ್ರ ಕಂಡು ಬಂದಿತು."

ಪತ್ರದಲ್ಲಿಯ ಸಂಗತಿಯನ್ನು ಓದಿ ಚಾಂಭಾರಗೊಂದಿಯ ಜನರು ಶೇಖ ಮುಹಮ್ಮದನಲ್ಲಿ ಭಯಭಕ್ತಿಯುಳ್ಳವರಾದರು. ಅವರು ಆತನ ಬಳಿಗೆ ಹೋಗಿ ನಮಸ್ಕರಿಸಿ, ಪತ್ರದ ಅಭಿಪ್ರಾಯವನ್ನು ಹೇಳಿ "ಮಹಾರಾಜ, ತಮಗೆ ಈ ಸಂಗ ತಿಯು ಹ್ಯಾಗೆ ಗೊತ್ತಾಯಿತು? ದೇಹೂ ಗ್ರಾಮವು ಇಲ್ಲಿಂದ ಬಹು ದೂರದಲ್ಲಿ ಇದ್ದು, ತಮಗೆ ಈ ಸಂಗತಿಯು ಹ್ಯಾಗೆ ಗೋಚರಿಸಿತು?" ಎಂದು ಪ್ರಶ್ನಮಾಡಿ ದರು. ಶೇಖಮುಹಮ್ಮದನು ಅವರ ಪ್ರಶ್ನೆಗೆ ನಕ್ಕು ನುಡಿದನೇನಂದರೆ:— ಇರುವೆಯು ಹೋಗತಕ್ಕ ಮಾರ್ಗದಲ್ಲಿ ಅನ್ಯರಿಗೆ ಹೋಗಲಿಕ್ಕೆ ಬರುವದಿಲ್ಲ. ಅದರಂತೆ ಭಗವದ್ಭಕ್ತರ ಮಾರ್ಗವು ವಿಷಯಲಂಪಟಿಗಳಿಗೆ ತಿಳಿಯದು. ಭಕ್ತರ ಗುರುತು ಭಕ್ತರಿಗೇ ಇರುವದಲ್ಲದೆ ಅನ್ಯರಿಗೆ ಆಗಲಾರದು. ನೀರಿನಲ್ಲಿ ಅಸಂಖ್ಯ ಜಲಚರಗಳಿರುತ್ತವೆ. ಆದರೆ ಅವೆಲ್ಲವುಗಳಿಗೆ ಮೀನದಂತೆ ನೀರಲ್ಲಿ ಈಸಲಿಕ್ಕೆ

ಬರುವದಿಲ್ಲ. ಇದರಂತೆ ವ್ಯವಹಾರದಲ್ಲಿ ಅಸಂಖ್ಯ ಉದಾಹರಣೆಗಳಿರುವವು. ನೀವು ಭಗವದ್ಭಕ್ತರಾಗಿದ್ದರೆ ಈ ವಿಷಯುವು ನಿಮಗೆ ಸಹಜವಾಗಿ ಅವಗತವಾಗುತ್ತಿತ್ತು. ವಿಶ್ವವೇ ನಿಮ್ಮ ದೃಷ್ಟಿಪಥಕ್ಕೆ ಕಾಣುತ್ತಿತ್ತು; ಆದರೆ ನೀವು ಭಕ್ತರಾಗದ್ದರಿಂದ ಅದು ಹ್ಯಾಗೆ ಕಂಡಿತೆಂಬದನ್ನು ಹೇಳುವದರಿಂದ ಪ್ರಯೋಜನವೇನು?

ಈ ಮೇರೆಗೆ ಶೇಖಮುಹಮ್ಮದನು ನುಡಿಯಲು, ಜನರು ಆತನಿಗೆ ದಂಡವತ್ ನಮಸ್ಕಾರಮಾಡಿದರು. ಅವನು ಮಹಾಜ್ಞಾನಿಯೂ, ಸರ್ವಜ್ಞನೂ ಇರುವನೆಂದು ಅವನಲ್ಲಿ ಪ್ರೇಮಾದರಗಳನ್ನು ತಾಳಿದರು. ಜನರಿಗೆ ಭಗವದ್ಭಕ್ತರ ಯೋಗ್ಯತೆಯು ತಿಳಿಯಬೇಕಾದರೆ ಅಮಾನುಷ ಕೃತ್ಯಗಳೇ ಬೇಕು. ಕೇವಲ ಗುಣಪರೀಕ್ಷೆಮಾಡಿ ಯಾರೂ ಸಾಧುಗಳನ್ನು ತಿಳಿಯುವದಿಲ್ಲ. ಅಮಾನುಷ ಕೃತ್ಯಗಳ ಮೇಲಿಂದಲೇ ಸಾಧುತ್ವವನ್ನು ತಿಳಿಯ ಹೋಗುವ ಜನರು ಒಮ್ಮೊಮ್ಮೆ ಮೋಸಹೋಗುವರು. ಅಸ್ವಾಧುಗಳಾದ ಕೆಲ ಜನರು ಸಿದ್ಧಿಯಬಲದಿಂದ ಹಲವು ಅಮಾನುಷ ಕೃತ್ಯಗಳನ್ನು ತೋರಿಸಿ ಜನರನ್ನು ದಂಗುಬಡಿಸುವರು. ಇಂಥವರಲ್ಲಿ ನಿಜವಾದ ಜ್ಞಾನವಾಗಲಿ, ಸಾಧುತ್ವವಾಗಲಿ ಇರದ್ದರಿಂದ ಇಂಥವರನ್ನು ಭಜಿಸಿದವರು ಪಾಪದಲ್ಲಿ ಸಂಪೂರ್ಣವಾಗಿ ಮುಳುಗಿ ಹೋಗುವರಲ್ಲದೆ ಉದ್ಧೃತರಾಗಲಾರರು. ಈ ಗುಟ್ಟನ್ನು ತಿಳಿದು ಗುಣಪರೀಕ್ಷೆಮಾಡಿ ಸಾಧುಗಳನ್ನು ನಂಬಬೇಕಲ್ಲದೆ ಕೇವಲ ಅಮಾನುಷ ಕೃತ್ಯಗಳನ್ನು ನಂಬಿ ಸಿಕ್ಕ ಸಿಕ್ಕ ಜನರ ಮೇಲೆ ವಿಶ್ವಾಸವಿಡಬಾರದು.

---

## ಮೀರಾಬಾಯಿ.



ರಾಜಸ್ಥಾನದಲ್ಲಿ ಉದೇಪುರವೆಂಬದೊಂದು ಇತಿಹಾಸ ಪ್ರಸಿದ್ಧ ಸ್ಥಳವಿರುವದು. ಅಲ್ಲಿಯ ರಾಣಾನ ಹೊಟ್ಟೆಯಲ್ಲಿ ಮೀರಾಬಾಯಿಯು ಜನ್ಮಿಸಿದಳು. ಆಕೆಯು ಜನ್ಮತಃ ಭಗವದ್‌ಭಕ್ತಳಾಗಿದ್ದಳು. ತಂದೆಯು ಹರಿಭಕ್ತನಾದ್ದರಿಂದ ಆತನು ಪ್ರತಿನಿತ್ಯ ಕೃಷ್ಣನ ಗುಡಿಗೆ ಹೋಗುವಾಗ ಮಗುವನ್ನು ಕರೆದುಕೊಂಡು ಹೋಗುತ್ತಿದ್ದುದರಿಂದ ಆಕೆಗೆ ಚಿಕ್ಕಂದಿನಲ್ಲಿಯೇ ಶ್ರೀ ಕೃಷ್ಣನ ಮೇಲೆ ತುಂಬಾ ಪ್ರೇಮವುಂಟಾಯಿತು. ಅವಳು ಕೃಷ್ಣಭಜನೆಯಲ್ಲಿ ರತಳಾದಳು.

ಮೀರಾಬಾಯಿಯು ಬೆಳೆದು ದೊಡ್ಡವಳಾದಳು. ಪ್ರಾಯವು ಅವಳ ದೇಹವನ್ನಲಂಕರಿಸಿತು. ಆ ರಾಜಪುತ್ರಿಯು ದಿವ್ಯಾಂಗನೆಯಂತೆ ಪರಿಶೋಭಿಸ ಲಾರಂಭಿಸಿದಳು. ಆಕೆಯ ಸುರೂಪಕ್ಕೆ ಮರುಳಾಗಿ ಹಲವು ಜನ ರಾಜ ಕುಮಾರರು ಆಕೆಯ ಪಾಣಿಗ್ರಹಣ ಮಾಡಬೇಕೆಂದು ಹಾತೊರೆಯಲಾರಂಭಿಸಿ ದರು. ಆದರೆ ಮೀರಾಬಾಯಿಯು ವೈರಾಗ್ಯಶೀಲಳಾಗಿದ್ದಳು. ಆಕೆಯು ತಂದೆ ಯನ್ನು ಕುರಿತು—ನನಗೆ ವರನನ್ನು ನೋಡುವ ಕಾರಣವಿಲ್ಲ; ನಾನು ಶ್ರೀ ಕೃಷ್ಣನಿಗೆ ದೇಹವನ್ನರ್ಪಿಸಿದ್ದೇನೆ; ಶ್ರೀ ಕೃಷ್ಣನ ಹೊರತು ಜಗತ್ತಿನಲ್ಲಿರುವ ಎಲ್ಲ ಪುರುಷರನ್ನು ಪಿತೃಸ್ಥಾನದಲ್ಲಿ ತಿಳಿಯುವೆನು ಎಂದು ಖಂಡಿತವಾಗಿ ಹೇಳಿದಳು. ರಾಣಾನು ಮಗಳ ಈ ಖಂಡಿತ ಮಾತನ್ನು ಕೇಳಿ ಆಕೆಯ ಮನಸ್ಸನ್ನು ತಿರುಗಿ ಸುವದಕ್ಕೆ ಬಹುರೀತಿಯಾಗಿ ಪ್ರಯತ್ನಪಟ್ಟನು. ಈಗ ಕಲಿಯುಗವಿದ್ದು, ದೇವರು ಕಲ್ಲಾಗಿ ನಿಂತಿರುವನು. ಈ ಕಾಲದಲ್ಲಿ ಹೀಗೆ ಹಟಹಿಡಿಯಬಾರದು ಎಂಬದಾಗಿ ಬುದ್ಧೀ ಹೇಳಿದನು. ಆದರೂ ಆ ಭಕ್ತಳು ತನ್ನ ನಿಶ್ಚಯವನ್ನು ಬಿಡಲಿಲ್ಲ; ಕಲಿಯುಗದಲ್ಲಿ ದೇವರು ಕಲ್ಲಾಗಿದ್ದರೆ ದ್ವಾರಕಾದಿಂದ ಮಥುರೆಗೆ ದೇವರು ಹೇಗೆ ನಡೆದು ಬಂದನು? ನಾಮದೇವರ ಜೊತೆಗೆ ಹ್ಯಾಗೆ ಉಂಡನು ಎಂದು ತಂದೆಗೆ ಪ್ರಶ್ನಮಾಡಿದಳು. ಮಗಳ ಭಗವದ್‌ಭಕ್ತಿಯನ್ನೂ ನಿಶ್ಚಯ ವನ್ನೂ ತಿಳಿದು ರಾಣಾನು ಆಕೆಯ ಲಗ್ನದ ಗೊಡವೆಯನ್ನು ಬಿಟ್ಟುಬಿಟ್ಟನು.

ಮೀರಾಬಾಯಿಯ ಕಂಠವು ಅತ್ಯಂತ ಕೋಮಲವಿತ್ತು; ಆಕೆಯು ಭಗ ವದ್ಗುಣಾನುವಾದ ಮಾಡುತ್ತ ಸಭೆಯಲ್ಲಿ ನಿಂತು ಕೀರ್ತನ ಮಾಡಲಾರಂಭಿಸಿ ದಳು. ರಾಜವಾಡೆಯಲ್ಲಿ ಭಾವಿಕರಾದ ವೈಷ್ಣವರು ಆಕೆಯ ಕೀರ್ತನಕ್ಕಾಗಿ ಬರಲಾ ರಂಭಿಸಿದರು. ರಾಜವಾಡೆಯಲ್ಲಿ ಹೀಗೆ ಮೀರಾಬಾಯಿಯ ಕೀರ್ತನವು ನಡೆಯಲು ದುರ್ಜನರು ನಿಂದೆಯನ್ನಾರಂಭಿಸಿದರು. ಮಹಾಪತಿವ್ರತೆಯಾದ ಮಹಾರಾಣಿಯ ಹೊಟ್ಟೆಯಲ್ಲಿ ಈಕೆಯು ಎಂಥವಳು ಹುಟ್ಟಿದಳು? ಭಗವದ್‌ಭಕ್ತಿಯ ನಿಮಿತ್ತ ಮಾಡಿ ಈಕೆಯು ಸ್ವೇಚ್ಛಾಚಾರಕ್ಕೆ ಬಿದ್ದಿರುವಳು. ಕಲಾವಂತಿಣಿಯರಂತೆ ಹಾಡುವದೂ ಕುಣಿಯುವದೂ ಅರಸುಮನೆತನದವರಿಗೆ ಭೂಷಣವೇ? ಎಂದು ದುರ್ಭಾಷಣಗಳ ನ್ನಾಡಹತ್ತಿದರು. ಮಗಳ ಈ ಕಾರ್ಯಕ್ಕೆ ಸಮ್ಮತಿಸಿದ ರಾಣಾನಿಗೂ ದುರ್ಜನರು ದುರ್ಭಾಷಣ ಮಾಡತೊಡಗಿದರು. ಜನರ ಈ ನಿಂದಾವಚನಗಳು ರಾಣಾನ ಕಿವಿವರೆಗೆ ಹೋದವು. ಆತನು ಮನಸ್ಸಿನಲ್ಲಿ ಬಹಳ ಸಂತಾಪಗೊಂಡನು. ನನ್ನ ಮಗಳು ಲಗ್ನಮಾಡಿಕೊಳ್ಳದೆ ನನ್ನ ಕುಲಕ್ಕೆ ಕಲಂಕವನ್ನು ಹಚ್ಚಿದಳೆಂದು ತಿಳಿ

ದನು. ಆಗ ಅವನು ರಾಜ್ಞಿಯನ್ನು ಕರೆದು ಮಗಳಿಗೆ ವಿಷಪ್ರಾಶನ ಮಾಡಿಸೆಂದು ಆಜ್ಞೆ ಮಾಡಿದನು.

ಪ್ರತ್ಯಕ್ಷ ಹಡೆದವ್ವನು ಮಗಳಿಗೆ ವಿಷಪ್ರಾಶನ ಮಾಡಿಸುವದೆಂದರೆ ಅಶಕ್ಯವಾದ ಕೆಲಸವೇ ಸರಿ! ಆದರೆ ಮಾಡುವದೇನು? ರಾಜಾಜ್ಞೆಗೆ ಭಂಗ ತರುವಂತಿರಲಿಲ್ಲ. ಮಹಾರಾಣಿಯು ಬಹಳ ಕಷ್ಟಕ್ಕೊಳಗಾದಳು. ಬಹುಪರಿಯಾಗಿ ದುಃಖಿಸಿದಳು. ಮಾಡುತ್ತಾಳೇನು? ಉಪಾಯವಿಲ್ಲದೆ ವಿಷವನ್ನು ಬಟ್ಟಲದಲ್ಲಿ ತುಂಬಿಕೊಂಡು ಮಗಳ ಬಳಿಗೆ ಹೋಗಿ ಎಲ್ಲ ಸಂಗತಿಗಳನ್ನು ಹೇಳಿದಳು. ಆಗ ಮೀರಾಬಾಯಿಯು ಶ್ರೀಕೃಷ್ಣನ ಮುಂದೆ ಕುಳಿತು ಭಗವಂತನ ಗುಣಗಳನ್ನು ಗಾಯನ ಮಾಡುತ್ತಿದ್ದಳು. ರಾಜಾಜ್ಞೆಯನ್ನು ಕೇಳಿ ಆಕೆಗೆ ಸ್ವಲ್ಪ ದುಃಖವಾಯಿತು. "ನಾನು ಕುಲಕ್ಕೆ ಕಲಂಕಪ್ರಾಯಳಾದೆನೇ? ಉಪಾಯವಿಲ್ಲ. ಅವ್ವಾ, ನಾನು ಸಾಯಲಂಜುವದಿಲ್ಲ. ನಶ್ವರವಾದೀದೇಹವು ಎಂದಾದರೂ ಒಮ್ಮೆ ಬಿದ್ದುಹೋಗುವದು ನಿಶ್ಚಯವೇಸರಿ. ಆದರೆ ಎರಡು ಮಾತುಗಳ ಸಲುವಾಗಿ ನನಗೆ ವ್ಯಸನವಾಗುತ್ತದೆ. ಕುಲಕ್ಕೆ ದೂಷಣ ತಂದೆನೆಂಬದು ಒಂದನೆಯದು. ಶ್ರೀಕೃಷ್ಣನ ಸೇವೆಯು ತಪ್ಪಿತೆಂಬದು ಎರಡನೆಯದು. ಮಿಕ್ಕ ಸಂಗತಿಗಳ ಸಲುವಾಗಿ ನಾನು ಯೋಚಿಸುವದಿಲ್ಲ. ಆಗಲಿ; ಶ್ರೀಕೃಷ್ಣನಮನಸ್ಸಿಗೆ ಬಂದಂತಾಗಲಿ, ರಾಜಾಜ್ಞೆಗೆ ಒಪ್ಪಿಕೊಂಡು; ನಾನು ಈ ವಿಷಪ್ರಾಶನ ಮಾಡುತ್ತೇನೆ ಎಂದು ನುಡಿದು ಆ ಭಗವದ್ಭಕ್ತಳು ವಿಷದಪಾತ್ರೆಯನ್ನು ಶ್ರೀಕೃಷ್ಣನಿಗೆ ನೈವೇದ್ಯತೋರಿಸಿ ಭಗವನ್ನಾಮಸ್ಮರಣ ಮಾಡುತ್ತ ಪ್ರಾಶನ ಮಾಡಿದಳು. ಆದರೆ ಅಂಥ ಆ ವಿಷವು ಆಕೆಗೆ ಅಮೃತದಂತೆ ಭಾಸವಾಯಿತು. ಯಾವ ಪರಮಾತ್ಮನು ಪ್ರಹ್ಲಾದನು ವಿಷಕುಡಿಯುವಾಗ ಆ ವಿಷದಂಶವನ್ನು ಹೀರಿಕೊಂಡಿದ್ದನೋ ಆ ಪ್ರಭುವೇ ಈಗ ಮೀರಾಬಾಯಿಯು ಕುಡಿಯುವ ವಿಷದ ವಿಷಾಂಶವನ್ನು ಹೀರಿಕೊಂಡನು. ವಿಷಪ್ರಾಶನದಿಂದ ಮೀರಾಬಾಯಿಯು ಸಾಯಲಿಲ್ಲ. ಶ್ರೀಕೃಷ್ಣನ ಮೂರ್ತಿಯು ಮಾತ್ರ ಹಸರುಬಣ್ಣ ಕೊಟ್ಟಂತೆ ತೋರತೊಡಗಿತು. ರಾಜ್ಞಿಯು ಈ ಚಮತ್ಕಾರವನ್ನು ಕಂಡು ರಾಜನೆದುರಿಗೆ ಹೇಳಿದಳು. ಈ ಮಾತಿನ ಮೇಲೆ ರಾಣನ ವಿಶ್ವಾಸವು ಕೂಡ್ರಲಿಲ್ಲ. ಅವನು ಸ್ವತಃ ನೋಡಬಂದನು. ಶ್ರೀಕೃಷ್ಣನ ಕರೇಶಿಲೆಯು ಹಸರಾದ್ದರಿಂದ ರಾಜನಿಗೆ ಆಶ್ಚರ್ಯವಾಯಿತು. ಅವನು ಮಗಳ ಚರಣಗಳಿಗೆ ನಮಸ್ಕರಿಸಿದನು. ಆ ಪಿತೃಭಕ್ತಳು ತಂದೆಯನ್ನು ಎಬ್ಬಿಸಿ ಸಾಷ್ಟಾಂಗನಮಸ್ಕಾರ ಮಾಡಿದಳು. ಬಳಿಕ ಆಕೆಯು ಶ್ರೀಕೃಷ್ಣನನ್ನು ಪ್ರಾರ್ಥಿಸಲು ವಿಷವು ಇಳಿದು

ಹೋಯಿತು. ಶ್ರೀಕೃಷ್ಣನ ಮೂರ್ತಿಯು ಪೂರ್ವದಂತೆ ಶಾಮವರ್ಣದಿಂದ ಶೋಭಿಸ ತೊಡಗಿತು. ಮೀರಾಬಾಯಿಯು ಮಹಾ ಭಗವದ್ಭಕ್ತಳಿದ್ದು ಆಕೆಗೆ ಶ್ರೀಕೃಷ್ಣನು ಪ್ರಸನ್ನನಾಗಿರುವನೆಂಬದು ರಾಜನಿಗೆ ನಂಬಿಗೆಯಾಯಿತು. ಅವನು ಮಗಳನ್ನು ಕೃತಾಪರಾಧಕ್ಕೆ ಕ್ಷಮೆಬೇಡಿದನು. ರಾಜವಾಡೆಯಲ್ಲಿ ನಡೆದ ಈ ಅದ್ಭುತ ಸಂಗತಿಯನ್ನು ಕೇಳಿ ನಿಂದಕರು ಮುಖಭಂಗಿತರಾದರು. ಅವರು ಅಂದಿನಿಂದ ಮೀರಾಬಾಯಿಯ ಹಾಗು ರಾಣಾನ ನಿಂದೆಯನ್ನು ಬಿಟ್ಟು ಬಿಟ್ಟರು. ಆ ಮಹಾತ್ಮಳು ಭಗವಂತನಲ್ಲಿ ನಿಸ್ಸೀಮಪ್ರೇಮವನ್ನು ತಾಳಿ ಲೋಕೋತ್ತರ ಕೀರ್ತಿಶಾಲಿನಿಯಾದಳು.

---

## ಕೇಶವಸ್ವಾಮಿ.

ಕೇಶವಸ್ವಾಮಿಗಳು ಕೇವಲ ಭಕ್ತಿಯೋಗವನ್ನು ಕೈವಶ ಮಾಡಿಕೊಂಡಿದ್ದರು. ಸರ್ವದಾ ಪ್ರೇಮಲ ಕಂಠದಿಂದ ಪಾಂಡುರಂಗನ ನಾಮಗಾಯನ ಮಾಡುವದೇ ಇವರ ಕೆಲಸವಾಗಿತ್ತು. ಒಮ್ಮೆ ಏಕಾದಶೀ ಸಮಯದಲ್ಲಿ ಇವರು ವಿಜಾಪುರಕ್ಕೆ ಬಂದಿದ್ದರು. ಆ ದೊಡ್ಡ ಹರಿದಿನದಲ್ಲಿ ಅವರು ಪಾಂಡುರಂಗನ ಗುಡಿಯಲ್ಲಿ ಕೀರ್ತನವನ್ನಾರಂಭಿಸಿದರು. ಕೇಶವಸ್ವಾಮಿಗಳ ಕೀರ್ತನವೆಂದರೆ ಸಾವಿರಗಟ್ಲೆ ಜನರು ಕೂಡುತ್ತಿದ್ದರು. ಕೀರ್ತನವು ಮುಗಿಯುತ್ತ ಬರಲು ಆಗ ಕೇಶವಸ್ವಾಮಿಗಳು ತಮ್ಮ ಒಬ್ಬ ವೃದ್ಧ ಶಿಷ್ಯನನ್ನು ಕರೆದು ಹೇಳಿದ್ದೇನಂದರೆ—ಈ ದಿನ ಏಕಾದಶಿ ಇರುವದರಿಂದ ಸರ್ವರಿಗೂ ಉಪೋಷಣವಿದೆ, ಆದ್ದರಿಂದ ಪ್ರಸಾದಕ್ಕಾಗಿ ಶುಂಠಿ-ಸಕ್ಕರೆಯನ್ನು ಕೊಡುವದೇ ಉತ್ತಮವು. ನೀನು ಪೇಟೆಗೆ ಹೋಗಿ ಶುಂಠಿ-ಸಕ್ಕರೆ ತಂದು ಪ್ರಸಾದ ಸಿದ್ಧಪಡಿಸಿ ಕೀರ್ತನ ಮುಗಿದ ಕೂಡಲೆ ಎಲ್ಲರಿಗೂ ಹಂಚಿ ಬಿಡು.''

ಈ ಮೇರೆಗೆ ಸ್ವಾಮಿಗಳು ಆಜ್ಞೆಮಾಡಲು ಆ ವೃದ್ಧ ಶಿಷ್ಯನು ಪೇಟೆಗೆ ಹೋಗಿ ಒಬ್ಬ ಅಂಗಡಿಕಾರನನ್ನು ಎಬ್ಬಿಸಿದನು. ಆತನು ನಿದ್ದೆಗಣ್ಣಿನಲ್ಲಿ ದೀಪ ಹಚ್ಚದೆ ಅಜಮಾಸಿನ ಮೇಲಿಂದ ಶುಂಠಿಯ ಚೀಲವೆಂದು ಬಚನಾಗದ ಚೀಲದಲ್ಲಿ ಕೈಹಾಕಿ ಬ್ರಾಹ್ಮಣನು ಬೇಡಿದಷ್ಟು ಶುಂಠಿಯಬದಲು ಬಚನಾಗವನ್ನು ಕೊಟ್ಟನು. ಬ್ರಾಹ್ಮಣನಾದರೂ ಕತ್ತಲಲ್ಲಿ ಬಚನಾಗವನ್ನು ಗುರ್ತಿಸದೆ ಶುಂಠಿಯೆಂದು ಪದಾ

ನಲ್ಲಿ ಕಟ್ಟಿಕೊಂಡನು. ಬಳಿಕ ಸಕ್ಕರೆಯನ್ನು ತಕ್ಕೊಂಡು ಅವನು ಗುಡಿಗೆ ಬಂದು ಪ್ರಸಾದವನ್ನು ಸಿದ್ಧಪಡಿಸಿ ಕೀರ್ತನವು ಮುಗಿಯುತ್ತಲೆ ಪ್ರಸಾದವನ್ನು ಹಂಚಿದನು. ಕೆಲವರು ಪ್ರಸಾದವನ್ನು ಆಗ್ಗೇ ತಿಂದುಬಿಟ್ಟರು. ಕೆಲವರು ಹರಿಪ್ರಸಾದವೆಂದು ಒಲ್ಲಿಯಲ್ಲಿ ಕಟ್ಟಿಕೊಂಡರು.

ಮರುದಿನ ಮುಂಜಾನೆ ಅಂಗಡಿಕಾರನು ಎದ್ದು ನೋಡಲು, ಬಚನಾಗದ ಚೀಲದ ಬಾಯಿ ತೆರೆದಿತ್ತು. ಆಗ ಅವನಿಗೆ ರಾತ್ರಿಯಲ್ಲಿ ತಾನು ಶುಂಠಿಯೆಂದು ಬಚನಾಗವನ್ನು ಕೊಟ್ಟೆನೆಂಬದು ಹೊಳೆಯಿತು. ಅವನು ಹೌಹಾರಿಹೋದನು. ಕೀರ್ತನಕ್ಕೆ ಬಂದ ಜನರೆಲ್ಲ ಪ್ರಸಾದವನ್ನು ಸೇವಿಸಿದ್ದರಿಂದ ಸಾವಿರಾರು ಜನರು ಸತ್ತಿರಬಹುದು. ಇಷ್ಟು ಜನರ ಕೊಲೆಗೆ ನಾನೇ ಕಾರಣನಾದ್ದರಿಂದ ನಾನು ನರಕಭಾಗಿಯಾದೆನು. ನನ್ನ ಸಮಾನ ನೀಚನು ಇನ್ನಾವನಿರುವನು? ನಾನು ಇನ್ನು ಜೀವಿಸಿ ಪ್ರಯೋಜನವೇನು? ಎಂದು ಪಶ್ಚಾತ್ತಾಪಪಟ್ಟು ದೇಹತ್ಯಾಗ ಕ್ಕಾಗಿ ಹೊರಟನು. ಆ ವ್ಯಾಪಾರಿಯು ಸಜ್ಜನನಿದ್ದದರಿಂದ ಅವನಿಗೆ ಈ ಬಗೆ ಯಾಗಿ ಪಶ್ಚಾತ್ತಾಪವಾಯಿತು. ಅವನು ದಾರೀ ಹಿಡಿದು ಹೋಗುವಾಗ ಊರಲ್ಲಿ ನಡೆದ ಸುದ್ದಿಯನ್ನು ವಿಚಾರಿಸುತ್ತ ನಡೆದನು. ಅವನಿಗೆ ಊರಲ್ಲಿ ಏನೂ ವಿಶೇಷ ಸುದ್ದಿಯಿರದ್ದರಿಂದ ಆಶ್ಚರ್ಯವಾಯಿತು. ಆಗ ಅವನು ರಾತ್ರೀ ಕೀರ್ತನಕ್ಕೆ ಹೋದವರ ಬಳಿಗೆ ಹೋಗಿ ಪ್ರಸಾದವನ್ನು ಕೇಳಿದನು. ಯಾರ ಬಳಿಯಲ್ಲಿಯೂ ಪ್ರಸಾದ ಸಿಗಲಿಲ್ಲ. ಸ್ಮಶಾನಭೂಮಿಗೆ ಹೋಗಿ ನೋಡಿದನು. ಅಲ್ಲಿಯೂ ಯಾವ ಗದ್ದಲವೂ ಇರಲಿಲ್ಲ.

ಅಂಗಡಿಕಾರನಿಗೆ ಆಶ್ಚರ್ಯವಾಯಿತು. ಅವನು ಕೇಶವಸ್ವಾಮಿಗಳಿಗೆ ಈ ಸಂಗತಿಯನ್ನು ತಿಳಿಸಬೇಕೆಂದು ಹೋದನು. ಆಗ ಸ್ವಾಮಿಗಳು ಸ್ನಾನ ಮಾಡಿ ದೇವರ ಗುಡಿಗೆ ಬಂದಿದ್ದರು. ಶ್ರೀ ಪಾಂಡುರಂಗನ ಮೂರ್ತಿಯು ಹಸರುವರ್ಣದ್ದಾಗಿ ಕಾಣಹತ್ತಿದ್ದರಿಂದ ಹೀಗೆ ಯಾಕೆ ಆಗಿರಬಹುದೆಂದು ಅವರು ಆಲೋಚಿಸುತ್ತಿದ್ದರು. ಅಷ್ಟರಲ್ಲಿ ಅಂಗಡಿಕಾರನು ಅವರ ಬಳಿಗೆ ಹೋಗಿ ತನ್ನಿಂದ ಆದ ಪ್ರಮಾದವನ್ನು ಹೇಳಿದನು. ಆಗ ಕೇಶವಸ್ವಾಮಿಗಳಿಗೆ ದೇವರ ಮೂರ್ತಿ ಯು ಹಸರು ವರ್ಣತಾಳಿದ್ದರ ಕಾರಣವು ಗೊತ್ತಾಯಿತು. ಪ್ರಸಾದದಲ್ಲಿ ಬಚ ನಾಗದ ವಿಷವು ಕೂಡಿದ್ದರಿಂದ ಸಾವಿರಾರು ಜನರು ಮಡಿಯುವರೆಂದು ಪರ ಮಾತ್ಮನು ತಾನೇ ವಿಷವನ್ನು ಹರಣಮಾಡಿರುವನೆಂದು ತಿಳಿದು "ಹೇ ಪಾಂಡು ರಂಗಾ ಭಕ್ತವತ್ಸಲಾ, ಜಗತ್‌ಪತಿಯಾದ ನಿನಗೆ ಬಚನಾಗದ ವಿಷವು ಬಾಧಿಸಿತೇ?

ಭಕ್ತವತ್ಸಲನೇ ಪ್ರಸಾದದಲ್ಲಿಯ ವಿಷವನ್ನು ಸೇವಿಸಿ ಭಕ್ತವತ್ಸಲನೆಂಬ ಬಿರು ದನ್ನು ಸತ್ಯವಾಗಮಾಡಿದೆಯಾ ಎಂದು ನಾನಾ ರೀತಿಯಾಗಿ ಸ್ತೋತ್ರ ಮಾಡಿ ದರು. ಸದ್ಭಕ್ತರ ಸ್ತೋತ್ರದಿಂದ ಪಾಂಡುರಂಗನು ಸಂತುಷ್ಟನಾಗಿ ಮೊದ ಲಿನ ವರ್ಣನವನ್ನು ತಾಳಿದನು. ಈ ಅದ್ಭುತವನ್ನು ನೋಡಿ ಅಂಗಡಿಕಾರನಿಗೆ ವೈರಾಗ್ಯವುತ್ಪನ್ನವಾಯಿತು. ಅವನು ಪ್ರಾಪಂಚಿಕ ಉಪಾಧಿಯನ್ನು ಬಿಟ್ಟು ಕೊಟ್ಟು ಕೇಶವಸ್ವಾಮಿಗಳ ಶಿಷ್ಯನಾಗಿ ಜನ್ಮಸಾರ್ಥಕ್ಯವನ್ನು ಮಾಡಿಕೊಂಡನು.

---

# ಬೋಧರಾಜ.



ಬಾಲೇಘಾಟ ಪ್ರಾಂತದಲ್ಲಿ ಬೋಧರಾಜನೆಂಬ ಗೌಡನಿದ್ದನು. ಆತನು ಮನೆತನದಿಂದ ಶ್ರೀಮಂತನಿದ್ದನು. ಅವನಿಗೆ ಪತಿವ್ರತಾಶಿರೋಮಣಿಯಾದ ಹೆಂಡತಿಯಿದ್ದಳು. ಸಾತ್ವಿಕನಾದ ಮಗನಿದ್ದನು. ಮಗನ ಹೆಂಡತಿಯಾದರೂ ಸದ್ಗುಣಸಂಪನ್ನಳಾಗಿದ್ದಳು. ಹೀಗೆ ಬೋಧರಾಜನು ಅನುಕೂಲಪರಿವಾರದೊ ಡನೆ ಸುಖದಿಂದ ಸಂಸಾರ ಮಾಡುತ್ತಿದ್ದನು.

ಬೋಧರಾಜನು ಭಗವದ್ಭಕ್ತನಿದ್ದನು. ಪಾಂಡುರಂಗನ ಮೇಲೆ ಆತನ ಪ್ರೇಮ ಬಹಳ. ಸರ್ವದಾ ಅವನು ಪಾಂಡುರಂಗನ ಧ್ಯಾನದಲ್ಲಿಯೇ ತತ್ಪರ ನಾಗಿರುತ್ತಿದ್ದನು. ಅವನು ಪ್ರತಿ ವರುಷ ಆಷಾಢ ಕಾರ್ತಿಕಗಳಲ್ಲಿ ಪಂಢರ ಪುರಿಯ ವಾರಿಯನ್ನು ಮಾಡುತ್ತಿದ್ದನು. ಈ ನಿಯಮವನ್ನು ಅವನು ತಪ್ಪದೆ ಪಾಲಿಸಿ ಭಗವಂತನ ಪ್ರೇಮಕ್ಕೆ ಪಾತ್ರನಾಗಿದ್ದನು. ಹೀಗಿರಲು ಒಮ್ಮೆ ದೇಶ ದಲ್ಲಿ ದುಷ್ಕಾಲವು ಪ್ರಾಪ್ತವಾಯಿತು. ಸಾವಿರಾರು ಜನರು ಅನ್ನವಿಲ್ಲದೆ ಮಡಿ ಯಲಾರಂಭಿಸಿದರು. ಆಗ ಬೋಧರಾಜನು ಭೂತದಯಾಪರನಾಗಿ ಹೆಂಡತಿ ಯನ್ನು ಕುರಿತು ನುಡಿದನೇನಂದರೆ—ಪ್ರಿಯೇ, ವಿಪತ್ತಕಾಲದಲ್ಲಿ ಸಹಾಯವನ್ನು ಮಾಡುವದೂ, ಒಣಗುವ ಗಿಡಗಳಿಗೆ ನೀರು ಹಣಿಸುವದೂ, ದರಿದ್ರ ಬ್ರಾಹ್ಮ ಣನ ಲಗ್ನಮಾಡುವದೂ ಪುಣ್ಯದ ಕೆಲಸಗಳಾಗಿವೆ. ಅದರಂತೆ ಕ್ಷುಧಿತರಿಗೆ ಅನ್ನ ದಾನಮಾಡುವದಾದರೂ ಶ್ರೇಷ್ಠತಮ ಪುಣ್ಯದ ಕೆಲಸವಾಗಿದೆ. ಪುಣ್ಯದ ಕೆಲಸ ಗಳನ್ನು ಮಾಡುವವರಿಗೆ ಶ್ರೀರಾಮನ ದರ್ಶನವಾಗುವದು; ಹಾಗು ಅವರ ಚಿತ್ತ

ಶುದ್ಧಿಯಾಗುವದು. ಅದ್ದರಿಂದ ಮನುಷ್ಯನು ಸರ್ವದಾ ಪುಣ್ಯಕರ್ಮಗಳಲ್ಲಿಯೇ ರತನಾಗಿರಬೇಕು. ಈಗ ಅನಾಯಾಸವಾಗಿ ಪ್ರಸಂಗ ಬಂದಿದೆ. ಸಾವಿರಾರು ಜನರು ಕೂಳಿಲ್ಲದೆ ಸಾಯುತ್ತಿರುವರು. ನಮ್ಮ ಮನೆಯಲ್ಲಿ ಧನಧಾನ್ಯವು ಸಮೃದ್ಧವಾಗಿದೆ. ಈ ಧನ-ಧಾನ್ಯದ ಸದ್ವಿನಿಯೋಗ ಮಾಡುವ ಕಾಲವು ಒದಗಿದೆ. ಈ ಕಾಲಕ್ಕೆ ನೀನು ಅನುಮಾನಿಸದೆ ಮನೆಗೆ ಬಂದವರಿಗೆ ಅನ್ನದಾನ ಮಾಡುತ್ತ ಹೋಗು. ಇದರಿಂದ ಪಾಂಡುರಂಗನು ಸಹಜವಾಗಿ ಪ್ರೀತನಾಗುವನು.''

ಈ ಮೇರೆಗೆ ಪತಿಯಾಡಿದ ಮಾತುಗಳನ್ನು ಕೇಳಿ ಮುಮತಾಯಿಯು ಸಂತೋಷಪಟ್ಟಳು. ಆಕೆಯು ಪ್ರೇಮದಿಂದ ಅನ್ನದಾನ ಮಾಡಲಾರಂಭಿಸಿದಳು. ಈ ಸುದ್ದಿಯು ಸುತ್ತಲೂ ಪಸರಿಸಲು, ದಿನಾಲು ಸಾವಿರಾರು ಜನರು ಬೋಧರಾಜನ ಬಾಗಿಲಕ್ಕೆ ಬರಲಾರಂಭಿಸಿದರು. ಸಕ್ಕರೆ ಇದ್ದಲ್ಲಿ ಇರುವೆಗಳು ಮುತ್ತುವಂತೆ ಪರಮ ಉದಾರನಾದ ಬೋಧರಾಜನ ಮನೆಗೆ ಬುಭುಕ್ಷಿತ ಸಮುದಾಯವು ಬರಲಾರಂಭಿಸಿತು.

ಮುಮತಾಯಿಯು ಬೇಸರವಿಲ್ಲದೆ ಪತಿಯಾಜ್ಞೆಯಂತೆ ಅನ್ನದಾನಮಾಡಿದಳು. ದುಷ್ಕಾಲವು ಮುಗಿಯುವವರೆಗೆ ಈ ಅನ್ನದಾನವು ಅವಿಚ್ಛಿನ್ನವಾಗಿ ನಡೆದದ್ದರಿಂದ ಬೋಧರಾಜನ ಮನೆಯಲ್ಲಿದ್ದ ಧನ-ಧಾನ್ಯ ಸಂಗ್ರಹವೆಲ್ಲ ತೀರಿಹೋಯಿತು. ಗರ್ಭಶ್ರೀಮಂತನಾದ ಬೋಧರಾಜನು ಕೇವಲ ದರಿದ್ರನಾದನು. ಲಕ್ಷಗಣಿತ ಜನರಿಗೆ ಅನ್ನದಾನ ಮಾಡಿದ ಆತನಿಗೆ ತಿನ್ನಲಿಕ್ಕೆ ಅನ್ನವಿಲ್ಲದಾಯಿತು. ಹೀಗೆ ಬಡತನ ಬಂತೆಂದು ಬೋಧರಾಜನು ಚಿಂತಿಸಲಿಲ್ಲ. ಭಗವದ್‌ಭಜನೆಯಲ್ಲಿ ಮಗ್ನನಾಗಿ ಆನಂದದಿಂದ ಕಾಲಕಳೆಯುತ್ತಲಿದ್ದನು. ಉದರ ನಿರ್ವಾಹಕ್ಕಾಗಿ ಆತನು ಕೂಲಿಯನ್ನು ಮಾಡತೊಡಗಿದನು. ಯಾವನು ಗರ್ಭಶ್ರೀಮಂತನೋ ಅವನು ಈಗ ಕೂಲೀಮಾಡಬೇಕಾದರೆ ಆತನು ವ್ಯಸನಪಡಬಹುದಾಗಿತ್ತು. ಆದರೆ ಆ ಭಗವದ್‌ಭಕ್ತನು ಪರೋಪಕಾರಕ್ಕಾಗಿ ಬಡವನಾದ್ದರಿಂದ ಕೂಲೀಮಾಡಲಿಕ್ಕೆ ಸ್ವಲ್ಪವೂ ಅನುಮಾನಿಸಲಿಲ್ಲ. ಆತನ ಕುಟುಂಬದವರೂ ಚಿಂತೆಮಾಡಲಿಲ್ಲ. ಇಂಥ ಆ ಸಜ್ಜನಕುಟುಂಬದ ಧನ್ಯವಾದವನ್ನು ಎಷ್ಟು ಮಾಡಿದರೂ ಸ್ವಲ್ಪವೇ ಇರುವದು. ಇರಲಿ; ಬೋಧರಾಜನು ಅಂಥ ಕಷ್ಟಮಯ ಸ್ಥಿತಿಯಲ್ಲಿಯೂ, ಯಾಚಕರ ಇಚ್ಛೆಯನ್ನು ತೃಪ್ತಿಗೊಳಿಸುತ್ತಿದ್ದನು. ಒಮ್ಮೆ ಸಂಘಟೀಯಾತ್ರೆಗೆ ಹೊರಟಾಗ ಅವನ ಹತ್ತಿರ ಒಂದು ಪೈ ಸಹ ಇದ್ದಿಲ್ಲ.

ಚಂದ್ರಭಾಗಾದಲ್ಲಿ ಸ್ನಾನಮಾಡಿ ಬ್ರಾಹ್ಮಣರಿಗೆ ದಕ್ಷಿಣೆ ಕೊಡಬೇಕಾಗುವದು ಏನು ಮಾಡಲಿ ಎಂದು ಚಡಪಡಿಸಿದನು. ಬಳಿಕ ಅಸ್ವಾವಲಂಬಿಯೂ ಧೈರ್ಯವತಾಳಿ ಕಟ್ಟಿಗೆಹೊರೆಯನ್ನು ಮಾರಿ ಬಂದ ಹಣದಲ್ಲಿ ದಕ್ಷಿಣೆ ಮೊದಲಾದವುಗಳನ್ನು ಕೊಟ್ಟರಾಯಿತೆಂದು ನಿರ್ಧರಿಸಿ ಸಂಗಡ ಒಂದು ಕೊಡ್ಲಿಯನ್ನು ತಕ್ಕೊಂಡು ಪಂಢರಪುರಕ್ಕೆ ನಡೆದನು. ಅದರಂತೆ ಅವನು ದಾರಿಯಲ್ಲಿ ಕಟ್ಟಿಗೆಯ ಹೊರೆಯನ್ನು ಸಿದ್ಧಮಾಡಿಕೊಂಡು ಅದನ್ನು ಪಂಢರಪುರಿಯಲ್ಲಿ ಮಾರಿದನು. ಅದರಿಂದ ಅವನಿಗೆ ಮೂರು ಆಣೆ ರೊಕ್ಕ ಪ್ರಾಪ್ತಿಯಾಯಿತು, ಬಳಿಕ ಅವನು ಚಂದ್ರಭಾಗಾದಲ್ಲಿ ಸ್ನಾನ ಮಾಡಿ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟನು. ದೇವರಿಗೆ ಬುಕ್ಕಿಟ್ಟು ಮೊದಲಾದವುಗಳನ್ನು ತಕ್ಕೊಂಡು ದೇವದರ್ಶನ ತಕ್ಕೊಂಡನು. ಆದರೆ ಮರುದಿನ ದ್ವಾದಶೀದಿವಸ ಬ್ರಾಹ್ಮಣಭೋಜನ ಮಾಡಿಸಲಿಕ್ಕೆ ಅವನ ಒಳಿಯಲ್ಲಿ ದ್ರವ್ಯಉಳಿಯಲಿಲ್ಲ. ಒಂದು ದುಡ್ಡು ಮಾತ್ರ ಉಳಿದಿತ್ತು, ಆತನು ಬೆಳತನಕ ಜಾಗರಣೆ ಮಾಡಿ ಭಗವದ್‌ಭಕ್ತರ ಕೀರ್ತನ ಶ್ರವಣ ಮಾಡಿದನು.

ಬೆಳಗಾದ ಬಳಿಕ ಬೋಧರಾಜನು ಸ್ನಾನ ಮಾಡಿ ದೇವದರ್ಶನ ತಕ್ಕೊಂಡು ಒಂದು ದುಡ್ಡಿನ ಹಿಟ್ಟನ್ನು ಕೊಂಡು ಚಂದ್ರಭಾಗಾದ ಘಾಟಿನಮೇಲೆ ಕುಳಿತನು. ಯಾವನಾದರೂ ಬ್ರಾಹ್ಮಣನು ತನ್ನ ಬಳಿಗೆ ಯಾಚನಕ್ಕಾಗಿ ಬಂದರೆ ಈ ಹಿಟ್ಟನ್ನು ಕೊಟ್ಟು ಕೃತಾರ್ಥನಾಗಬೇಕೆಂದು ಆತನು ಬಯಸುತ್ತಿದ್ದನು. ಆದರೆ ಬಡವನಾದ ಈತನ ಬಳಿಗೆ ಭಿಕ್ಷೆಗೆ ಬರುವವರಾರು? ಭಿಕ್ಷುಕರು ಶ್ರೀಮಂತರನ್ನು ನೋಡುವರಲ್ಲದೆ ಬಡವರನ್ನು ನೋಡಲಾರರು. ಏಕಾದಶಿಯ ಮನೆಗೆ ಶಿವರಾತ್ರಿಯು ಬರಬಹುದೋ? ತಲೆಗೆ ಹರಕ ಚಿಂದಿಯನ್ನು ಸುತ್ತಿ ಒಂದು ಹರಕ ಒಲ್ಲಿಯನ್ನು ಹೊತ್ತಿರುವ ಈ ಬೋಧರಾಜನ ಬಳಿಗೆ ಯಾರೂ ಬರಲಿಲ್ಲ. ನಾಲ್ಕು ತಾಸು ಹೊತ್ತಾದರೂ ಭಿಕ್ಷುಕರು ಬಾರದ್ದರಿಂದ ಬೋಧರಾಜನು ತಳಮಳಿಸ ಹತ್ತಿದನು. ಬ್ರಾಹ್ಮಣರಿಗೆ ಹಿಟ್ಟನ್ನು ದಾನ ಮಾಡಿದ ಹೊರತು ಅವನಿಗೆ ಸಮಾಧಾನವಾಗದಾಯಿತು. ಆಗ ಪಾಂಡುರಂಗನು ತಾನೇ ವೃದ್ಧ ಬ್ರಾಹ್ಮಣನಾಗಿ ಬೋಧರಾಜನ ಬಳಿಗೆ ಬಂದು—ಬೋಧರಾಜನೇ, ನೀನು ನನಗೆ ಪುರಾತನದ ಯಜಮಾನನು ಆದ್ದರಿಂದ ನಿನ್ನ ಬಳಿಗೆ ಯಾಚನೆಗೆ ಬಂದಿದ್ದೇನೆ ಎಂದು ನುಡಿದನು. ಯಾಚಕರು ಬರುವ ಮಾರ್ಗವನ್ನೇ ಪ್ರತೀಕ್ಷಿಸುತ್ತಿರುವ ಬೋಧರಾಜನಿಗೆ ತುಂಬಾ ಸಂತೋಷವಾಯಿತು. ಆತನು ಒಲ್ಲಿಯಲ್ಲಿ ಕಟ್ಟಿದ ಹಿಟ್ಟನ್ನು ಬ್ರಾಹ್ಮಣನಿಗೆ ಸಮರ್ಪಿಸಿ ಕೃತಾರ್ಥನಾದನು. ಮತ್ತು ನುಡಿದನೇನಂದರೆ—

ಸ್ವಾಮಿ, ನಾನು ಬಡವನು. ಅಕ್ಕಿ-ಬೇಳೆಗಳನ್ನು ತಮಗೆ ಪಾರಣೆಗಾಗಿ ಕೊಡಲು ನನ್ನಲ್ಲಿ ಶಕ್ತಿಯಿಲ್ಲ. ದೇವರು ಕೊಟ್ಟಿದ್ದನ್ನು ತಮಗೆ ಸಮರ್ಪಿಸಿರುವೆನು.

ಈ ಮೇರೆಗೆ ಬೋಧರಾಜನು. ನುಡಿಯಲು ಬ್ರಾಹ್ಮಣನು—ಯಜಮಾನನೇ, ಏನೂ ಚಿಂತೆಯಿಲ್ಲ. ಅಕ್ಕಿಬೇಳೆಗಳು ನಮಗೆ ಬೇಡವೇಬೇಡ; ನನ್ನ ವಸತಿಸ್ಥಾನವು ಪಾಂಡುರಂಗನ ಗುಡಿಯಲ್ಲಿರುವದು. ಈ ದಿನ ಗದ್ದಲ ಬಹಳ; ವೃದ್ಧನಾದ ನಾನು ಅಲ್ಲಿಗೆ ಹೋಗುವದೇ ಕಠಿಣವು; ಈ ದಿನ ಇಲ್ಲಿಯೇ ಪಾರಣೆ ತೀರಿಸುತ್ತೇನೆ. ಸ್ವಲ್ಪ ಕಾಕುಳ್ಳು ಆರಿಸಿಕೊಂಡು ಬರುವೆಯಾ? ಇಲ್ಲಿಯೇ ರೊಟ್ಟೀ ಸುಟ್ಟುಕೊಂಡು ಪಾರಣೆ ತೀರಿಸುತ್ತೇನೆ ಎಂದನು. ಬೋಧರಾಜನಿಗೆ ಪರಮಸಂತೋಷವಾಯಿತು. ಆತನು ಲಗಬಗೆಯಿಂದ ಕಾಕುಳ್ಳುಗಳನ್ನು ಆರಿಸಿತಂದನು; ಹಾಗು ಪರಸಿಯ ಜನರ ಕಡೆಯಿಂದ ಬೆಂಕಿಯನ್ನು ಬೇಡಿತಂದು ಕುಳ್ಳುಗಳನ್ನು ಹೊತ್ತಿಸಿದನು. ಅಷ್ಟರಲ್ಲಿ ಬ್ರಾಹ್ಮಣನು ನದಿಯಲ್ಲಿ ಸ್ನಾನಮಾಡಿ ಬಂದು ಹಿಟ್ಟನ್ನು ಒಂದು ಎಲೆಯಲ್ಲಿ ಕಲಿಸಿ ರೊಟ್ಟಿಗಳನ್ನು ಮಾಡಲಾರಂಭಿಸಿದನು. ಈ ಸಂಗತಿಯು ರಖುಮಾಯಿಗೆ ಗೊತ್ತಾಯಿತು. ಭಕ್ತರಾಜನಾದ ಬೋಧರಾಜನ ಮನೆಗೆ ಪಾಂಡುರಂಗನು ಊಟಕ್ಕೆ ಹೋಗಿರುವನೆಂದು ತಿಳಿದು ಆ ಜಗನ್ಮಾತೆಯು ವೃದ್ಧಸುವಾಸಿನಿಯ ವೇಷದಿಂದ ಅಲ್ಲಿಗೆ ಬಂದು ನನ್ನನ್ನು ಬಿಟ್ಟು ನೀವೊಬ್ಬರೇ ಪಾರಣೆಯನ್ನು ತೀರಿಸಬೇಕೇನು? ಎಂದು ಗಂಡನನ್ನು ಕೇಳಿದಳು. ವೃದ್ಧಬ್ರಾಹ್ಮಣರೂಪೀ ಪಾಂಡುರಂಗನು ನಕ್ಕನು. ಆಗ ರಖುಮಾಯಿಯು ತಾನೇ ರೊಟ್ಟಿಗಳನ್ನು ಮಾಡಲಾರಂಭಿಸಿದಳು. ಈ ದಿನದ ಪಾರಣೆಗೆ ಅನಾಯಾಸವಾಗಿ ದಂಪತಿಗಳು ಸಿಕ್ಕರೆಂದು ಬೋಧರಾಜನಿಗೆ ತುಂಬಾ ಸಂತೋಷವಾಯಿತು. ಆತನು ಆ ದಂಪತಿಗಳ ಭೋಜನವಾಗುವವರೆಗೆ ಭಗವಧ್ಯಾನ ಮಾಡುತ್ತ ಕುಳಿತುಕೊಂಡನು. ಜಗನ್ಮಾತೆಯು ಬೋಧರಾಜನಿಗೆ ಸಂಶಯ ಬರಬಾರದೆಂದು ಬರಿಯ ರೊಟ್ಟಿಗಳನ್ನೇ ಸಿದ್ಧಪಡಿಸಿದಳು. ಪ್ರತ್ಯಕ್ಷ ಜಗನ್ಮಾತೆಯು ಮಾಡಿದ ಆ ಅಡಿಗೆಯ ರುಚಿಯನ್ನು ವರ್ಣಿಸುವದೇನು? ಭಕ್ತಿಯ ಬಲದಿಂದ ದೇವರನ್ನು ಬರಮಾಡಿಕೊಂಡ ಬೋಧರಾಜನು ಧನ್ಯನೇ ಸರಿ!

ಬ್ರಾಹ್ಮಣ ಸುವಾಸಿನಿಯರ ಭೋಜನವಾಯಿತು. ಬೋಧರಾಜನಿಗೆ ಸ್ವಲ್ಪ ಪ್ರಸಾದವು ಉಳಿಯಿತು. ಅಷ್ಟರಲ್ಲಿ ಬ್ರಾಹ್ಮಣನೂ ಸುವಾಸಿನಿಯೂ ಒಮ್ಮಿಂದೊಮ್ಮೆಲೆ ಗುಪ್ತರಾದರು. ಆಗ ಬೋಧರಾಜನಿಗೆ ಆಶ್ಚರ್ಯವಾಯಿತು. ಪ್ರತ್ಯಕ್ಷ ಪಾಂಡುರಂಗ ರಖುಮಾಯಿಯವರೇ ಬ್ರಾಹ್ಮಣ ಸುವಾಸಿನಿಯ ರೂಪ

ದಿಂದ ಬಂದಿದ್ದರೆಂದು ಅವನು ತಿಳಿದನು. ಆತನಲ್ಲಿ ಪ್ರೇಮವು ಒತ್ತರಿಸಿ ಬಂದಿತು. ಅವನು ಅತ್ಯಂತ ಪ್ರೇಮದಿಂದ ಗುಡಿಗೆ ಹೋಗಿ ಪಾಂಡುರಂಗನ ಮುಂದೆ ನಿಂತುಕೊಂಡು "ದೇವಾಧಿದೇವನೇ, ಬಡವನಾದ ನನ್ನ ಬಳಿಗೆ ಬಂದು ಒಣ ರೊಟ್ಟಿಯನ್ನು ತಿಂದು ಬಂದೆಯಾ? ಶ್ರೀಮಂತರ ಮನೆಯಲ್ಲಿ ಪಂಚಭಕ್ಷ್ಯಪರ ಮಾನ್ನವನ್ನು ಉಣ್ಣುವವನಿಗೆ ಪಾಪಿಯಾದ ನಾನು ಬರಿಯ ಹಿಟ್ಟನ್ನು ಕೊಟ್ಟೆ ನಲ್ಲ ಎಂದು ಸ್ತೋತ್ರಮಾಡಿದನು. ಬೋಧರಾಜನ ಈ ಸ್ತೋತ್ರಕ್ಕೆ ಮೆಚ್ಚಿ ಪಾಂಡುರಂಗನು ಆತನಿಗೆ ಪ್ರತ್ಯಕ್ಷ ದರ್ಶನಕೊಟ್ಟು ಭಕ್ತರಾಜನೇ, ಶ್ರೀಮಂತರ ಮನೆಯಲ್ಲಿ ಪಂಚಭಕ್ಷ್ಯ ಪರಮಾನ್ನವಾಗುವದೇನೋ ನಿಜ; ಆದರೆ ಬಡವರಾದ ಭಕ್ತರ ಮನೆಯ ಅನ್ನದ ರುಚಿಯು ಅದಕ್ಕೆ ಬರಲಾರದು. ಶ್ರೀಮಂತರು ಬರಿಯ ಅಹಂಭಾವಿಗಳೂ ದುರ್ಜನರೂ ಇರುತ್ತಾರೆ. ಆದ್ದರಿಂದ ಅವರ ಅನ್ನ ವನ್ನು ನಾನು ಸ್ವೀಕರಿಸುವದಿಲ್ಲ. ಯಾರು ಅಹಂಭಾವ ತ್ಯಜಿಸಿ ಕೇವಲ ಪರ ಮಾತ್ಮಭಾವನೆಯಿಂದ ಅನ್ನದಾನಮಾಡುವರೋ ಅವರ ಅನ್ನದಾನವೇ ಶ್ರೇಷ್ಠ ವಾದದ್ದು. ನಿನಗೆ ಶ್ರೀಮಂತರ ಅನ್ನದಾನದ ಒಂದು ಉದಾಹರಣೆಯನ್ನು ತೋರಿಸುತ್ತೇನೆಬಾ ಎಂದು ನುಡಿದು ಅವನೊಡನೆ ಪಂಢರಿಯಲ್ಲಿ ಹೊರಟನು. ಚಂದ್ರಭಾಗಾ ತೀರದಲ್ಲಿ ಒಬ್ಬ ಶ್ರೀಮಂತನಿಳಿದಿದ್ದನು. ಅವನು ಆ ದಿನ ಸಹಸ್ರ ಬ್ರಾಹ್ಮಣ ಭೋಜನಮಾಡಿಸಿದ್ದನು. ಪಂಗ್ತಿಗಳು ಬಡಿಸಲ್ಪಟ್ಟಿದ್ದವು; ಬ್ರಾಹ್ಮ ಣರು ಕುಳಿತುಕೊಂಡಿದ್ದರು. ಇನ್ನು ಆಪೋಶನ ತಕ್ಕೊಳ್ಳತಕ್ಕ ಸಮಯ; ಅಷ್ಟ ರಲ್ಲಿ ಪಾಂಡುರಂಗನು ವೃದ್ಧಬ್ರಾಹ್ಮಣನ ವೇಷದಿಂದ ಅಲ್ಲಿಗೆ ಹೋದನು. ಹಾಗು ಯಜಮಾನನನ್ನು ಕಂಡು ನಾನೊಬ್ಬ ಬ್ರಾಹ್ಮಣನು ಊಟಕ್ಕೆ ಬರುತ್ತೇನೆ ಎಂದು ನುಡಿದನು. ಆದರೆ ಆ ಯಜಮಾನನು—ನಮಗೆ ಸಹಸ್ರಬ್ರಾಹ್ಮಣರ ಸಂಖ್ಯೆಯು ಭರತಿಯಾಗಿದೆ. ಆದ್ದರಿಂದ ನಿಮಗೆ ಇನ್ನು ಅನ್ನವು ಸಿಗಲಾರದು ಎಂದು ಹೇಳಿದನು. ಬ್ರಾಹ್ಮಣನು—ಸ್ವಾಮೀ ಸಾವಿರ ಜನರು ಭರತಿಯಾ ದರೆ ತಪ್ಪೇನು ನಾನೊಬ್ಬನು ನಿಮಗೆ ಭಾರವಾಗುವೆನೇ ಮಧ್ಯಾನ್ಹವಾಗಿದೆ ನಾನು ಮುದುಕನು, ಅನ್ನವಿಲ್ಲದೆ ಬಳಲುತ್ತಿದ್ದೇನೆ. ನನಗೊಬ್ಬನಿಗೆ ಒಂದು ಎಲೆ ಹಾಕಿಸಿ ಪುಣ್ಯಕಟ್ಟಿಕೊಳ್ಳಿರಿ ಎಂದು ದೈನ್ಯದಿಂದ ನುಡಿಯುತ್ತ ಅಲ್ಲಿಯೇ ಕುಳಿತುಬಿಟ್ಟನು. ಆದರೆ ಆ ಯಜಮಾನನಿಗೆ ದಯವಿದ್ದರಷ್ಟೇ; ಅವನು ಕ್ರೋಧ ದಿಂದ ಸಂತಪ್ತನಾಗಿ ಆ ಕೂಡಲೆ ಸೇವಕರನ್ನು ಕರೆದು ಬ್ರಾಹ್ಮಣನನ್ನು ಹೊರಗೆ ಹಾಕಿಸಿದನು. ಮುದುಕನು ಗಡಗಡನೆ ನಡುಗುತ್ತ ಹೊರಗೆ ಬಂದು ಕುಳಿತನು.

ಅಷ್ಟರಲ್ಲಿ. ಏಕೋವಿಷ್ಣುಮಂತ್ರ ಪಠನವಾಗಿ ಬ್ರಾಹ್ಮಣರು ಊಟಕ್ಕೆ ಕುಳಿತರು.

ಬಳಿಕ ಆ ವೃದ್ಧಬ್ರಾಹ್ಮಣರೂಪೀ ಪಾಂಡುರಂಗನು ಬೋಧರಾಜನನ್ನು ಕುರಿತು—ಭಕ್ತಶ್ರೇಷ್ಠನೇ, ನೋಡಿದೆಯಾ, ಶ್ರೀಮಂತರ ಅಹಂಭಾವದ ಅನ್ನ ದಾನವನ್ನು! ಸಾವಿರಾರು ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸಿದ ಈತನಿಗೆ ನನ ಗೊಬ್ಬನಿಗೆ ಅನ್ನಹಾಕಲು ಆಗಲಿಲ್ಲ. ಆದ್ದರಿಂದ ಇವರ ಅನ್ನದಾನದಲ್ಲಿ ಎಷ್ಟರ ಮಟ್ಟಿಗೆ ಶ್ರದ್ಧೆಯಿದೆ? ನೋಡು, ಎಂದು ಹೇಳಿದನು.

ಅನಂತರ ಬೋಧರಾಜನೂ, ಪಾಂಡುರಂಗನೂ ಅಲ್ಲಿಂದ ಹೊರಟುಹೋದರು. ದೇಹದಲ್ಲಿಯ ಪ್ರಾಣವು ಹೊರಟುಹೋದ ಬಳಿಕ ದೇಹಕ್ಕೆ ಅಮಂಗಲತ್ವವು ಬರುವಂತೆಯೂ, ಜೀವನವು(ನೀರು) ಆಟ್ಟಿಸಿದ ಬಳಿಕ ಮೀನವು ತಳಮಳಗೊಳ್ಳುವಂತೆಯೂ, ಶ್ರೀಮಂತನ ಅನ್ನಸಂತರ್ಪಣೆಯು ಸ್ಥಿತಿಯಾಯಿತು. ಪ್ರತ್ಯಕ್ಷ ಪಾಂಡುರಂಗನು ಹೊರಟುಹೋದ ಬಳಿಕ ಆ ಸ್ಥಳವು ಅಮಂಗಲವಾಗಿ ತೋರಲಾರಂಭಿಸಿತು. ಜಗತ್ತಿಗೆ ಮಂಗಳಕರನಾದ ಪ್ರಭುವೇ ಹೊರಟುಹೋದ ಬಳಿಕ ಅಲ್ಲಿ ಉಳಿಯಿತಿನ್ನೇನು? ಆ ಕೂಡಲೆ ಪ್ರಚಂಡ ಗಾಳಿಯು ಪ್ರಾರಂಭವಾಯಿತು. ಶ್ರೀಮಂತನು ಕಟ್ಟಿದ ಮಂಟಪವೆಲ್ಲ ಹಾರಿ ಹೋಯಿತು. ಬ್ರಾಹ್ಮಣರ ಎಲೆಗಳಲ್ಲಿ ಧೂಳ-ಉಸುಕು ಬಿದ್ದು, ತಿನ್ನಲಿಕ್ಕೆ ಅಯೋಗ್ಯವಾಯಿತು. ಹೀಗೆ ದೊಡ್ಡ ಉತ್ಪಾತವಾಗಿ ಶ್ರೀಮಂತನ ಸಮಾರಾಧನೆಯು ಮಣ್ಣುಗೂಡಿ ಹೋಯಿತು.

ಪ್ರಿಯ ವಾಚಕರೇ, ಈ ಕಥೆಯು ಬಹು ಮಹತ್ವದ್ದಿರುವದು. ಶ್ರೀ ಪಾಂಡುರಂಗನು ಕೇವಲ ಲೋಕೋಪಕಾರಾರ್ಥವಾಗಿಯೇ ಈ ಧರ್ಮವನ್ನು ಬೋಧರಾಜನಿಗೆ ತೋರಿಸಿಕೊಟ್ಟನು. ಅನ್ನದಾನ ಮಾಡಬೇಕಾದರೆ ನಿರಭಿಮಾನದಿಂದ ಮಾಡಬೇಕು. ಭೂತದಯೆ ಇರಬೇಕು. ಅಂದರೇ ಅದು ನಿಜವಾದ ಅನ್ನದಾನವೆನಿಸುವದು. ಹಾಗು ಆ ಅನ್ನದಾನದಿಂದ ಭಗವಂತನು ತೃಪ್ತನಾಗುವನು. ಆದರೆ ಅಹಂಭಾವದ ಅನ್ನದಾನಕ್ಕೆ ಭಗವಂತನು ಎಂದೂ ತೃಪ್ತನಾಗಲಾರನು. ಇದನ್ನು ಲಕ್ಷದಲ್ಲಿಟ್ಟು ಯಾರಾದರೂ ಅನ್ನದಾನಮಾಡಬೇಕು. ಇರಲಿ.

ಬೋಧರಾಜನು ಪಾಂಡುರಂಗನ ಅಪ್ಪಣೆ ಪಡೆದು ಊರಿಗೆ ಹೊರಟನು. ಅವನಿಗೆ ನಡುದಾರಿಯಲ್ಲಿ ನೀರಡಿಕೆಯಾಗಿ ಬಹಳ ಸಂಕಟವಾಗಹತ್ತಿತು. ಸಮೀಪದಲ್ಲಿ ಎಲ್ಲಿಯೂ ನೀರು ಇದ್ದಿಲ್ಲ. ಕೆಟ್ಟ ಗುಡ್ಡುಗಾಡು ಪ್ರದೇಶದಲ್ಲಿ ಜಲಾಶಯವೆಲ್ಲಿಂದ ಬರಬೇಕು? ಆದರೆ ಭಕ್ತವತ್ಸಲನಾದ ಪಾಂಡುರಂಗನು ಬೋಧರಾಜ

ನಿಗಾದ ತಾಪವನ್ನು ನೋಡಿ ಸಮೀಪದಲ್ಲಿಯೇ ಒಂದು ತೋಟವನ್ನುಂಟು ಮಾಡಿ ತಾನು ತೋಟಿಗನಾಗಿ ಬಾಗಿಲಲ್ಲಿ ಕುಳಿತನು. ಬೋಧರಾಜನು ಸಮೀ ಪಕ್ಕೆ ಬರಲು, ಆತನನ್ನು ಆದರದಿಂದ ಕರೆದೊಯ್ದು ಉತ್ತಮವಾದ ಭಾವಿಯನ್ನು ತೋರಿಸಿದನು. ನೀರಡಿಸಿದ ಬೋಧರಾಜನು ಭಗವಂತನ ಮಾಯೆಯಿಂದ ನಿರ್ಮಿತವಾದ ಭಾವಿಯಲ್ಲಿ ನೀರು ಕುಡಿದು ತೃಪ್ತನಾದನು. ಮತ್ತೆ ದಾರೀ ನಡೆಯಲಿಕ್ಕೆ ಅವನಿಗೆ ಶಕ್ತಿ ಬಂದಿತು. ಬೋಧರಾಜನು ತೋಟದಿಂದ ಹೊರ ಬಿದ್ದ ಕೂಡಲೆ ಆ ತೋಟವೂ, ಭಾವಿಯೂ ಮಾಯವಾದವು. ಆ ತೋಟಿಗನೂ ಮಾಯವಾದನು. ಇದು ಭಗವಂತನ ಕೃತಿಯೆಂದು ತಿಳಿದು ಬೋಧರಾಜನು ಭಗವನ್ನಾಮಗಾಯನ ಮಾಡುತ್ತ ಊರಿಗೆ ಬಂದನು.

ಭಗವದ್ಭಕ್ತರ ಮಹಿಮೆಯು ಯಾಗಗೂ ತಿಳಿಯುವದಿಲ್ಲ. ಭಗವಂತನೊ ಬ್ಬನಿಗೇ ಭಕ್ತರ ಯೋಗ್ಯತೆಯು ಗೊತ್ತಿರುತ್ತದೆ. ಬೋಧರಾಜನು ಊರಿಗೆ ಬಂದ ಬಳಿಕ ಅವನ ಹೆಂಡರು ಮಕ್ಕಳು ಅವನನ್ನು ಹೊಲ ಕಾಯಲಿಕ್ಕೆ ಹಚ್ಚಿ ದರು. ಆ ವರುಷ ಬೋಧರಾಜನ ಹೊಲವು ಚನ್ನಾಗಿ ಬೆಳೆದಿತ್ತು. ಆದ್ದರಿಂದ ಬೋಧರಾಜನ ಹೆಂಡತಿಯು ನುಡಿದದ್ದೇನಂದರೆ—ನೀವು ದಾನಶೂರರಾದ್ದರಿಂದ ನಿಮಗೆ ಯಾವದೂ ಪರಿವೆಯುಳಿಯುವದಿಲ್ಲ. ಈ ಸಾರೆ ಭೂಮಿಯು ಬೆಳೆದಿರು ವದು. ಮಕ್ಕಳುಮರಿಗಳ ಕಷ್ಟವು ಹಿಂಗುವದು. ನೀವು ಮಾತ್ರ ಹೊಲದಲ್ಲಿಯ ಕಾಳುಗಳನ್ನು ಯಾಗಗೂ ಕೊಡಬೇಡಿರಿ. ಕೊಟ್ಟರೆ ನಿಮಗೆ ಪಾಂಡುರಂಗನ ಆಣೆಯದೆ.

ಈ ಮೇರೆಗೆ ಹೆಂಡತಿಯು ನುಡಿದರೂ ಬೋಧರಾಜನು ನಗುತ್ತಲೇ ಇದ್ದನು. ಆತನು ಹೊಲಕಾಯುವಾಗ ಅನೇಕ ಜನ ವೈಷ್ಣವರು ಅವನ ಬಳಿಗೆ ಬಂದರು. ಬೋಧರಾಜನು ಅವರಿಗೆ ಸಾಷ್ಟಾಂಗನಮಸ್ಕಾರ ಮಾಡಿದನು. ಆಗ ಅವರು ಅವನ ಬಳಿಯಲ್ಲಿ ಧಾನ್ಯವನ್ನು ಯಾಚಿಸಲು ಬೋಧರಾಜನು—ಮಹಾ ರಾಜ; ನಾನು ಈ ಹೊಲದಲ್ಲಿಯ ಕಾಳುಗಳನ್ನು ಕೈಯಿಂದ ಮುಟ್ಟ ಕೊಡು ವಂತಿಲ್ಲ. ಯಾಕಂದರೆ ಹಾಗೆ ಮಾಡಕೂಡದೆಂದು ನನ್ನ ಹೆಂಡತಿಯು ಪಾಂಡು ರಂಗನ ಆಣೆ ಇಟ್ಟಿದ್ದಾಳೆ. ಆದ್ದರಿಂದ ನೀವೇ ನಿಮ್ಮ ಕೈಯಿಂದ ಬೇಕಾದಷ್ಟು ಧಾನ್ಯ ತಕ್ಕೊಂಡು ಹೋಗಬಹುದೆಂದು ಹೇಳಿದನು. ಆತನ ಈ ಔದಾರ್ಯ ವನ್ನು ನೋಡಿ ವೈಷ್ಣವರು ಹೊಲವನ್ನೆಲ್ಲ ಬರಿದು ಮಾಡಿಬಿಟ್ಟರು. ಈ ಸಂಗ ತಿಯು ಅವನ ಮಕ್ಕಳಿಗೂ ಹೆಂಡತಿಗೂ ತಿಳಿಯಲು, ಅವರು ತುಂಬಾ ಅಸಮಾ

ಧಾನಪಟ್ಟರು. ಬೋಧರಾಜನು ಅವರಿಗೆ ಸಮಾಧಾನವನ್ನು ಹೇಳಿ ಅವರ ಅಜ್ಞಾನವನ್ನು ಕಳೆದನು. ಹೀಗೆ ಬೋಧರಾಜನು ತನ್ನ ಅಗಾಧವಾದ ದಾತೃತ್ವಶಕ್ತಿಯಿಂದ ಭಗವಂತನ ಪ್ರೀತಿಗೆ ಪಾತ್ರನಾಗಿ ಜಗದ್ವಿಖ್ಯಾತ ಸಾಧುವೆನಿಸಿಕೊಂಡನು.

# ಗಣೇಶನಾಥ.

ಉಜ್ಜನೀಪ್ರಾಂತದಲ್ಲಿ ಗಣೇಶನಾಥನೆಂಬ ಒಬ್ಬ ಪ್ರಸಿದ್ಧ ಭಕ್ತನಿದ್ದನು. ಆತನು ಭಾಂಡಾರಿಜಾತಿಯವನಾಗಿದ್ದನು. ಆತನಲ್ಲಿ ನಿಸ್ಸೀಮವಾದ ಭಕ್ತಿಯಿತ್ತು. ವಿಷಯಗಳಲ್ಲಿಯಂತೂ ಪೂರ್ಣ ವಿರಕ್ತನಿದ್ದನು. ಈತನು ಸರ್ವದಾ ಅರಣ್ಯದಲ್ಲಿ ವಾಸಿಸಿ ಭಗವಚ್ಚಿಂತನ ಮಾಡುತ್ತಿದ್ದನು. ರಾತ್ರಿಯಲ್ಲಿ ಊರಲ್ಲಿ ಒಂದು ಕೀರ್ತನ ಮಾಡುತ್ತಿದ್ದನು. ಆತನ ರಸಾಲವಾಣಿಯನ್ನು ಕೇಳಿ ಸಾವಿರಾರು ಜನ ಶ್ರೋತೃಗಳು ನೆರೆಯುತ್ತಿದ್ದರು. ಶಿವಾಜಿರಾಜನ ಕಿವಿಯ ವರೆಗೆ ಈ ಗಣೇಶನಾಥರ ಕೀರ್ತಿಯು ಹೋಯಿತು. ಆತನು ಒಮ್ಮೆ ಗಣೇಶನಾಥನ ಕೀರ್ತನಕ್ಕಾಗಿ ಬಂದನು. ಗಣೇಶನಾಥನು ಕವಿತೆಗಳನ್ನು ರಚಿಸಿ ಕೀರ್ತನ ಮಾಡುವದನ್ನು ನೋಡಿ ಶಿವರಾಜನು ತುಂಬಾ ಸಂತುಷ್ಟನಾದನು. ಶಿವರಾಜನು ಒಂದು ಶ್ರೇಷ್ಠವಾದ ಪಲ್ಲಂಗವನ್ನು ಮಾಡಿಸಿದ್ದನು. ಆ ಪಲ್ಲಂಗದ ಮೇಲೆ ಮೊದಲು ಗಣೇಶನಾಥರನ್ನು ಮಲಗಿಸಿ ಆ ಮೇಲೆ ತಾನು ಉಪಯೋಗಿಸಿಕೊಳ್ಳಬೇಕೆಂದು ಯೋಚಿಸಿ ಗಣೇಶನಾಥರಿಗೆ ತಮ್ಮಲ್ಲಿಗೆ ಬರಲು ಆಮಂತ್ರಣ ಕೊಟ್ಟರು. ರಾಜನ ಈ ಪ್ರೇಮಾದರವನ್ನು ನೋಡಿ ಗಣೇಶನಾಥರು ತುಂಬಾ ಗೊಂದಲದಲ್ಲಿಬಿದ್ದರು. ಆದರೂ ಅವರು ಮನಸ್ಸಿನಲ್ಲಿ ಏನೋ ಒಂದು ಸಂಗತಿಯನ್ನು ನಿರ್ಧರಿಸಿಕೊಂಡು ಶಿವರಾಜನ ಆಮಂತ್ರಣವನ್ನು ಮಾನ್ಯಮಾಡಿದರು. ಹಾಗು ಸಂಗಡ ಎರಡು ಮೂರು ಬೊಗಸೆ ದೊಡ್ಡ ದೊಡ್ಡ ಹರಳುಗಳನ್ನು ಆರಿಸಿ ತಕ್ಕೊಂಡರು. ಈ ಹರಳುಗಳು ಯಾತಕ್ಕೆಂದು ಶಿವರಾಜನು ಕೇಳಲು ಜಪಸಂಖ್ಯೆಯನ್ನು ಗೊತ್ತು ಮಾಡಲಿಕ್ಕೆಂದು ಹೇಳಿದರು. ಬಳಿಕ ಶಿವರಾಯರು ಆತನೊಡನೆ ಬಿಡಾರಕ್ಕೆ ಹೋದರು. ಯಥಾಸ್ಥಿತವಾಗಿ ಊಟವಾದ ಬಳಿಕ ಶಿವಾಜಿರಾಜರು

ತಮ್ಮ ಹೊಸ ಪಲ್ಲಂಗವನ್ನು ತರಿಸಿ ಅದರ ಮೇಲೆ ಹಂಸತೂಲಿಕಾ ತಲ್ಪವನ್ನು ಹಾಕಿ ಮೇಲೆ ಸುಗಂಧಿಕ ಪುಷ್ಪಗಳನ್ನು ಹರವಿ ಪಡದೆಯನ್ನು ಇಳಿಬಿಟ್ಟರು. ಇಂಥ ಸುಖ ಶಯ್ಯೆಯ ಮೇಲೆ ಮಲಗಬೇಕಾದರೆ ಗಣೇಶನಾಥರಿಗೆ ಹ್ಯಾಗೆ ಹ್ಯಾಗೋ ಅನಿಸಹತ್ತಿತು. ಅವರಿಗೆ ವಿಷಯಸುಖವೆಂದರೆ ಮೊದಲಿನಿಂದಲೂ ತಿರಸ್ಕಾರವಿತ್ತು. ಅಗ್ನಿಹೋತ್ರಿ ಬ್ರಾಹ್ಮಣನನ್ನು ಯವನರ ಮನೆಯಲ್ಲಿರಿಸಿದರೆ ಅವನು ದುಃಖಪಡುವಂತೆ ಆತನು ದುಃಖಪಡಲಾರಂಭಿಸಿದನು. ಶಿವರಾಜನು ಇಂಥ ಸುಖಶಯ್ಯೆಯ ಮೇಲೆ ಗಣೇಶನಾಥನನ್ನು ಮಲಗಿಸಿ ತಾನು ಮಲಗುವದ ಕ್ಕಾಗಿ ಹೊರಟು ಹೋದನು. ಆಗ ಗಣೇಶನಾಥನು ಎದ್ದು ಸಂಗಡ ತಂದಿದ್ದ ಹರಳುಗಳನ್ನು ಆ ಹಾಸಿಗೆಯ ಮೇಲೆ ಹರವಿ ಅದರ ಮೇಲೆ ಮಲಗಿಕೊಂಡನು. ಮರುದಿನ ಶಿವರಾಜನು ಗಣೇಶನಾಥರ ದರ್ಶನಕ್ಕೆ ಬಂದನು. ನೋಡುತ್ತಾನೆ; ಹಾಸಿಗೆಯ ಮೇಲೆ ಹರಳುಗಳು ಅದನ್ನು ಕಂಡು ನುಡಿದನೇನಂದರೆ— ಸಾಧುಗಳೇ, ಹೀಗೇಕೆ ಮಾಡಿದಿರಿ? ಬುದ್ಧಿಪೂರ್ವಕವಾಗಿ ನಾನು ನಿಮಗೆ ಮೃದು ತಲ್ಪವನ್ನು ಮಾಡಿಕೊಟ್ಟಿರಲು ನೀವು ಅದರ ಮೇಲೆ ಹರಳುಗಳನ್ನು ಹರವಿ ಯಾಕೆ ಮಲಗಿದಿರಿ?

ರಾಜನ ಈ ಪ್ರಶ್ನೆಯನ್ನು ಕೇಳಿ ಗಣೇಶನಾಥರು—ರಾಜನ್, ವಿಷಯ ಗಳು ಪ್ರಾರಂಭಕ್ಕೆ ಸೌಖ್ಯಪ್ರದಾಯಕಗಳೆಂದು ಕಂಡು ಬಂದರೂ, ಕೊನೆಗೆ ಅವುಗಳಿಂದ ಬಹಳ ದುಃಖವಾಗುವದು. ಆದ್ದರಿಂದ ಬಲ್ಲವರು ವಿಷಯಸುಖ ವನ್ನು ಅನುಭವಿಸಲಿಕ್ಕೆ ಹೋಗುವದಿಲ್ಲ. ಬಚನಾಗವು ಮಹಾ ವಿಷಾರಿಯಾಗಿ ದ್ದರೂ ತಿನ್ನಲಿಕ್ಕೆ ಸ್ವಾದವುಳ್ಳದ್ದಿರುವದು. ಸ್ವಾದವುಳ್ಳದ್ದೆಂದು ಅದನ್ನು ತಿಂದ ಮನುಷ್ಯನು ಇಹಲೋಕಕ್ಕೆ ಕೊನೆಯ ನಮಸ್ಕಾರವನ್ನು ಮಾಡಬೇಕಾಗು ವದು. ಯಾವ ವಿಷಯವಾದರೂ ದೇಹಕ್ಕೆ ದುಃಖ ಕೊಡುವದಲ್ಲದೆ ಸುಖಕೊಡ ಲಾರದು. ರಾಜನೇ, ವಿರಕ್ತರಾದ ನಮಗೆ ಈ ವಿಷಯಗಳಿಂದ ಪ್ರಯೋಜನ ವೇನು? ದೇಹಕ್ಕೆ ಒಮ್ಮೆ ವಿಷಯಗಳ ಅಭಿರುಚಿಯು ಹತ್ತಿತೆಂದರೆ ಮುಂದೆ ಅದು ವಿಷಯಗಳು ಸಿಗದೆ ಇದ್ದಾಗ ದುಃಖಪಡುವದು. ದೇಹದ ಸುಖ-ದುಃಖ ಗಳನ್ನು ತೊರೆದವನೇ ವಿರಾಗಿಯು, ಎಂದು ನುಡಿದರು.

ಗಣೇಶನಾಥನ ಈ ವೈರಾಗ್ಯಪೂರ್ಣವಾದ ಭಾಷಣವನ್ನು ಕೇಳಿ ಶಿವರಾ ಜನು ತುಂಬಾ ಸಂತುಷ್ಟನಾದನು. ಸಾಧುಗಳನ್ನು ಸಮಾಸಿ ಅವರನ್ನು ಕಳಿಸಿ ಮಂಚವನ್ನು ಬ್ರಾಹ್ಮಣರಿಗೆ ದಾನಮಾಡಿ ತನ್ನ ರಾಜಧಾನಿಗೆ ಹೊರಟುಹೋ

ದನು. ಕೇವಲ ಭಗವಂತನಲ್ಲಿಯೇ ಮನಸ್ಸನ್ನಿಟ್ಟವರಿಗೆ ವಿಷಯಗಳ ಅಭಿಲಾಷೆಯು ಉಳಿಯಲಾರದು.

---

# ಗೋಮಾಯಿ.



ಗೋಮಾಯಿ ನಾಮಕ ಓರ್ವ ಬ್ರಾಹ್ಮಣ ವಿಧವೆಯಿದ್ದಳು. ಆಕೆಯು ಬಹಳ ಬಡವಿಯು. ಆಕೆಗೆ ಹೊಟ್ಟೆಗೆ ಅನ್ನ, ಉಡಲಿಕ್ಕೆ ಬಟ್ಟೆ ಇವು ಇದ್ದಿಲ್ಲ. ಅವಳು ಬಹಳ ಕಷ್ಟದಿಂದ ಕಾಲಕ್ರಮಣ ಮಾಡುತ್ತಿದ್ದಳು. ಆದರೆ ಪಾಂಡುರಂಗನಲ್ಲಿ ಆಕೆಯು ನಿಸ್ಸೀಮಭಕ್ತಿಯನ್ನು ತಾಳಿದ್ದಳು. ಇಂಥ ದಾರಿದ್ರ್ಯಸ್ಥಿತಿಯಲ್ಲಿ ಆಕೆಗೆ ಪಂಢರೀಯಾತ್ರೆಗೆ ಹೋಗುವ ಇಚ್ಛೆಯಾಯಿತು. ಆಕೆಯು ಕಾಲಿನಿಂದ ನಡೆಯುತ್ತ ಯಾತ್ರೆಗೆ ಹೊರಟಳು. ದಾರಿಯಲ್ಲಿ ಧಾನ್ಯದ ಭಿಕ್ಷೆ ಅಥವಾ ಹಿಟ್ಟಿನ ಭಿಕ್ಷೆಯನ್ನು ಮಾಡಿ ನೀರಿದ್ದಲ್ಲಿ ಮೈ ತೊಳೆದು ರೊಟ್ಟೀಮಾಡಿ ಪಾಂಡುರಂಗನಿಗೆ ನೈವೇದ್ಯಸಮರ್ಪಣಮಾಡಿ ಭೋಜನೋತ್ತರ ಮತ್ತೆ ನಡಿಯಲು ಪ್ರಾರಂಭಿಸುತ್ತಿದ್ದಳು. ಹೀಗೆ ಆಕೆಯು ದೇಹಕಷ್ಟವನ್ನು ಸಹಿಸುತ್ತ ಆಷಾಢಶುದ್ಧ ಏಕಾದಶಿಗೆ ಚಂದ್ರಭಾಗಾತೀರಕ್ಕೆ ಬಂದಳು; ಆದರೆ ನದಿಗೆ ಮಹಾಪೂರವು ಬಂದಿತ್ತು. ಯಾತ್ರೆಗೆ ಬಂದ ಲಕ್ಷಾಂತರ ಜನರು ದ್ರವ್ಯ ಕೊಟ್ಟು ನಾವಿನಲ್ಲಿ ಕುಳಿತು ದಾಟುತ್ತಿದ್ದರು. ಆದರೆ ಗೋಮಾಯಿಯು ಬಡವಿಯು; ಕೈಯಲ್ಲಿ ದುಡ್ಡು ಇರಲಿಲ್ಲ. ಆಕೆಯನ್ನು ದಾಟಿಸುವವರಾರು? ಆಕೆಯು ಗಟ್ಟಿ ಧೈರ್ಯವ ಮಾಡಿ ಬೇರೆ ಯಾತ್ರಿಕರೊಡನೆ ನಾವಿನಲ್ಲಿ ಕುಳಿತಳು. ನಾವಿಕನು ದುಡ್ಡು ಬೇಡಿದನು. ಗೋಮಾಯಿಯು ದುಡ್ಡು ಇಲ್ಲವೆಂದು ಹೇಳಿಕೊಳ್ಳಲು, ಆ ನಿರ್ದಯ ನಾವಿಕನು ಆಕೆಯನ್ನು ದಬ್ಬಿಕೊಟ್ಟನು. ಗೋಮಾಯಿಯು ನೀರಲ್ಲಿ ಬಿದ್ದುಬಿಟ್ಟಳು. ಆಕೆಯ ಸೀರೆಯು ತೊಯ್ದುಹೋಯಿತು. ಅವಳು ದುಃಖಪಡುತ್ತ ದಂಡೆಗೆ ಬಂದು ಹತ್ತಿದಳು. ಆಕೆಯ ದೈನ್ಯವನ್ನು ಕೇಳಿ ಯಾರಿಗೂ ದಯ ಹುಟ್ಟಲಿಲ್ಲ. ಎಲ್ಲ ಯಾತ್ರಿಕರೂ ಹೊರಟುಹೋದರು.

ಹೀಗೆ ನದಿಯನ್ನು ದಾಟುವದು ಅಶಕ್ಯವಾಗಲು ಇಷ್ಟುದಿನ ಕಷ್ಟಪಟ್ಟು ಬಂದದ್ದು ವ್ಯರ್ಥವಾಯಿತು. ಏಕಾದಶಿಗೆ ಪಾಂಡುರಂಗನ ದರ್ಶನವಾಗಲಿಲ್ಲ

ವೆಂದು ಆಕೆಯು ಶೋಕಮಾಡಲಾರಂಭಿಸಿದಳು. ಪಾಂಡುರಂಗನ ಧ್ಯಾನ ಮಾಡಲಾರಂಭಿಸಿದಳು. ಆಕೆಯ ಭಾವವನ್ನು ತಿಳಿದು ಪಾಂಡುರಂಗನು ಸಂತುಷ್ಟನಾದನು. ಆಗ ಪಾಂಡುರಂಗನು ತಾನೇ ಅಂಬಿಗನ ವೇಷಧರಿಸಿ ಸಂಗಡ ಕುಂಬಳಕಾಯಿಗಳನ್ನು ತಕ್ಕೊಂಡು ನದಿಯಲ್ಲಿ ಈಸುತ್ತ ಗೋವಾಯಿಯು ಇದ್ದ ಸ್ಥಳಕ್ಕೆ ಬಂದು ಆಕೆಯನ್ನು ಕರೆದು ನದೀ ದಾಟುವ ಸಿದ್ಧತೆಯನ್ನು ಮಾಡೆಂದು ಹೇಳಿದನು ಆಗ ಗೋವಾಯಿಯು ನಾನು ಬಡವಿಯು ತನ್ನಲ್ಲಿ ನಿನಗೆ ಕೊಡಲಿಕ್ಕೆ ದ್ರವ್ಯವಿಲ್ಲವೆಂದು ಹೇಳಿ ಹತ್ತರ ಒಂದು ಬೊಗಸಿ ಹಿಟ್ಟು ಇದೆ, ಇಷ್ಟರಿಂದಲೇ ನೀನು ನನ್ನನ್ನು ದಾಟಿಸುತ್ತಿದ್ದರೆ ದಾಟಿಸು ಎಂದು ಹೇಳಿದಳು. ಆಗ ಅಂಬಿಗನು—ತಾಯಿ, ನಾನು ಬಡವರನ್ನು ನದೀ ದಾಟಿಸುವ ಕೆಲಸವನ್ನು ಎಷ್ಟೋ ವರುಷಗಳಿಂದ ಮಾಡುತ್ತ ಬಂದಿದ್ದೇನೆ. ನನಗೆ ನೀನು ದ್ರವ್ಯಕೊಡುವ ಕಾರಣವಿಲ್ಲ. ಬಾ ನನ್ನ ಹೆಗಲಮೇಲೆ ಕೂಡ್ರು ಹಾ ಹಾ ಅನ್ನುವಷ್ಟರಲ್ಲಿ ಆಚೆಯ ದಂಡೆಗೆ ಮುಟ್ಟಿಸುತ್ತೇನೆ ಎಂದನು. ಆಗ ಗೋವಾಯಿಯು ಸಂತೋಷಬಟ್ಟು ತನ್ನ ಸೀರೆ ತೊಯ್ದರೆ ಉಟ್ಟುಕೊಳ್ಳಲಿಕ್ಕೆ ಮತ್ತೊಂದು ಸೀರೆಯಿಲ್ಲ ಎಂದಳು. ಸೀರೆ ತೊಯ್ಯದಂತೆ ಕರೆದೊಯ್ಯುತ್ತೇನೆಂದು ನುಡಿದು ಅಂಬಿಗರೂಪೀ ಪಾಂಡುರಂಗನು ಆಕೆಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಆಚೆಯ ದಂಡೆಗೆ ಒಯ್ದನು. ಗೋವಾಯಿಯು ಅಂಬಿಗನ ಉಪಕಾರ ಸ್ಮರಿಸಿ ಆತನಿಗೆ ಬಳಿಯಲ್ಲಿದ್ದ ಹಿಟ್ಟನ್ನು ಕೊಡಹೋದಳು. ಆದರೆ ಅಂಬಿಗನು ಆ ಹಿಟ್ಟನ್ನು ಸ್ವೀಕರಿಸದೆ ಈ ಹಿಟ್ಟಿನಿಂದ ನಾಳಿಗೆ ದ್ವಾದಶೀ ದಿನ ಬ್ರಾಹ್ಮಣರಿಗೆ ಭೋಜನಕ್ಕೆ ಹಾಕು ಎಂದು ಹೇಳಿ ಎತ್ತೋ ಹೋಗಿಬಿಟ್ಟನು.

ಇತ್ತ ಗೋವಾಯಿಯು ನದಿಯಲ್ಲಿ ಮೈತೊಳೆದು ಪಾಂಡುರಂಗನ ದರ್ಶನಹೊಂದಿದಳು. ಮರುದಿನ ದ್ವಾದಶೀ ದಿವಸ ಮುಖದೊಳೆದು ಆ ಹಿಟ್ಟನ್ನು ಯಾರಿಗಾದರೂ ದಾನಕೊಡಬೇಕೆಂದು ನದಿಯ ತೀರದಲ್ಲಿ ಕುಳಿತಳು. ಆದರೆ ಈ ಬಡವಿಯ ಹಿಟ್ಟನ್ನು ಬೇಡಲಿಕ್ಕೆ ಯಾರು ಬರಬೇಕು? ಭಕ್ತವತ್ಸಲನಾದ ಪಾಂಡುರಂಗನಿಗೇ ಚಿಂತೆಯುತ್ಪನ್ನವಾಯಿತು. ಆತನು ವೃದ್ಧ ಬ್ರಾಹ್ಮಣನ ವೇಷದಿಂದ ಅಲ್ಲಿಗೆ ಬಂದನು. ಗೋವಾಯಿಯು ಆತನಿಗೆ ಹಿಟ್ಟನ್ನು ಸಮರ್ಪಿಸಿದಳು. ಆಗ ಬ್ರಾಹ್ಮಣನು—ತಾಯಿ, ಈ ಹಿಟ್ಟಿನಿಂದ ರೊಟ್ಟಿಗಳನ್ನು ಮಾಡಿಕೊಡು ಇಲ್ಲಿಯೇ ಪಾರಣೆ ತೀರಿಸುತ್ತೇನೆ ಎಂದು ನುಡಿದನು. ಬ್ರಾಹ್ಮಣನ ಈ ಮಾತು ಕೇಳಿ ಗೋವಾಯಿಯು ಸಂತೋಷಬಟ್ಟು ಎರಡು

ರೊಟ್ಟಿಗಳನ್ನು ಸಿದ್ಧಪಡಿಸಿದಳು. ಅಷ್ಟರಲ್ಲಿ ರಖುಮಾಯಿಯು ವೃದ್ಧ ಸುವಾಸಿನಿಯ ರೂಪದಿಂದ ಅಲ್ಲಿಗೆ ಬಂದಳು. ಪಾಂಡುರಂಗ ರಖುಮಾಯಿ ಇಬ್ಬರೂ ಕೂಡಿ ಆ ಎರಡು ರೊಟ್ಟಿಗಳನ್ನು ತಿಂದರು. ಗೋಮಾಯಿಯು ಬ್ರಾಹ್ಮಣ ಸುವಾಸಿನಿಯರ ಹೊಟ್ಟೆಗೆ ರೊಟ್ಟಿಗಳು ಸಾಲದೆ ಹೋದವು ಎಂದು ಚಡಪಡಿಸ ಹತ್ತಿದಳು. ಅಷ್ಟರಲ್ಲಿ ಬ್ರಾಹ್ಮಣ ಸುವಾಸಿನಿಯರಿಬ್ಬರೂ ಅದೃಶ್ಯರಾದರು. ಗೋಮಾಯಿಯು ಆಶ್ಚರ್ಯಪಟ್ಟಳು. ತಾನು ಬಡವಿಯಾದ್ದರಿಂದ ಪ್ರತ್ಯಕ್ಷ ಪಾಂಡುರಂಗನೇ ಬಂದು ಬ್ರಾಹ್ಮಣ ವೇಷದಿಂದ ಪಾರಣೀ ತೀರಿಸಿದನೆಂದು ಆಕೆಗೆ ತುಂಬಾ ಸಂತೋಷವಾಯಿತು. ಆಕೆಯ ಭಕ್ತಿಯು ವೃದ್ಧಿಂಗತವಾಯಿತು. ಈ ಶ್ರೇಷ್ಠವಾದ ಭಕ್ತಿಯೋಗದಿಂದ ಆಕೆಯು ಭಗವತ್ ಕೃಪೆಗೆ ಪಾತ್ರಳಾದಳು.

---

## ಲತೀಬಶಹಾ.

ಲತೀಬಶಹಾನಾಮಕ ಓರ್ವ ಯವನನು ವಿಷ್ಣುಭಕ್ತನಾಗಿದ್ದನು. ಆತನು ಸದೈವ ರಾಮಚಿಂತನದಲ್ಲಿ ಕಾಲಕ್ರಮಣ ಮಾಡುತ್ತಿದ್ದನು. ಆತನ ಈ ರಾಮಭಕ್ತಿಯನ್ನು ನೋಡಿ ಯವನರು ಸಿಟ್ಟಿಗೆದ್ದರು. ಲತೀಬನು ಜಾತಿಭ್ರಷ್ಟನಾಗಿರುವನು. ಹಿಂದುಗಳ ದೇವರನ್ನು ಭಜಿಸುವನೆಂದು ಬಾದಶಹನೆದುರಿಗೆ ದೂರು ಹೇಳಿದರು. ಮುಸಲ್ಮಾನನು—ಪೈಗಂಬರನ ಭಕ್ತನು ಹಿಂದುಗಳ ದೇವರನ್ನು ಭಜಿಸುವನೆಂಬದನ್ನು ಕೇಳಿ ಬಾದಶಹನು ಸಂತಪ್ತನಾದನು. ಆಗ ಆತನು ಲತೀಬಶಹನ ಆಶ್ರಮವನ್ನು ಲೂಟಿ ಮಾಡಿ ತರಲು ಆಜ್ಞಾಪಿಸಿದನು. ರಾಜನ ದೂತನು ಲತೀಬಶಹಾನ ಆಶ್ರಮಕ್ಕೆ ಬಂದನು. ಆದರೆ ಆ ವೈಷ್ಣವನ ದರ್ಶನವಾದ ಕೂಡಲೇ ರಾಜಾಜ್ಞೆಯನ್ನು ಮರೆತು ಆತನೂ ವೈಷ್ಣವನಾಗಿ ಅವನ ಶಿಷ್ಯನಾದನು. ದೂತನು ತಿರುಗಿ ಬರಲಿಲ್ಲವೆಂದು ಬಾದಶಹನು ತಾನೇ ಹೊರಟನು. ಬಾದಶಹನು ಬರುವನೆಂದು ತಿಳಿದು ಲತೀಬಶಹನು ಹೊರಗೆ ವೃಂದಾವನ ಕಟ್ಟೆಯ ಮೇಲೆ ಭಾಗವತವನ್ನು ಓದುತ್ತ ಕುಳಿತನು. ಸುತ್ತಲೂ ಭಾವಿಕ ಜನರು ಕೇಳುತ್ತ ಕುಳಿತರು. ಅಷ್ಟರಲ್ಲಿ ಬಾದಶಹನು ಅಲ್ಲಿಗೆ ಬಂದನು. ಅವನು ಬಂದಕೂಡಲೆ ಗಡಬಿಡಿಯನ್ನು ಮಾಡದೆ ಕೆಲಹೊತ್ತು ಆ ಶ್ರೋತೃಮಂಡಳಿಯಲ್ಲಿ ಸುಮ್ಮನೆ ಕುಳಿತು ಆ ಸ್ಥಳದ ನಿರೀಕ್ಷಣೆ ಮಾಡಲಾರಂಭಿಸಿದನು.

ಲತೀಬಶಹನು ಕುಳಿತ ಆ ಅಂಗಳವು ಗೋಮಯದಿಂದ ಸ್ವಚ್ಛವಾಗಿ ಸಾರಿಸಲ್ಪಟ್ಟಿತ್ತು. ನಾನಾ ತರದ ಹೂವಿನ ಗಿಡಗಳು ಅಲ್ಲಿದ್ದವು. ಮಧ್ಯದಲ್ಲಿ ವೃಂದಾವನವಿತ್ತು. ವೃಂದಾವನದ ಗೋಡೆಗೆ ದಶಾವತಾರದ ಚಿತ್ರಗಳನ್ನು ಬರೆದಿದ್ದರು. ರಾಧಾ-ಕೃಷ್ಣನ ಚಿತ್ರಗಳು ಬರೆಯಲ್ಪಟ್ಟಿದ್ದವು. ರಾಧೆಯು ಕೃಷ್ಣನಿಗೆ ವೀಳ್ಯವನ್ನು ಕೊಡಹೋಗುವಂತೆ ಚಿತ್ರದಲ್ಲಿ ತೋರಿಸಿದ್ದರು. ಬಾದಶಹನು ಈ ಚಿತ್ರವನ್ನು ನೋಡಿ ಸಂತಾಪಗೊಂಡು—ಎಲೈ ಲತೀಬನೇ, ನೀನು ನಿಜವಾಗಿಯೂ ವೈಷ್ಣವನಾಗಿದ್ದರೆ ಈ ರಾಧೆಯು ಕೃಷ್ಣನಿಗೆ ವೀಳ್ಯವನ್ನು ಇನ್ನೂ ಯಾಕೆ ಕೊಟ್ಟಿಲ್ಲ? ಈಕೆಯ ಕೈಯಿಂದ ವೀಳ್ಯವನ್ನು ಇಸಗೊಂಡು ಕೃಷ್ಣನು ಯಾಕೆ ತಿನ್ನಲೊಲ್ಲನು? ಇದನ್ನು ನಮಗೆ ಹೇಳು; ಹಾಗು ಕೃಷ್ಣನಿಂದ ವೀಳ್ಯವನ್ನು ಭಕ್ಷಣಮಾಡಿಸು. ಇಲ್ಲದಿದ್ದರೆ ನಿನ್ನ ಗತಿಯು ನೆಟ್ಟಗಾಗಲಿಕ್ಕಿಲ್ಲ, ಎಂದು ಗದ್ದರಿಸಿದನು. ಬಾದಶಹನ ಈ ಗದ್ದರಿಕೆಯನ್ನು ಕೇಳಿ ಲತೀಬಶಹನು ಎದ್ದುನಿಂತನು. ಹಾಗು ಶ್ರೀ ಕೃಷ್ಣಪರಮಾತ್ಮನನ್ನು ಕುರಿತು—ಎಲೈ ಭಕ್ತವತ್ಸಲನೇ, ರಾಧೆಯು ಪರಮ ಪ್ರೇಮದಿಂದ ವೀಳ್ಯವನ್ನು ತಂದಿದ್ದಾಳೆ. ಆಕೆಯು ತಂದ ವೀಳ್ಯವನ್ನು ಸ್ವೀಕರಿಸಿ ಆಕೆಯನ್ನೂ, ನನ್ನನ್ನೂ ಉದ್ಧರಿಸು, ಎಂದು ಪ್ರಾರ್ಥಿಸಿದನು. ಈ ಪ್ರೇಮಲಭಕ್ತನ ಪ್ರಾರ್ಥನೆಯಂತೆ ಚಿತ್ರದೊಳಗಿನ ಕೃಷ್ಣನು ಬಾಯಿ ತೆರೆದನು. ರಾಧೆಯು ಅವನ ಬಾಯೊಳಗೆ ವೀಳ್ಯೆಯನ್ನು ಹಾಕಿದಳು. ಕೃಷ್ಣನು ತಿಂದನು. ಚಿತ್ರದಲ್ಲಿಯ ರಾಧೆಯ ಕೈಯೊಳಗಿನ ಹಸರು ವೀಳ್ಯೆವು ಇಲ್ಲದಂತಾಯಿತು. ಈ ಚಮತ್ಕಾರವನ್ನು ಪ್ರತ್ಯಕ್ಷವಾಗಿ ಕಂಡು ಬಾದಶಹನು ಅಚ್ಚರಿಗೊಂಡನು. ಲತೀಬಶಹನು ಮಹಾ ಭಗವದ್‌ಭಕ್ತನಿದ್ದು, ಅವನನ್ನು ಛಲಿಸುವದು ಪಾಪಕರವೆಂದು ಅವನಿಗೆ ಪಶ್ಚಾತ್ತಾಪವಾಯಿತು. ಆಗ ಬಾದಶಹನು ಲತೀಬಶಹನ ಕ್ಷಮೆ ಬೇಡಿ ಅರಮನೆಗೆ ಹೊರಟು ಹೋದನು.

---

## ಸಂತೋಬಾ ಪವಾರ.



ರಾಂಜಣಗಾಂವ ಎಂಬಲ್ಲಿ ಸಂತೋಬಾಪವಾರನೆಂಬ ಸರದಾರನಿದ್ದನು. ಈತನು ಮಹಾಯೋದ್ಧಾಪುರುಷನು; ಈತನಿಗೆ ದೊಡ್ಡ ಜಾಹಗೀರು ಇತ್ತು. ಬಾದಶಹನ ಸರದಾರನಾದ್ದರಿಂದ ಧನ-ದೌಲತ್ತಿಗೆ ಕೊರತೆಯಿದ್ದಿಲ್ಲ. ಈತನು ಒಮ್ಮೆ ತುಕಾರಾಮಸಾಧುಗಳ ಕೀರ್ತನಕ್ಕೆ ಹೋಗಿದ್ದನು, ಸಾಧುಗಳ ಕೀರ್ತನ

ವನ್ನು ಕೇಳಿ ಆತನಿಗೆ ವೈರಾಗ್ಯವುತ್ಪನ್ನವಾಯಿತು. ಕೂಡಲೆ ಅವನು ತನ್ನ ಸಂಪತ್ತನ್ನೆಲ್ಲ ಬ್ರಾಹ್ಮಣರಿಗೆ ದಾನ ಮಾಡಿ ನಾಲ್ಕುಮೊಳದ ಒಂದು ಹರಕ ಫಡಕಿಯನ್ನುಟ್ಟುಕೊಂಡು ಮುಳಾಮುಠಾಸಂಗಮದಲ್ಲಿಯ ಗಡ್ಡೆಯಲ್ಲಿ ನಾಮಸ್ಮರಣ ಮಾಡುತ್ತ ಕುಳಿತನು. ತನ್ನ ಮಗನು ವಿರಕ್ತನಾದನೆಂದು ತಿಳಿದು ಪವಾರನ ತಾಯಿಯು ದುಃಖಪಟ್ಟು ಮಗನಿಗೆ ಉಪದೇಶ ಮಾಡಿ ಪುನಃ ಸಂಸಾರಕ್ಕೆ ಹಚ್ಚಬೇಕೆಂದು ಸೊಸೆಯನ್ನು ಕರೆದುಕೊಂಡು ಗಡ್ಡಿಗೆ ಬಂದಳು. ಆ ಗಡ್ಡೆಯಲ್ಲಿ ಒಂದು ಈಶ್ವರದೇವಾಲಯವಿತ್ತು. ಆ ಗುಡಿಯಲ್ಲಿ ಪಾಂಡುರಂಗನ ಭಜನೆ ಮಾಡುತ್ತ ಸಂತೋಬನು ಕಣ್ಣು ಮುಚ್ಚಿಕೊಂಡು ಕುಳಿತಿದ್ದನು. ಆತನ ತಾಯಿಯು ಸೊಸೆಯೊಡನೆ ಅಲ್ಲಿಗೆ ಹೋಗಲು ಹೆಂಡತಿಯನ್ನು ನೋಡಿ ಸಂತೋಬನು ಸಿಟ್ಟಿಗೆದ್ದನು; ಮತ್ತು ನೀನು ಇಲ್ಲಿಗೆ ಬರಕೂಡದು ಅತ್ತ ಹೊರಟು ಹೋಗು ಎಂದು ಗದ್ದರಿಸಿದನು.

ಸಂತೋಬನ ಹೆಂಡತಿಯು ಸ್ವಲ್ಪಾದರೂ ಅಂಜದೆ—ಸಮುದ್ರವು ಜಲಚರಗಳ ಮೇಲೆ ಸಿಟ್ಟಾದರೆ ಅವು ಹೋಗುವದೆಲ್ಲಿ? ಬಂಗಾರವನ್ನೂ, ಕಾಂತಿಯನ್ನೂ ಬೇರೆ ಮಾಡಲಿಕ್ಕೆ ಬರುವದೇ? ಅದರಂತೆ ಪತಿವ್ರತೆಗೆ ಪತಿಯ ಹೊರತು ಬೇರೆ ಗತಿಯಿರುವದಿಲ್ಲ, ಎಂದು ನುಡಿದಳು. ಹೆಂಡತಿಯ ಈ ಮಾತುಗಳನ್ನು ಕೇಳಿ ಸಂತೋಬನು ನುಡಿದನೇನಂದರೆ:—"ನೀನು ನನ್ನ ಹೆಂಡತಿಯಾಗಿದ್ದರೆ ಹೀಗೆ ಮೈತುಂಬ ಅಲಂಕಾರಗಳನ್ನು ಇಟ್ಟುಕೊಂಡು ಇಲ್ಲಿಗೆ ಬರುತ್ತಿರಲಿಲ್ಲ. ನಿನಗೆ ನನ್ನ ಮೇಲೆ ಪ್ರೇಮವಿದ್ದರೆ, ನನ್ನಂತೆ ವೈರಾಗ್ಯಶೀಲಳಾಗಬೇಕು. ಹಾಗಿದ್ದರೆ ಈ ಅಲಂಕಾರಗಳನ್ನು ಬಿಸುಟಿ ಒಂದು ಫಡಕಿಯನ್ನುಟ್ಟುಕೊಂಡು ವಿರಕ್ತಳಾಗಿ ನನ್ನ ಬಳಿಯಲ್ಲಿರು."

ಸಂತೋಬನ ಹೆಂಡತಿಯು ಮಹಾ ಪತಿವ್ರತೆಯಿದ್ದಳು. ಆಕೆಯು ಕೂಡಲೆ ಮೈಮೇಲಿನ ಅಲಂಕಾರಗಳನ್ನೆಲ್ಲ ಬಿಸುಟಿ ಗಂಡನ ಧೋತರದಲ್ಲಿ ಅರ್ಧ ಹರಿದು ಉಟ್ಟುಕೊಂಡು ವೈರಾಗ್ಯದೀಕ್ಷೆಯನ್ನು ಹೊಂದಿದಳು. ಹೆಂಡತಿಯ ಈ ಕೃತಿಯನ್ನು ನೋಡಿ ಸಂತೋಬನಿಗೆ ಪರಮ ಸಂತೋಷವಾಯಿತು. ಮುಂದೆ ಒಂದು ದಿನ ಸಂತೋಬನು ಹೆಂಡತಿಯನ್ನು ಸಮೀಪದ ಒಂದು ಹಳ್ಳಿಗೆ ಭಿಕ್ಷೆಗಾಗಿ ಕಳಿಸಿದನು. ಇಡೀ ರೊಟ್ಟಿಯನ್ನು ಯಾರಾದರೂ ಹಾಕಿದರೆ ಹಾಕಿಸಿಕೊಳ್ಳಬೇಡವೆಂದು ಅಪ್ಪಣೆಯನ್ನು ಮಾಡಿದ್ದನು. ಈ ಊರಲ್ಲಿ ಸಂತೋಬನ ತಂಗಿಯಿದ್ದಳು. ಸಂತೋಬನ ಹೆಂಡತಿಯು ಮಾನಾಪಮಾನಗಳನ್ನು ತೊರೆದು, ಭಿಕ್ಷೆ ಬೇಡುತ್ತ

ತನ್ನ ನಾದಿನಿಯ ಮನೆಗೆ ಹೋದಳು. ತನ್ನ ಅತ್ತಿಗೆಯು ಭಿಕ್ಷುಕಿಯಾದದ್ದನ್ನು ತಿಳಿದು ಸಂತೋಬನ ತಂಗಿಯು ದುಃಖಪಟ್ಟು ಅತ್ತಿಗೆಯ ಕುತ್ತಿಗೆಗೆ ತೆಕ್ಕೆಬಿದ್ದು ಅತ್ತಳು. ಸಂತೋಬನ ಹೆಂಡತಿಯು ಸಮಾಧಾನದಿಂದ ಎಲ್ಲ ಸಂಗತಿಗಳನ್ನು ಹೇಳಿದಳು. ಬಳಿಕ ಆ ಸ್ತ್ರೀಯು ಎರಡು ರೊಟ್ಟಿ, ತುಪ್ಪ, ಬೆಲ್ಲ, ತಂದು ತನ್ನ ಅತ್ತಿಗೆಯ ಜೋಳಿಗೆಯಲ್ಲಿ ಹಾಕಹೋದಳು. ಸಂತೋಬನ ಹೆಂಡತಿಯು ಗಂಡನ ವಚನವನ್ನು ಸ್ಮರಿಸಿ, ಇಡೀ ರೊಟ್ಟಿಗಳನ್ನು ಹಾಕಬೇಡವೆಂದು ಆಗ್ರಹಪಟ್ಟಳು. ಆದರೆ ಆ ನಾದಿನಿಯು ಆಣೆ ಮೊದಲಾದವುಗಳನ್ನು ಇಟ್ಟು ಅತ್ಯಾಗ್ರಹದಿಂದ ಆ ರೊಟ್ಟಿಗಳನ್ನು ಜೋಳಿಗೆಯಲ್ಲಿ ಚಲ್ಲಿದಳು. ಬಳಿಕ ಆ ಸ್ತ್ರೀಯು ಗಡ್ಡಿಗೆ ಬಂದು ಗಂಡನ ಮುಂದೆ ಜೋಳಿಗೆಯನ್ನಿಟ್ಟಳು. ಜೋಳಿಗೆಯೊಳಗಿನ ಇಡೀ ರೊಟ್ಟಿಗಳನ್ನು ನೋಡಿ ಸಂತೋಬನು ಇದೇನೆಂದು ಹೆಂಡತಿಯನ್ನು ಕೇಳಿದನು. ಆಗ ಆಕೆಯು ನಡೆದ ಸಂಗತಿಗಳನ್ನು ಹೇಳಿದಳು.

ಸಂತೋಬನು ಆ ರೊಟ್ಟಿಗಳನ್ನು ಸ್ವೀಕರಿಸದೆ ಅವುಗಳನ್ನು ಹಾಗೇ ಭಿಕ್ಷೆ ಹಾಕಿದವರಿಗೆ ಮುಟ್ಟಿಸಿ ಬರಲು ಹೆಂಡತಿಗೆ ಆಜ್ಞೆ ಮಾಡಿದನು. ಆಕೆಯು ಆ ರೊಟ್ಟಿಗಳನ್ನು ತಕ್ಕೊಂಡು ತನ್ನ ನಾದಿನಿಯ ಮನೆಗೆ ಹೋಗಿ ಆಕೆಗೆ ತಿಳಿಹೇಳಿ ಆ ರೊಟ್ಟಿಗಳನ್ನು ತಿರುಗಿ ಕೊಟ್ಟಳು. ಬಳಿಕ ಅವಳು ಗಡ್ಡೆಗೆ ಬರುವದಕ್ಕಾಗಿ ಹೊರಟಳು. ಅಷ್ಟರಲ್ಲಿ ಮೇಲುಗಡೆಗೆ ಮಳೆಯಾದ್ದರಿಂದ ನದಿಯು ತುಂಬಿ ಹರಿಯಲಾರಂಭಿಸಿತು. ಗಂಡನ ಬಳಿಗೆ ಹೋಗುವದಕ್ಕೆ ವಿಘ್ನವುಬರಲು ಪತಿಸೇವೆಯು ಅಂತರಿಸುವದೆಂದು ಆಕೆಯು ಚಿಂತಾಮಗ್ನಳಾಗಿ ಪಾಂಡುರಂಗನ ಧ್ಯಾನ ಮಾಡಿದಳು. ಆಕೆಯ ಶುದ್ಧಭಾವಕ್ಕೆ ಮೆಚ್ಚಿ ಪಾಂಡುರಂಗನು ನದೀ ದಾಟಿಸುವವನ ವೇಷಧಾರಣ ಮಾಡಿ ಅಲ್ಲಿಗೆ ಬಂದು ಆ ಸ್ತ್ರೀಯೊಡನೆ ವಿನಯದಿಂದ ಮಾತನಾಡಿ ಆಕೆಯನ್ನು ಹೆಗಲಮೇಲೆ ಹತ್ತಿಸಿಕೊಂಡು ನದಿಯನ್ನು ದಾಟಿಸಿದನು. ಆ ಸ್ತ್ರೀಯು ಗಂಡನ ಬಳಿಗೆ ಹೋಗಿ ನಡೆದ ಸಂಗತಿಗಳನ್ನು ಹೇಳಿದಳು. ಅಂಬಿಗನ ವೇಷದಿಂದ ಪ್ರತ್ಯಕ್ಷ ಪಾಂಡುರಂಗನೇ ತನ್ನ ಹೆಂಡತಿಗೆ ದರ್ಶನ ಕೊಟ್ಟನೆಂದು ಸಂತೋಬನು ತಿಳಿದನು. ಇದುವರೆಗೂ ತನಗೆ ಪಾಂಡುರಂಗನ ದರ್ಶನವಾಗಲಿಲ್ಲವಲ್ಲ ಎಂದು ಆತನು ಖಿನ್ನನಾದನು. ಬಳಿಕ ಅವನು ಪಾಂಡುರಂಗನ ದರ್ಶನವಾಗುವವರೆಗೆ ಅನ್ನಗ್ರಹಣ ಮಾಡಲಿಕ್ಕಿಲ್ಲೆಂದು ನಿಶ್ಚಯ ಮಾಡಿ ಧ್ಯಾನಮಗ್ನನಾದನು. ಎರಡು ಮೂರು ದಿನ ಕ್ರಮಿಸಿದವು; ಪವಾರನು ಊಟಮಾಡಲಿಲ್ಲ. ಆಗ ಪಾಂಡುರಂಗನು ನೆರೆಹಳ್ಳಿಯ ಒಬ್ಬ ವೈಶ್ಯನ ಸ್ವಪ್ನ

ದಲ್ಲಿ ಸಂತೋಬನನ್ನು ನಿನ್ನ ಮನೆಗೆ ಊಟಕ್ಕೆ ಕರೆದುಕೊಂಡು ಹೋಗು ಎಂದು ಆಜ್ಞಾಪಿಸಿದನು. ಅದರಂತೆ ಆ ವೈಶ್ಯನು ಸಂತೋಬನ ಕಡೆಗೆ ಹೋಗಿ ಕರೆಯಲು ಸಂತೋಬನು ತನ್ನ ನಿರ್ಧಾರವನ್ನು ತಿಳಿಸಿದನು. ಪಾಂಡುರಂಗನು ನಿರ್ವಾಹ ವಿಲ್ಲದೆ ಆತನಿಗೆ ದರ್ಶನವನ್ನು ಕೊಟ್ಟನು. ಸಂತೋಬನು ಸಂತುಷ್ಟನಾದನು.

ಸಂತೋಬನು ಭಿಕ್ಷೆಗೆ ಹೋಗುವ ಒಂದು ಹಳ್ಳಿಯಲ್ಲಿ ಒಬ್ಬ ಬ್ರಾಹ್ಮಣನು ತನ್ನ ಹೆಂಡತಿಯ ಕೂಡ ಯಾವಾಗಲೂ ಜಗಳಾಡುತ್ತಿದ್ದನು. ಆತನು ಜಗಳವಾಡುವಾಗ ನಾನು ಸಂತೋಬನಂತೆ ವಿರಕ್ತನಾಗುತ್ತೇನೆಂದು ಅಂಜಿಸುತ್ತಿದ್ದನು. ಆ ಹೆಣ್ಣುಮಗಳು ಅಂಜಿ ಸುಮ್ಮನಾಗುತ್ತಿದ್ದಳು. ಹೀಗಿರಲು ಒಂದು ದಿನ ಸಂತೋಬನು ಆ ಹೆಣ್ಣುಮಗಳ ಮನೆಗೆ ಭಿಕ್ಷೆಗೆ ಹೋದನು. ಆ ಸ್ತ್ರೀಯು ನಡೆದ ಸಂಗತಿಯನ್ನು ಹೇಳಿದಳು. ಆಗ ಸಂತೋಬನು—ತಾಯಿ, ಇದಕ್ಕೆ ಚಿಂತೆಮಾಡಬೇಡ; ಇನ್ನೊಮ್ಮೆ ನಿನ್ನ ಗಂಡನು ನಿನ್ನ ಕೂಡ ಬಡಿದಾಡಿದನೆಂದರೆ ಆಗ ನೀನು ಅವನಿಗೆ ಅವಶ್ಯವಾಗಿ ವಿರಕ್ತನಾಗಬಹುದೆಂದು ತಿಳಿಸಿಬಿಡು. ಅವನು ನನ್ನ ಬಳಿಗೆ ಬರುವನು; ಆಗ ನಾನು ಅವನಿಗೆ ಚನ್ನಾಗಿ ತಿಳಿಹೇಳಿ ಸಂಸಾರಮಾಡಿಕೊಂಡಿರುವಂತೆ ಬೋಧಿಸುವೆನು ಎಂದು ಹೇಳಿ ಹೊರಟು ಹೋದನು. ಕೆಲಹೊತ್ತಿನ ಮೇಲೆ ಬ್ರಾಹ್ಮಣನು ಮನೆಗೆ ಬಂದು ಹೆಂಡತಿಯ ಸಂಗಡ ಬಡಿದಾಡಲಾರಂಭಿಸಿ ನಾನು ಸಂತೋಬನಂತೆ ವಿರಕ್ತನಾಗುತ್ತೇನೆ ಎಂದು ನುಡಿದನು. ಆ ಕೂಡಲೆ ಆತನ ಹೆಂಡತಿಯು ನಿರ್ಭಯದಿಂದ ಅವಶ್ಯವಾಗಿ ವಿರಕ್ತರಾಗಿರಿ; ಎಂದು ಹೇಳಿ ಬಿಟ್ಟಳು. ಬ್ರಾಹ್ಮಣನು ಉಪಾಯಗಾಣದೆ ದೋತರವನ್ನೂ ತಂಬಿಗೆಯನ್ನೂ ತಕ್ಕೊಂಡು ಮನೆಯಿಂದ ಹೊರಟು ಸಂತೋಬನ ಹತ್ತರ ಬಂದು ನಾನು ವಿರಕ್ತನಾಗಿದ್ದೇನೆ ನನಗೆ ಉಪದೇಶಕೊಡಿರಿ ಎಂದು ಕೇಳಿದನು. ಸಂತೋಬನು ಆತನನ್ನು ಹತ್ತರ ಇಟ್ಟುಕೊಂಡು ಅವನ ತಂಬಿಗೆಯನ್ನೂ ದೋತರವನ್ನೂ ಇಸಗೊಂಡು ನೆರೆಹಳ್ಳಿಗೆ ಭಿಕ್ಷೆಗೆ ಕಳಿಸಿದನು. ಬ್ರಾಹ್ಮಣನು ಭಿಕ್ಷೆಮಾಡಿಕೊಂಡು ಬರುವಷ್ಟರಲ್ಲಿ ಅವನ ತಂಬಿಗೆಯನ್ನು ನದಿಯಲ್ಲಿ ಬೀಸಾಟಬಿಟ್ಟಿದ್ದನು. ದೋತರವನ್ನು ಹರಿದು ಚಲ್ಲಿದನು. ಬ್ರಾಹ್ಮಣನು ಬಿಸಲುಹತ್ತಿ ಬಂದನು. ತಿನ್ನಲಿಕ್ಕೆ ಅಹಾರವಿಲ್ಲ. ಸಂತೋಬನು ಬೇವಿನ ಎಲೆ ತಿನ್ನಲಾರಂಭಿಸಿದನು. ಬ್ರಾಹ್ಮಣನು ಬೇವಿನ ಎಲೆ ತಿನ್ನಹೋದನು. ಆದರೆ ಅವನಿಂದ ತಿನ್ನಲಿಕ್ಕಾಗಲಿಲ್ಲ. ಮನೆಯಲ್ಲಿ ರೊಟ್ಟೀ ಹಿಂಡಿಯನ್ನಾದರೂ ತಿನ್ನುತ್ತಿದ್ದೆನು. ಹೊದ್ದುಕೊಳ್ಳಲಿಕ್ಕೆ ದೋತರವಿಲ್ಲ

ಇದೇನು ಬಂತು ಪೇಚಾಟವೆಂದು ಬ್ರಾಹ್ಮಣನು ಚಡಪಡಿಸ ಹತ್ತಿದನು. ಇನ್ನು ಮನೆಗೆ ಹೋದರೆ ಹೆಂಡತಿಯು ಮನೆಯಲ್ಲಿಟ್ಟುಕೊಳ್ಳುವದಿಲ್ಲ. ಊರಲ್ಲಿ ಭಿಕ್ಷೆಬೇಡ ಹೋದರೆ ಜನರೂ ಛೀಥೂ ಮಾಡುವರು. ಮುಂದೆ ನನ್ನ ಗತಿಯೇನೆಂದು ಅವನು ದೊಡ್ಡ ದನಿ ತೆಗೆದು ಅಳಲಾರಂಭಿಸಿದನು. ಆಗ ಸಂತೋಬನು ನಕ್ಕು—ಬ್ರಾಹ್ಮಣನೇ ವೈರಾಗ್ಯವನ್ನು ತಾಳುವದು ಹಾದಿಯ ಮೇಲೆ ಬಿದ್ದಿಲ್ಲ. ಇನ್ನು ಮುಂದೆ ಹೆಂಡತಿಯ ಕೂಡ ಬಡಿದಾಡದೆ ಚನ್ನಾಗಿ ಸಂಸಾರ ಮಾಡುತ್ತೇನೆಂದು ಆಣೆ ಇಟ್ಟುಕೋ ಅಂದರೆ ನಾನು ನಿನ್ನನ್ನು ಮನೆಗೆ ಕರೆದುಕೊಂಡು ಹೋಗಿ ನಿನ್ನ ಹೆಂಡತಿಯು ನಿನ್ನನ್ನು ಸ್ವೀಕಾರ ಮಾಡುವಂತೆ ಮಾಡುತ್ತೇನೆ ಎಂದು ನುಡಿದನು. ಬ್ರಾಹ್ಮಣನು ಅದಕ್ಕೆ ಒಪ್ಪಿಕೊಂಡನು. ಆಗ ಸಂತೋಬನು ಬ್ರಾಹ್ಮಣನೊಡನೆ ಆತನ ಮನೆಗೆ ಹೋಗಿ ಆತನ ಹೆಂಡತಿಗೆ ಹೇಳತಕ್ಕದ್ದನ್ನು ಹೇಳಿದನು. ಗಂಡನು ತಿರುಗಿ ಬಂದದಕ್ಕೆ ಆ ಸಾಧ್ವಿಗೆ ಪರಮಾನಂದವಾಯಿತು. ಮುಂದೆ ಆ ಬ್ರಾಹ್ಮಣನು ಹೆಂಡತಿಯ ಕೂಡ ಬಡಿದಾಡದೆ ಚನ್ನಾಗಿ ಸಂಸಾರವ ಮಾಡಿಕೊಂಡು ಹೋದನು.

## ವಿಸೋಬಾ ಸರಾಫ



ಶ್ರೀಕ್ಷೇತ್ರ ಪಂಢರಪುರದಲ್ಲಿ ವಿಸೋಬಾಸರಾಫನೆಂಬ ಮಹಾಸಾಧುವಿದ್ದನು; ಈತನು ಗರ್ಭಶ್ರೀಮಂತನು; ಸರಾಫಿಯ ಉದ್ಯೋಗದಿಂದ ಈತನ ಪೂರ್ವಜರು ವಿಪುಲಧನವನ್ನು ಸಂಪಾದಿಸಿದ್ದರು. ವಿಸೋಬನು ಪರಮ ದಯಾಳುವೂ ಉದಾರನೂ ಆಗಿದ್ದನು. ಆತನು ಯಾಚಕರ ತೃಪ್ತಿಯನ್ನು ಮಾಡುತ್ತಿದ್ದನು. ಯಾಚಕರು ಒಂದುದಿನವಾದರೂ ಅವನ ಬಾಗಿಲವಿಂದ ಭಿಕ್ಷೆಯಿಲ್ಲದೆ ತಿರುಗಿ ಹೋಗಲಿಲ್ಲ. ಸಮಸ್ತ ಯಾಚಕರೂ ತೃಪ್ತರಾಗಿ ಹೋಗುತ್ತಿದ್ದರು. ಹೀಗೆ ದಾನಶೂರನಾದ ವಿಸೋಬನು ಯಾಚಕರನ್ನು ತೃಪ್ತಿಮಾಡುವದರಲ್ಲಿ ಸಂಪೂರ್ಣ ಧನವನ್ನು ಕಳೆದನು. ವಿಸೋಬನು ಬಡವನಾದನು. ಆತನು ಸರ್ವದಾ ಪಾಂಡುರಂಗನ ಭಜನೆಯಲ್ಲಿಯೇ ರತನಾಗಿರುತ್ತಿದ್ದನು. ಮನೆಯೊಳಗಿನ ಸಂಪತ್ತು ಹೋದರೂ ಆತನ ಹೆಂಡತಿಯು ಸ್ವಲ್ಪವೂ ಅಸಮಾಧಾನ ಪಡಲಿಲ್ಲ. ಆಕೆಯು ಮಹಾಪತಿವ್ರತೆಯಾಗಿದ್ದಳು. ವಿಸೋಬನಂತೂ ಜ್ಞಾನಸಂಪನ್ನನಾಗಿದ್ದನು.

ಕೈಯೊಳಗಿನ ಧನವು ತೀರಿದಬಳಿಕ ವಿಸೋಬನು ಕೋಸಗ್ರಾಮದ ಒಬ್ಬ ಪಠಾಣನಲ್ಲಿ ಸಾಲ ತೆಗೆದು ಯಾಚಕರನ್ನು ತೃಪ್ತಿಗೊಳಿಸಲಾರಂಭಿಸಿದನು ಹೀಗೆ ಆತನು ಸಾಲಮಾಡಹತ್ತಲು, ಅದು ಏಳು ನೂರರವರೆಗೆ ಬಂದಿತು. ಜನರು ಕುಚೇಷ್ಟೆ ಮಾಡಲಾರಂಭಿಸಿದರು. ಧನ ಸಂಗ್ರಹ ಮಾಡಿದವರು ವಿಸೋಬನ ಈ ಹರಕ ಸಂಸಾರವನ್ನು ನೋಡಿ ಕೈ ಹೊಡೆದು ನಗಲಾರಂಭಿಸಿದರು. ಕೆಲವರು ವಿಸೋಬನಿಗೆ ಮೂರ್ಖನೆಂದು ಅಂದರು. ಅನೇಕ ಜನರು ಅನೇಕ ವಿಧವಾಗಿ ಮಾತನಾಡಲಾರಂಭಿಸಿದರು. ಯಾರು ಏನು ಮಾತನಾಡಿದರೂ, ವಿಸೋಬನು ಆ ಕಡೆಗೆ ಲಕ್ಷ್ಯಗೊಡಲಿಲ್ಲ. ಪಾಂಡುರಂಗನ ಭಜನೆಯಲ್ಲಿಯೇ ಮಗ್ನನಾಗಿದ್ದನು. ಜನರ ದೃಷ್ಟಿಯಿಂದ ವಿಸೋಬನು ದರಿದ್ರನಾಗಿದ್ದರೂ ನಿಜವಾದ ದೈವಶಾಲಿಯು ಅವನೇ ಆಗಿದ್ದನು. ಯಾಕಂದರೆ ಐಶ್ವಪತಿಯಾದ ಪಾಂಡುರಂಗನು ಸರ್ವದಾ ಅವನ ಹೃದಯದಲ್ಲಿ ವಾಸಮಾಡಿದ್ದನು. ಯಾರು ಲಕ್ಷ್ಮೀಪತಿಯನ್ನೇ ಹೃದಯದಲ್ಲಿ ಧರಿಸಿಕೊಂಡಿರುವರೋ, ಅವರ ಭಾಗ್ಯವನ್ನು ವರ್ಣಿಸುವರಾರು? ಆ ಮಹನೀಯರ ಭಾಗ್ಯವನ್ನು ವರ್ಣಿಸುವದು ಆದಿಶೇಷನಿಂದಲೂ ಆಗದು. ವಸ್ತುಸ್ಥಿತಿಯು ಹೀಗಿದ್ದರೂ ಜನರು ವಿಸೋಬನ ಪುಣ್ಯಸಂಚಯವನ್ನು ತಿಳಿಯದೆ, ವಿಷಯಲಂಪಟರಾದ ತಮ್ಮಂತೆ ಆತನೂ ಸಂಸಾರದೊಳಗಿನ ಹುಳವಾಗಲಿಲ್ಲೆಂದು ಬಿಂಕದ ಮಾತುಗಳನ್ನಾಡಲಾರಂಭಿಸಿದರು. ಆದರೆ ಮಹಾ ಜ್ಞಾನಿಯಾದ ವಿಸೋಬನು ಅವರ ಬಿಂಕದ ಮಾತುಗಳನ್ನು ಕೇಳಿ ಅವರ ಅಜ್ಞಾನಕ್ಕೆ ನಗುತ್ತಿದ್ದನಲ್ಲದೆ ತನ್ನ ಅವಸ್ಥೆಯು ಹೀಗಾಯಿತೆಂದು ವ್ಯಸನಪಡುತ್ತಿರಲಿಲ್ಲ. ನಿಜವಾದ ಭಗವದ್ಭಕ್ತನು ನಿರ್ವಿಕಾರ ಸ್ಥಿತಿಯಲ್ಲಿಯೇ ಇರುವನು. ಅವನಿಗೆ ವಿಕಾರವು ಎಂದೂ ಪ್ರಾಪ್ತವಾಗಲಾರದು. ಇರಲಿ.

ವಿಸೋಬನ ವಿಷಯವಾಗಿ ಕುಚೇಷ್ಟೆಯನ್ನೆಬ್ಬಿಸಿದ ದುರ್ಜನರು ಕೋಸಗ್ರಾಮಕ್ಕೆ ಹೋಗಿ ಸಾವುಕಾರನಾದ ಪಠಾಣನಿಗೆ ವಿಸೋಬನು ದಿವಾಳಿ ತೆಗೆದಿರುವನು. ಅವನು ಇನ್ನು ಮುಂದೆ ನಿನಗೆ ಹಣಕೊಡಲಾರನು. ಅವನಿಂದ ನೀನು ಕಾಗದ ಬರಿಸಿಕೊಂಡಿದ್ದರೂ ಅದು ವ್ಯರ್ಥವೇ ಸರಿ ಎಂದು ಚಾಡಿಯನ್ನು ಹೇಳಿದರು. ತಾನು ಸಾಲಕೊಟ್ಟ ಕುಳವು ದಾರಿದ್ರ್ಯಾವಸ್ಥೆಗೆ ಬಂದಿದ್ದು ಹಣವಸೂಲಾಗುವ ಲಕ್ಷಣವಿಲ್ಲೆಂಬ ಸುದ್ದಿಯು ಹತ್ತಲು ಪಠಾಣನು ಗಡಬಡಿಸಿದನು. ಸಾವುಕಾರರ ಜೀವನವು ಬಡ್ಡಿಯ ಹಣದ ಮೇಲೆಯೇ ಅವಲಂಬಿಸಿರುವದರಿಂದ ಅವರು ನಿರಾತಂಕವಾಗಿ ಬಡ್ಡಿಬರುವ ಕುಳವನ್ನು ನೋಡುವರು. ಪಠಾಣನ

ಕುಳವು ಕೇವಲ ಒಡ್ಡಿಯನ್ನು ಕೊಡುವದೊತ್ತಟ್ಟಿಗಿರಲಿ, ಮುದ್ದಲಹಣವನ್ನು ಕೂಡಾ ಮುಟ್ಟಿಸುವಂತಿಲ್ಲವೆಂಬದು ತಿಳಿದದ್ದರಿಂದ ಅವನಲ್ಲಿ ಗಡಬಡಿಕೆಯು ಹುಟ್ಟಿದ್ದು ಸ್ವಾಭಾವಿಕವೇ ಸರಿ. ಆತನು ಲಗಬಗೆಯಿಂದ ಪಂಢರಪುರಕ್ಕೆ ಬಂದು ವಿಸೋಬನನ್ನು ಹಿಡಿದು ನಮ್ಮ ರೂಪಾಯಿಗಳನ್ನು ಕೊಟ್ಟು ಮುಂದಕ್ಕೆ ಹೆಜ್ಜೆಯನ್ನಿಡು ಎಂದು ಗಂಟುಬಿದ್ದನು. ಯಾಚಕರಿಗೆ ದ್ರವ್ಯಕೊಟ್ಟು ಕೊಟ್ಟು ತೀರ ಬಡವನಾಗಿದ್ದ ವಿಸೋಬನು ಸಾವುಕಾರನ ಗಂಟನ್ನು ಕೊಡಲಸಮರ್ಥ ನಾದನು. ಆತನಿಗೆ ಬಹಳ ಯೋಚನೆಯುಂಟಾಯಿತು. ಕೊನೆಗೆ ಅವನು ಸಾವುಕಾರನ ಉಪದ್ರವಕ್ಕೆ ಬೇಸತ್ತು ಇವೊತ್ತಿನಿಂದ ಏಳು ದಿನಗಳಲ್ಲಿ ಹಣ ಮುಟ್ಟಿಸುತ್ತೇನೆಂದು ಹೇಳಿದನು. ಸಾವುಕಾರನಿಗೆ ಆತನ ಮಾತು ನಂಬಿಗೆ ಯಾಗಲಿಲ್ಲ. ಆಗ ಅವನು ನಾಲ್ಕುಜನ ಸಾಕ್ಷೀದಾರರನ್ನು ಕರೆದು ಅವರೆದು ರಿಗೆ ವಿಸೋಬನಿಂದ ವಚನ ತಕ್ಕೊಂಡು ಹೊರಟು ಹೋದನು. ಆರುದಿನಗಳ ವರೆಗೆ ವಿಸೋಬನು ನಿಶ್ಚಿಂತೆಯಿಂದಿದ್ದನು. ಅವನು ಪಾಂಡುರಂಗನ ಭಜನೆಯು ಹೊರತು ಸಾಲತೀರಿಸಲಿಕ್ಕೆ ಬೇರೊಂದು ಉಪಾಯವನ್ನು ಮಾಡಲಿಲ್ಲ. ಏಳ ನೆಯ ದಿನ ಆತನಿಗೆ ದೊಡ್ಡಚಿಂತೆಯುತ್ಪನ್ನವಾಯಿತು. ಈ ದಿನ ಪಠಾಣನಿಗೆ ರೂಪಾಯಿಗಳನ್ನು ಕೊಡುವ ದಿವಸವಿದ್ದು, ರೂಪಾಯಿಗಳನ್ನು ಹ್ಯಾಗೆ ಮುಟ್ಟಿ ಸಲಿ? ಎಂದು ಯೋಚಿಸಲಾರಂಭಿಸಿದನು. ಹೇಳಿದ ವಚನವನ್ನು ತಪ್ಪಿಸುವ ದೆಂದರೆ ಆತನಿಗೆ ಪ್ರಾಣಾಂತ ಸಮಯವೇ ಪ್ರಾಪ್ತವಾದಂತಾಯಿತು.

ಭಕ್ತನಿಗೆ ಉಂಟಾದ ಈ ಚಿಂತೆಯಿಂದ ಪಾಂಡುರಂಗನ ಚಿತ್ತವು ಚಂಚಲ ವಾಯಿತು. ಕೂಡಲೆ ಆತನು ವಿಸೋಬನ ಪೂರ್ವದ ಗುಮಾಸ್ತನ ವೇಷಧರಿಸಿ ಕೋಸಗ್ರಾಮದ ಪಠಾಣನ ಬಳಿಗೆ ಹೋಗಿ—ಸಾವುಕಾರನೇ, ನಾನು ವಿಸೋಬಾ ಸರಾಫನ ಗುಮಾಸ್ತನು. ನಮ್ಮ ಯಜಮಾನನು ಎಂದೂ ವಚನ ತಪ್ಪಿಸುವವ ನಲ್ಲ. ನಿನ್ನ ಸಾಕ್ಷೀದಾರರನ್ನು ಕರೆ; ಅವರೆದುರಿಗೆ ನಿನ್ನ ಹಣವನ್ನು ಒಪ್ಪಿಸು ತ್ತೇನೆ. ನಮ್ಮ ವಿಸೋಬನ ಕಾಗದವನ್ನು ತಿರುಗಿ ನನಗೆ ಕೊಡು ಎಂದು ನುಡಿದನು. ಹಣಬಂದರೆ ಸಾಕೆಂದು ಕುಳಿತಿದ್ದ ಪಠಾಣನು ಕೂಡಲೆ ಸಾಕ್ಷೀ ದಾರರನ್ನು ಕರೆದು ವಿಸೋಬನ ಹಣದ ಲೆಕ್ಕಮಾಡಿದನು. ಮುದ್ದಲು ಹಾಗು ಬಡ್ಡೀ ಕೂಡಿ ಆದಷ್ಟು ಹಣವನ್ನು ಗುಮಾಸ್ತನು ಎಣಿಸಿದನು. ಪಠಾಣನು ಹಣವನ್ನು ತಕ್ಕೊಂಡು ವಿಸೋಬನ ಕಾಗದವನ್ನು ತಿರುಗಿಕೊಟ್ಟನು.

ಈ ಮೇರೆಗೆ ಗುಮಾಸ್ತ ವೇಷಧಾರಿಯಾದ ಪಾಂಡುರಂಗನು ಭಕ್ತನ ಕಾಗದವನ್ನು ತಿರುಗಿ ತಕ್ಕೊಂಡು ಪಂಢರಪುರಕ್ಕೆ ಬಂದನು. ಬಳಿಕ ಅವನು ಅದರ ತಲೆಯನ್ನು ಹರಿದು ವಿಸೋಬನು ಪಾರಾಯಣ ಮಾಡುತ್ತಿರುವ ಭಗವದ್ಗೀತೆಯಲ್ಲಿಟ್ಟನು. ಇತ್ತ ವಿಸೋಬನು ಮಧ್ಯಾಹ್ನ ಸಮಯವಾಗಲು, ಸ್ನಾನ ಮಾಡಿ ಪಾರಾಯಣಕ್ಕೆ ಕುಳಿತನು. ಅವನು ಭಗವದ್ಗೀತೆಯನ್ನು ಕೈಯಲ್ಲಿ ತಕ್ಕೊಂಡು ತಾನು ಓದಬೇಕಾಗಿದ್ದ ಪುಟವನ್ನು ತೆಗೆಯಲು, ಅದರಲ್ಲಿ ತಲೆಹರಿದ ಖತ್ತು ಕಂಡು ಬಂದಿತು. ಅವನು ಆಶ್ಚರ್ಯದಿಂದ ಓದಿ ನೋಡಲು, ತಾನು ಹಿಂದಕ್ಕೆ ಪಠಾಣನಿಗೆ ಬರೆದುಕೊಟ್ಟ ಕಾಗದವಾಗಿತ್ತು. ನಾನು ಹಣವನ್ನು ಕೊಡದೆ, ಈ ಖತ್ತು ಇಲ್ಲಿಗೆ ಹ್ಯಾಗೆ ಬಂತೆಂಬದು ಅವನಿಗೆ ತಿಳಿಯದಾಯಿತು. ಆಗ ಅವನು ತನ್ನ ಹೆಂಡತಿಯನ್ನೂ ಮಕ್ಕಳನ್ನೂ ಕರೆದು ಈ ಮಾತಿನ ವಿಷಯವಾಗಿ ಕೇಳಿದನು. ಆದರೆ ಈ ಸಂಗತಿಯು ತಮಗೆ ಗೊತ್ತಿಲ್ಲವೆಂದು ಎಲ್ಲರೂ ಹೇಳಿದರು. ವಿಸೋಬನು ಮತ್ತಿಷ್ಟು ಗೊಂದಲದಲ್ಲಿ ಬಿದ್ದನು. ಬಳಿಕ ಅವನು ಆ ಖತ್ತನ್ನು ತಕ್ಕೊಂಡು ಕೋಸಗ್ರಾಮಕ್ಕೆ ಹೋಗಿ ಪಠಾಣನೇ, ನಿನ್ನ ಹಣವು ಮುಟ್ಟದೆ ಇರಲು ನಿನ್ನ ಖತ್ತು ನನ್ನ ಬಳಿಗೆ ಹ್ಯಾಗೆ ಬಂದಿತು? ನಿನ್ನ ಖತ್ತನ್ನು ನೀನು ತಕ್ಕೋ ಎಂದು ನುಡಿದು ಕೊಟ್ಟನು. ಪಠಾಣನು ವಿಸ್ಮಿತನಾಗಿ— ಗೃಹಸ್ಥನೇ, ಇಂದೇ ಮುಂಜಾನೆ ನಿನ್ನ ಗುಮಾಸ್ತನು ನಮಗೆ ಎಲ್ಲ ಹಣವನ್ನು ಕೊಟ್ಟು, ಈ ಖತ್ತನ್ನು ತಿರುಗಿ ಒಯ್ದಿರುತ್ತಾನೆ. ನೀನು ಇನ್ನು ನಮಗೆ ಕೊಡಬೇಕಾದದ್ದು ಏನೂ ಇರುವದಿಲ್ಲ, ಎಂದನು. ಸಾವುಕಾರನ ಈ ಮಾತು ವಿಸೋಬನಿಗೆ ನಂಬಿಗೆಯಾಗಲಿಲ್ಲ. ಆಗ ಸಾವುಕಾರನು ಸಾಕ್ಷೀದಾರರನ್ನು ಕರೆದನು. ಅವರು ಅದರಂತೆ ನುಡಿಯಲು, ವಿಸೋಬನು ಗೊಂದಲದಲ್ಲಿ ಬಿದ್ದು, ಪುನಃ ಪಂಢರಪುರಕ್ಕೆ ಬಂದು ತನ್ನ ಗುಮಾಸ್ತನ ಮನೆಗೆ ಹೋಗಿ ವಿಚಾರಿಸಿದನು. ಅವನು ಈ ಸಂಗತಿಯು ತನಗೆ ಸುತ್ರಾಮ ಗೊತ್ತಿಲ್ಲವೆಂದು ಕಿವಿಯ ಮೇಲೆ ಕೈಯಿಟ್ಟುಕೊಂಡನು. ಆಗ ವಿಸೋಬನಿಗೆ ಇದು ಭಗವಂತನ ಕರಾಮತಿಯೆಂಬನು ಹೊಳೆಯಿತು. ಆಗ ಅವನ ಕಂಠವು ಬಿಗಿದು ಬಂದಿತು. ದೇವಾ, ನನ್ನಂಥ ಅಧಮನ ಸಲುವಾಗಿ ಗುಮಾಸ್ತನಾಗಿ ಪಠಾಣನ ಕಡೆಗೆ ಹೋದೆಯಾ? ಎಂದು ಬಗೆಬಗೆಯಾಗಿ ಪ್ರಾರ್ಥಿಸಿದನು. ಪ್ರತ್ಯಕ್ಷ ಪಾಂಡುರಂಗನೇ ವಿಸೋ

ಬನ ಋಣವನ್ನು ತೀರಿಸಿ ಬಂದನೆಂಬ ಸುದ್ದಿಯು ಊರಲ್ಲಿ ಹಬ್ಬಲು ನಿಂದಕರು ಮುಖಭಂಗಿತರಾದರು. ಅವರು ಆತನಲ್ಲಿ ಭಯ-ಭಕ್ತಿಗಳನ್ನು ತಾಳಿದರು.

# ಮೃತ್ಯುಂಜಯ.

ಬೀದರದ ಗಾದಿಯ ಮೇಲೆ ಕುಳಿತು ರಾಜ್ಯಭಾರ ಮಾಡಿದವರಲ್ಲಿ ಶಾಂತ ಬ್ರಾಹ್ಮಣೀ ಎಂಬವನೊಬ್ಬನು. ಈತನು ಒಂದು ದಿನ ಏಕಾಂತದಲ್ಲಿ ಪ್ರಿಯ ತಮೆಯೊಡನೆ ಬಾಳೇಹಣ್ಣುಗಳನ್ನು ತಿನ್ನುತ್ತ ಕುಳಿತಿದ್ದನು. ಒಳಗೆ ಯಾರನ್ನೂ ಬಿಡಕೂಡದೆಂದು ಕಾವಲುಗಾರನಿಗೆ ಕಟ್ಟಪ್ಪಣೆಯಾದದ್ದರಿಂದ ಅಲ್ಲಿ ಯಾರೂ ಪ್ರವೇಶ ಮಾಡುವ ಹಾಗಿದ್ದಿಲ್ಲ. ರಾಣಿಯು ಹಣ್ಣನ್ನು ಸುಲಿದು ಸಿಪ್ಪಿಗಳನ್ನು ಕಿಡಕಿಯ ಮಾರ್ಗವಾಗಿ ಹೊರಗೆ ಚಲ್ಲುತ್ತಿದ್ದಳು. ಹೀಗೆ ಚಲ್ಲ ಚಲ್ಲುತ್ತ ಆಕೆಯು ಸಹಜವಾಗಿ ಕಿಡಕಿಯಲ್ಲಿ ಹಣಿಕಿ ನೋಡಿದಳು. ಅಲ್ಲಿಯೊಬ್ಬ ಹುಚ್ಚನು ಸಿಪ್ಪಿಗ ಗಳನ್ನು ತಿನ್ನುತ್ತ ನಿಂತಿರುವನೆಂಬದು ಆಕೆಗೆ ಕಂಡಿತು. ಆಗ ಆಕೆಯು ಆ ಹುಚ್ಚನ ಸಂಗತಿಯನ್ನು ರಾಜನಿಗೆ ಹೇಳಿದಳು. ಒಳಗೆ ಯಾರನ್ನೂ ಬಿಡಕೂಡ ದೆಂದು ಕಟ್ಟಪ್ಪಣೆ ಮಾಡಿರಲು, ಈ ಹುಚ್ಚನು ಹ್ಯಾಗೆ ಬಂದನೆಂದು ರಾಜನು ಸಂತಪ್ತನಾಗಿ ಕಾವಲುಗಾರನನ್ನು ಕರಿಸಿ ಅವನಿಗೆ ಚನ್ನಾಗಿ ಶಿಕ್ಷೆ ಮಾಡಿದನು. ರಾಜದಂಡನೆಯನ್ನು ಹೊಂದಿದ ಕಾವಲುಗಾರನು ಸಂತಪ್ತನಾಗಿ ಆ ಹುಚ್ಚನ ಬಳಿಗೆ ಬಂದು ಅವನನ್ನು ಒಳಿತಾಗಿ ಥಳಿಸಿದನು. ಕಾವಲುಗಾರನು ಎಷ್ಟು ಹೊಡೆದರೂ ಆ ಹುಚ್ಚನು ನಗುತ್ತಲೇ ಇದ್ದನು. ಈ ವಿಚಿತ್ರ ಪ್ರಕಾರವನ್ನು ನೋಡಿ ರಾಜನಿಗೆ ಆಶ್ಚರ್ಯವಾಯಿತು. ಅವನು ಆ ಹುಚ್ಚನನ್ನು ಒಳಗೆ ಕರೆ ಯಿಸಿಕೊಂಡು—ಕಾವಲುಗಾರನು ಎಷ್ಟು ಹೊಡೆದರೂ ನೀನು ನಗುತ್ತಲೇ ಇರುವಿಯಲ್ಲ! ಯಾಕೆ? ಎಂದು ಕೇಳಿದನು.

ಆಗ ಆ ಹುಚ್ಚನು—ರಾಜನೇ, ನಿನ್ನ ಕರ್ಮದ ಬಗ್ಗೆಯೇ ನನಗೆ ನಗೆ ಬಂದಿರುತ್ತದೆ. ಕೇವಲ ಹಣ್ಣಿನ ಮೇಲಿನ ಸಿಪ್ಪೆಯನ್ನು ತಿಂದಮಾತ್ರಕ್ಕೆ ನನಗೆ ಕಾವಲುಗಾರನಿಂದ ಇಷ್ಟು ಹೊಡತಗಳು ಬಿದ್ದವು. ಆದರೆ ನೀನು ಒಳಗಿನ ಹಣ್ಣನ್ನೇ ತಿನ್ನುತ್ತಿರುವೆ ಅಂದ ಬಳಿಕ ನಿನ್ನ ಗತಿಯೇನು? ಒಂದು ಗಳಿಗೆ ರಾಜ

ವಾಡೆಯಲ್ಲಿದ್ದ ಮಾತ್ರದಿಂದ ನನ್ನ ಮೈಮೆತ್ತಗಾಯಿತು. ಆದರೆ ನೀನು ಸರ್ವದಾ ಇಲ್ಲಿಯೇ ಇರುತ್ತೀ ಈ ಬಗ್ಗೆ ನಿನಗೆ ಯಾವ ಶಿಕ್ಷೆಯು ಆಗಬಹುದು? ಇವೇ ವಿಚಾರಗಳು ಮನಸ್ಸಿನಲ್ಲಿ ಬಂದದ್ದರಿಂದ ನಕ್ಕೆನು ಎಂದು ಹೇಳಿದನು. ಹುಚ್ಚನ ಈ ಮಾತುಗಳನ್ನು ಕೇಳಿ ರಾಜನಿಗೆ ಉಪರತಿಯುಂಟಾಯಿತು. ಅವನು ಕೂಡಲೆ ವೈರಾಗ್ಯವನ್ನು ತಾಳಿ ಅರಣ್ಯವನ್ನು ಸೇರಿದನು. ತನ್ನ ಜನ್ಮ ಸಾರ್ಥಕ್ಯವು ಹ್ಯಾಗಾದೀತೆಂದು ಚಿಂತಿಸಲಾರಭಿಸಿದನು. ಆಗ ಅವನಿಗೆ ಪಂಢರಪುರಿಗೆ ಹೋಗುವ ವಾರಕರೀ ಜನರು ಭೆಟ್ಟಿಯಾದರು. ಅವರ ಸಂಗಡ ಅವನು ಪಂಢರಪುರಕ್ಕೆ ಹೋದನು. ಪಾಂಡುರಂಗನ ದರ್ಶನದಿಂದ ಆತನಿಗೆ ಸಮಾಧಾನವಾಯಿತು., . ಬಳಿಕ ಅವನು ದೇವರ ದರ್ಶನವಾಗಬೇಕೆಂದು ನಿಶ್ಚಯವನ್ನು ತಾಳಿ ಉಪವಾಸ ಕುಳಿತನು. ಆಗ ಪಾಂಡುರಂಗನು ಆತನ ಸ್ವಪ್ನದಲ್ಲಿ—ನೀನು ಕಲ್ಯಾಣದಲ್ಲಿರುವ ಸಹಜಾನಂದ ಸ್ವಾಮಿಗಳಿಂದ ಉಪದೇಶಹೊಂದು ಎಂದು ಹೇಳಿದನು. ಮತ್ತು ವಿವೇಕಸಿಂಧುವೆಂಬ ಪುಸ್ತಕಕೊಟ್ಟನು. ರಾಜನು ಎಚ್ಚತ್ತು ನೋಡಲು ತನ್ನ ಕೈಯೊಳಗೆ ಪುಸ್ತಕವಿತ್ತು. ಅವನು ಸಂತೋಷ ಹೊಂದಿ ಕಲ್ಯಾಣಕ್ಕೆ ಹೋದನು. ಅಲ್ಲಿ ಆತನಿಗೆ ಆ ಸ್ವಾಮಿಗಳ ದರ್ಶನವಾಗಲಿಲ್ಲ. ಬಳಿಕ ಅವನು ತಿರುಗಿ ಪಂಢರಪುರಿಗೆ ಬಂದನು. ಪಂಢರಪುರದಲ್ಲಿ ಆತನಿಗೆ ಸಹಜಾನಂದರ ಭೆಟ್ಟಿಯಾಯಿತು. ಆಗ ಅವನು ಪಾಂಡುರಂಗನ ದೃಷ್ಟಾಂತವನ್ನು ಹೇಳಲು ಆ ಸ್ವಾಮಿಗಳು ಅವನಿಗೆ ಉಪದೇಶವನ್ನು ಕೊಟ್ಟು ಆತನಿಗೆ ಮೃತ್ಯುಂಜಯನೆಂದು ಹೆಸರನ್ನಿಟ್ಟರು.

ಹೀಗೆ ಮೃತ್ಯುಂಜಯನು ಗುರುಕೃಪೆಗೆ ಪಾತ್ರನಾಗಿ ಪಂಢರಪುರಿಯಲ್ಲಿ ವಾಸ ಮಾಡಿದನು. ಭವರಾಯನೆಂಬ ಜಂಗಮನು ಆತನಿಗೆ ಶಿಷ್ಯನಾದನು. ಮುಸಲ್ಮಾನನಿಂದ ಭವರಾಯನು ಉಪದೇಶ ಹೊಂದಿದನೆಂದು ಜಂಗಮರೆಲ್ಲರೂ ಭವರಾಯನಿಗೆ ಬಹಿಷ್ಕಾರವನ್ನು ಹಾಕಿದರು. ಭವರಾಯನು ಜಂಗಮರೆಲ್ಲರೂ ತನಗೆ ತೊಂದರೆ ಕೊಟ್ಟದ್ದನ್ನು ತನ್ನ ಗುರುಗಳಿಗೆ ಹೇಳಿದನು. ಹೀಗಿರಲು ಕಾಶೀಪತಿ ನಾಮಕ ಓರ್ವ ಶಿವಭಕ್ತನಿದ್ದನು. ಆತನು ಜಂಗಮಾರಾಧನೆಯನ್ನು ನಡಿಸಿದನು. ಆತನ ಆ ಸಮಾರಾಧನೆಗೆ ಹತ್ತುಸಾವಿರ ಜಂಗಮರು ಕೂಡಿದರು. ಭವರಾಯನ ನಿಂದಕನಾದ ಸಮುಚ್ಚಯನಾಮಕ ಜಂಗಮನೇ ಇವರಲ್ಲಿ ಅಗ್ರಗಣ್ಯನಾಗಿದ್ದನು. ಕಾಶೀಪತಿಯು ಸಮೀಚೀನವಾದ ಅಡಿಗೆಯನ್ನು ಮಾಡಿಸಿದ್ದನು. ಎಲ್ಲ ಜಂಗ

ಸಾಧಿಸುವದೇ ಇರುವದರಿಂದ ಅದನ್ನು ಸಾಧಿಸಿಕೊಂಡ
ರಿಂದ ಪ್ರಯೋಜನವೇನು? ಯಾವನು ಭಗವಂತನ ಕೃಪೆ
ವ್ಯರ್ಥವಾಗಿ ಆಯುಷ್ಯವನ್ನು ಕಳೆಯುವನೋ ಅವನಿಗೆ
ಹಾಕಬಹುದು. ಎಂಬದಾಗಿ ಗುರೂಪದೇಶ ಮಾಡಿದರು.
ಮಹಾ ಜ್ಞಾನಿಯೂ, ಸಮಭಾವವುಳ್ಳವನೂ, ಸಮರ್ಥನೂ
ಅನುಭವವು ಸಮಸ್ತರಿಗೂ ಬಂದುಹೋಯಿತು. ಎಲ್ಲರೂ
ಕೃಪೆಯಿಂದ ತಮ್ಮ ತಮ್ಮ ಶಿವಲಿಂಗಗಳನ್ನು ಪಡೆದು, ಮ
ಯಕ್ಕೆ ಬಂದು ಯಥಾಸ್ಥಿತವಾಗಿ ಭೋಜನ ಮಾಡಿ ನೃತ್ಯಂ
ವನ್ನು ಮಾಡುತ್ತ ಮನೆಗೆ ಹೊರಟು ಹೋದರು.

ಪ್ರಿಯವಾಚಕರೇ, ಮುಖ್ಯವಾಗಿ ಲಕ್ಷ್ಯದಲ್ಲಿಡತಕ್ಕ
ಯೋಗಕ್ಕಿಂತಲೂ ಭಕ್ತಿಯೋಗವೇ ಶ್ರೇಷ್ಠವಾದದ್ದು; "ಸವ
ತ್ಯಜ್ಯಮಾಮೇಕಂ ಶರಣಂವ್ರಜ" ಎಂದು ಭಗವಂತನು ಹೇಳಿ
ಈ ಭಕ್ತಿಯೋಗದ ಮಹತ್ವವನ್ನು ಸಾರಿ ಹೇಳುತ್ತದೆ. ಕಲಿ
ರಿಗೂ ಸುಲಭಸಾಧ್ಯಯೋಗವೆಂದರೆ ಈ ಭಕ್ತಿಯೋಗವೆಂದೇ
ಈ ಯೋಗವನ್ನು ಸಾಧಿಸಿ ಸಮಸ್ತರೂ ಧನ್ಯರಾಗತಕ್ಕದ್ದು.



ಸಂಪೂರ್ಣ.

ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ವ. ಕಾಳೆ
ಇವರಿಂದ ಮುದ್ರಿಸಲ್ಪಟ್ಟಿತು.

ರು. ಎಲ್ಲ ಪದಾರ್ಥಗಳನ್ನು ಬಡಿಸುವದಾಯಿತು. ಆಗ
ತಿಯಂತೆ ಶಿವಲಿಂಗಕ್ಕೆ ಎಡೆಯನ್ನು ಸಮರ್ಪಿಸಬೇಕೆಂದು
ಕೊಂಡನು. ಆಗ ಜಂಗಮರೆಲ್ಲರೂ ವಸ್ತ್ರಗಳನ್ನು ಬಿಚ್ಚಿ
ಕ್ಕೊಳ್ಳಬೇಕೆಂದು ನೋಡಲು ಯಾರ ಕೊರಳಲ್ಲಿಯೂ
ಬ್ರಾಹ್ಮಣರ ಕೊರಳಲ್ಲಿಯ ಜನಿವಾರವು ಹೋದರೆ ಅವರು
ಪ್ರಾಯಶ್ಚಿತ್ತವನ್ನು ಹೊಂದಬೇಕಾಗುವದೋ ಅದರಂತೆ
ಹೋದರೆ ಅವರು ಧಾರ್ಮಿಕಪದ್ಧತಿಯಂತೆ ಯೋಗ್ಯಪ್ರಾಯ
ದಬೇಕಾಗುವದು. ಆದ್ದರಿಂದ ಸಮಸ್ತರಿಗೂ ಚಿಂತೆಯುತ್ಪನ್ನ
ಪತಿಯು ಧೂರ್ತನಿದ್ದನು. ಅವನು ಕೂಡಲೆ ಲಿಂಗಗಳು ಮಾಯ
ತಿಳಿದು ನೀವು ಭವರಾಯನಿಗೆ ಬಹಿಷ್ಕಾರ ಹಾಕಿದ್ದರಿಂದ ನಿಮ್ಮ
ರುವವೆಂದು ಹೇಳಿದನು. ಆ ಕೂಡಲೆ ಸರ್ವರಿಗೂ ಪಶ್ಚಾ
ಸರ್ವರು ಭವರಾಯನ ಗುರುಗಳಾದ ಮೃತ್ಯುಂಜಯನೆಡೆಗೆ
ಡಬೇಕೆಂದು ನಿರ್ಧರಿಸಿದರು. ಅದರಂತೆ ಅವರು ಮೃತ್ಯುಂಜ
ಗೆ ಪ್ರಾರ್ಥಿಸಲು ಅವರಲ್ಲಿ ನಿರಭಿಮಾನವು ಉತ್ಪನ್ನವಾದದನ್ನು
ಬಿಟ್ಟು ಆತನು ತನ್ನ ಬಳಿಯಲ್ಲಿರುವ ಸಿದ್ಧಾಂತ, ವೇದಾಂತ
ನಾಯಿಗಳನ್ನು ಕರೆದು ಪ್ರತಿಯೊಂದರ ಬಾಯಿಂದ ಐದೈದು
ನ್ನು ಕಾರಿಸಿದನು. ಈ ಅದ್ಭುತಚಮತ್ಕಾರವನ್ನು ನೋಡಿ
ಮೃತ್ಯುಂಜಯನಲ್ಲಿ ವಿಶ್ವಾಸವನ್ನು ತಾಳಿದರು.
ತ್ಯುಂಜಯನು ಎಲ್ಲ ಜಂಗಮರನ್ನು ಕುರಿತು—ಯಾವನೂ
ವನನ್ನೂ ನಿಂದಿಸಬಾರದು. ಭಗವದ್ಭಕ್ತಿಯೆಂಬದು ಒಂದೇ
ತು ಹಲವು ಬಗೆಗಳಿಂದಿರುವದಿಲ್ಲ. ಜಾತಿಗಳು ಕಲಹಕ್ಕಾ
ಗಲು ಇರುವದಿಲ್ಲ. ವಿವಿಧ ಉದ್ಯೋಗಸ್ಥರಿಗೆ ಈಶ್ವರಾರಾಧನೆ
ಧನವಾಗಬೇಕೆಂದಿರುವದು. ಇಷ್ಟರಿಂದ ಯಾವನಾದರೂ
ತಾಳಿ ಅನ್ಯರನ್ನು ಹಳಿಯುವದು ಶ್ರೇಯಸ್ಕರವಲ್ಲ. ಸಮಸ್ತರೂ
ಂದ ವರ್ತಿಸಿ ತಮ್ಮ ತಮ್ಮ ಸಾಂಪ್ರದಾಯದಂತೆ ನಡೆಯುವದು
ು. ಯಾವನೊಬ್ಬ ಭಗವದ್ಭಕ್ತನು ತನಗೆ ಇಷ್ಟವಾದ ಬೇರೊಂದು
ಹಿಡಿದು ಭಗವಂತನ ಅನುಗ್ರಹವನ್ನು ಪಡೆದರೆ ಅವನನ್ನು ತಿರಸ್ಕ
ರದು. ಎಲ್ಲ ಧರ್ಮಗಳ ಉದ್ದೇಶವು ಭಗವಂತನ ಕೃಪೆಯನ್ನು

ಹುರು ಬಂದು ಕುಳಿತ

ಕಾಶೀಪತಿಯು ಪದ್ಧ ರು. ಎಲ್ಲ ಪದಾರ್ಥಗಳನ್ನು ಬಡಿಸುವದಾಯಿತು. ಆಗ
ಎಲ್ಲರಿಗೂ ವಿಜ್ಞಾಪಿ ತಿಯಂತೆ ಶಿವಲಿಂಗಕ್ಕೆ ಎಡೆಯನ್ನು ಸಮರ್ಪಿಸಬೇಕೆಂದು
ಲಿಂಗವನ್ನು ಕೈಯ ಕೊಂಡನು. ಆಗ ಜಂಗಮರೆಲ್ಲರೂ ವಸ್ತ್ರಗಳನ್ನು ಬಿಚ್ಚಿ
ಲಿಂಗವಿರಲಿಲ್ಲ. ಲ್ಲಿ ತಕ್ಕೊಳ್ಳಬೇಕೆಂದು ನೋಡಲು ಯಾರ ಕೊರಳಲ್ಲಿಯೂ
ಹ್ಯಾಗೆ ಉಪವಾಸ ಬ್ರಾಹ್ಮಣರ ಕೊರಳಲ್ಲಿಯ ಜನಿವಾರವು ಹೋದರೆ ಅವರು
ಜಂಗಮರ ಲಿಂಗವ ವಿ ಪ್ರಾಯಶ್ಚಿತ್ತವನ್ನು ಹೊಂದಬೇಕಾಗುವದೋ ಅದರಂತೆ
ಶ್ಚಿತ್ತವನ್ನು ಹೊ ಹೋದರೆ ಅವರು ಧಾರ್ಮಿಕಪದ್ಧತಿಯಂತೆ ಯೋಗ್ಯಪ್ರಾಯ-
ವಾಯಿತು. ಕಾಶಿ ದಬೇಕಾಗುವದು. ಆದ್ದರಿಂದ ಸಮಸ್ತರಿಗೂ ಚಿಂತೆಯುತ್ಪನ್ನ
ವಾದದ್ದರ ಕಾರಣ ಪತಿಯು ಧೂರ್ತನಿದ್ದನು. ಅವನು ಕೂಡಲೆ ಲಿಂಗಗಳು ಮಾಯ
ಗತಿಯು ಹೀಗಾ ತಿಳಿದು ನೀವು ಭವರಾಯನಿಗೆ ಬಹಿಷ್ಕಾರ ಹಾಕಿದ್ದರಿಂದ ನಿಮ್ಮ
ತ್ತಾಪವಾಯಿತು ರುವವೆಂದು ಹೇಳಿದನು. ಆ ಕೂಡಲೆ ಸರ್ವರಿಗೂ ಪಶ್ಚಾ
ಹೋಗಿ ಕ್ಷಮೆ ಸರ್ವರು ಭವರಾಯನ ಗುರುಗಳಾದ ಮೃತ್ಯುಂಜಯನೆಡೆಗೆ
ಯನ ಕಡೆಗೆ ಹೋಡಬೇಕೆಂದು ನಿರ್ಧರಿಸಿದರು. ಅದರಂತೆ ಅವರು ಮೃತ್ಯುಂಜ
ನೋಡಿ ಸಂತೋ ಗಿ ಪ್ರಾರ್ಥಿಸಲು ಅವರಲ್ಲಿ ನಿರಭಿಮಾನವು ಉತ್ಪನ್ನವಾದದನ್ನು
ನಾಮಕ ಎರ ಪಟ್ಟು ಆತನು ತನ್ನ ಬಳಿಯಲ್ಲಿರುವ ಸಿದ್ಧಾಂತ, ವೇದಾಂತ
ಸಾವಿರ ಲಿಂಗ ನಾಯಿಗಳನ್ನು ಕರೆದು ಪ್ರತಿಯೊಂದರ ಬಾಯಿಂದ ಐದೈದು
ಸರ್ವ ಜಂಗಮ ನ್ನು ಕಾರಿಸಿದನು. ಈ ಅದ್ಭುತಚಮತ್ಕಾರವನ್ನು ನೋಡಿ
ಬಳಿಕ ಮೃತ್ಯುಂಜಯನಲ್ಲಿ ವಿಶ್ವಾಸವನ್ನು ತಾಳಿದರು.

ಯಾವ ಧ ತ್ಯುಂಜಯನು ಎಲ್ಲ ಜಂಗಮರನ್ನು ಕುರಿತು—ಯಾವನೂ
ಇರುವದೇ ವನನ್ನೂ ನಿಂದಿಸಬಾರದು. ಭಗವದ್ಭಕ್ತಿಯೆಂಬದು ಒಂದೇ
ಗಳಿ, ಪ್ರತಿ ತು ಹಲವು ಬಗೆಗಳಿಂದಿರುವದಿಲ್ಲ. ಜಾತಿಗಳು ಕಲಹಕ್ಕಾ
ಮಾಡಲು ಗಲಿ ಇರುವದಿಲ್ಲ. ವಿವಿಧ ಉದ್ಯೋಗಸ್ಥರಿಗೆ ಈಶ್ವರಾರಾಧನೆ
ದುರಭಿಮಾ ಸಾಧನವಾಗಬೇಕೆಂದಿರುವದು. ಇಷ್ಟರಿಂದ ಯಾವನಾದರೂ
ಬಂಧುಭಾ ತಾಳಿ ಅನ್ಯರನ್ನು ಹಳಿಯುವದು ಶ್ರೇಯಸ್ಕರವಲ್ಲ. ಸಮಸ್ತರೂ
ನಿತವಿರ ಂದ ವರ್ತಿಸಿ ತಮ್ಮ ತಮ್ಮ ಸಾಂಪ್ರದಾಯದಂತೆ ನಡೆಯುವದು
ರ್ಗವ . ಯಾವನೊಬ್ಬ ಭಗವದ್ಭಕ್ತನು ತನಗೆ ಇಷ್ಟವಾದ ಬೇರೊಂದು
ಹೊ ಹಿಡಿದು ಭಗವಂತನ ಅನುಗ್ರಹವನ್ನು ಪಡೆದರೆ ಅವನನ್ನು ತಿರಸ್ಕ
ರದು. ಎಲ್ಲ ಧರ್ಮಗಳ ಉದ್ದೇಶವು ಭಗವಂತನ ಕೃಪೆಯನ್ನು

ಸಾಧಿಸುವದೇ ಇರುವದರಿಂದ ಅದನ್ನು ಸಾಧಿಸಿಕೊಂಡ. ರಿಂದ ಪ್ರಯೋಜನವೇನು? ಯಾವನು ಭಗವಂತನ ಕೃಪೆ ವ್ಯರ್ಥವಾಗಿ ಆಯುಷ್ಯವನ್ನು ಕಳೆಯುವನೋ ಅವನಿಗೆ ಹಾಕಬಹುದು. ಎಂಬದಾಗಿ ಗುರೂಪದೇಶ ಮಾಡಿದರು. ಮಹಾ ಜ್ಞಾನಿಯೂ, ಸಮಭಾವವುಳ್ಳವನೂ, ಸಮರ್ಥನೂ ಅನುಭವವು ಸಮಸ್ತರಿಗೂ ಬಂದುಹೋಯಿತು. ಎಲ್ಲರೂ ಕೃಪೆಯಿಂದ ತಮ್ಮ ತಮ್ಮ ಶಿವಲಿಂಗಗಳನ್ನು ಪಡೆದು, ಮ ಯಕ್ಕೆ ಬಂದು ಯಥಾಸ್ಥಿತವಾಗಿ ಭೋಜನ ಮಾಡಿ ಮೃತ್ಯುಂ ವನ್ನು ಮಾಡುತ್ತ ಮನೆಗೆ ಹೊರಟು ಹೋದರು.

ಪ್ರಿಯವಾಚಕರೇ, ಮುಖ್ಯವಾಗಿ ಲಕ್ಷ್ಯದಲ್ಲಿಡತಕ್ಕ ಯೋಗಕ್ಕಿಂತಲೂ ಭಕ್ತಿಯೋಗವೇ ಶ್ರೇಷ್ಠವಾದದ್ದು; "ಸರ್ವ ತ್ಯಜ್ಯಮಾಮೇಕಂ ಶರಣಂವ್ರಜ" ಎಂದು ಭಗವಂತನು ಹೇಳಿ ಈ ಭಕ್ತಿಯೋಗದ ಮಹತ್ವವನ್ನು ಸಾರಿ ಹೇಳುತ್ತದೆ. ಕಲಿಂ ರಿಗೂ ಸುಲಭಸಾಧ್ಯಯೋಗವೆಂದರೆ ಈ ಭಕ್ತಿಯೋಗವೆಂದೇ ಈ ಯೋಗವನ್ನು ಸಾಧಿಸಿ ಸಮಸ್ತರೂ ಧನ್ಯರಾಗತಕ್ಕದ್ದು.



**ಸಂಪೂರ್ಣ.**

ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಬಿ. ಪ. ಕಾಳೆ ಇವರಿಂದ ಮುದ್ರಿಸಲ್ಪಟಿತು.